# ಪರಿಚಯ

ಶ್ರೀ ರಾಮಕೃಷ್ಣ ಪರಮಹಂಸರ ನೆಚ್ಚಿನ ಶಿಷ್ಯರೂ, ಜಗದ್ವಿಖ್ಯಾತರೂ ಆದ ಸ್ವಾಮಿ ವಿವೇಕಾನಂದರ ಶಿಷ್ಯರು ಸ್ವಾಮಿ ವಿರಜಾನಂದರು. ಬಾಲ್ಯದಿಂದಲೇ ವೈರಾಗ್ಯ ಪರರಾಗಿ ತಮ್ಮ ಹದಿನೇಳನೇ ವಯಸ್ಸಿನಲ್ಲಿಯೇ ೧೮೯೧ ರಲ್ಲಿ ಶ್ರೀ ರಾಮಕೃಷ್ಣಮಠ ಬಾರಾನಗರದಲ್ಲಿರುವಾಗಲೇ ಸೇರಿದರು. ಪರಮಹಂಸರ ಪ್ರತ್ಯಕ್ಷ ಶಿಷ್ಯ ವರ್ಗದವರ ನೇತೃತ್ವದಲ್ಲಿ ಇವರ ಆಧ್ಯಾತ್ಮಿಕ ಜೀವನ ವಿಕಾಸವಾಯಿತು. ಸಂಘಕ್ಕೆ ಸೇರಿದ ಹಲವು ಕಾರ್ಯಕ್ಷೇತ್ರದಲ್ಲಿ ತಮ್ಮ ಸೇವೆಯನ್ನು ಸಲ್ಲಿಸಿದರು. ಇವರ ಸಂಪಾದಕತ್ವದ ನೇತೃತ್ವದಲ್ಲಿಯೇ ಸ್ವಾಮಿ ವಿವೇಕಾನಂದರ ಮೊದಲ ಐದು ಭಾಗ ಉಪನ್ಯಾಸ ಮತ್ತು ಪ್ರಾಚ್ಯ ಪಾಶ್ಚಾತ್ಯ ಶಿಷ್ಯರಿಂದ ಬರೆದ ಸ್ವಾಮಿ ವಿವೇಕಾನಂದರ ಜೀವನ ಬೆಳಕಿಗೆ ಬಂದಿತು. ಕ್ರಿ. ಶ. ೧೯೩೮ ರಿಂದ ಕ್ರಿ. ಶ. ೧೯೫೧ ರಲ್ಲಿ ತಮ್ಮ ಮಹಾ ಸಮಾಧಿವರೆಗೆ ಶ್ರೀ ರಾಮಕೃಷ್ಣ ಸಂಘದ ಅಧ್ಯಕ್ಷರಾಗಿದ್ದರು.

ಸ್ವಾಮಿ ವಿರಜಾನಂದಜಿ ಅವರು ಶ್ರೇಷ್ಠ ಸಾಧಕ ವರ್ಗಕ್ಕೆ ಸೇರಿದವರು. ಹಲವು ಆಧ್ಯಾತ್ಮಿಕ ಪಿಪಾಸುಗಳು ಇವರ ಬಳಿಗೆ ಬರುತ್ತಿದ್ದರು. ಅವರಿಗೆ ಉಪದೇಶ ಕೊಡುವುದು, ಅವರ ಜೀವನದ ಅಡ್ಡಿ ಆತಂಕಗಳನ್ನು ಸಾವಧಾನದಿಂದ ಕೇಳುವುದು, ಅದರಿಂದ ಪಾರಾಗಲು ತಕ್ಕ ಸಲಹೆ ಕೊಡುವುದು ಇವೆಲ್ಲ ಅವರ ನಿತ್ಯ ಜೀವನದ ಅಂಗವಾಗಿತ್ತು.

"ಪರಮಾರ್ಥ ಪ್ರಸಂಗ" ಬಂಗಾಳಿಯಲ್ಲಿ ಮೊದಲು ರಚಿತವಾಯಿತು. ಇದು ಅದರ ಭಾಷಾಂತರ. ಆಧ್ಯಾತ್ಮಿಕ ಜೀವನವನ್ನು ಅನುಷ್ಠಾನ ಮಾಡಬೇಕೆಂಬ ಆಕಾಂಕ್ಷೆಗೆ ಈ ಗ್ರಂಥ ಒಂದು ಪಠ್ಯಪುಸ್ತಕದಂತೆ ಇದೆ. ಇಲ್ಲಿ ಬರುವ ಬರಹ ಪಾಂಡಿತ್ಯ ಜನಿತವಲ್ಲ, ಕೇವಲ ಊಹೆಯಲ್ಲ. ಪ್ರತ್ಯಕ್ಷ ಸಾಧನೆಯಿಂದ ಗಳಿಸಿದ ಅನುಭವದಿಂದ ಜನಿತವಾದುವು. ಪ್ರಾರಂಭದಲ್ಲಿ ಸಾಧಕರನ್ನು ಮುತ್ತುವ ಹಲವಾರು ಆತಂಕಗಳಿಂದ ಪಾರಾಗಿ ಸಚ್ಚಿದಾನಂದದಲ್ಲಿ ಭಾಗಿಯಾಗಲು ಈ ಗ್ರಂಥ ಸಹಾಯ ಮಾಡುವುದರಲ್ಲಿ ಸಂದೇಹವಿಲ್ಲ.

**ಪ್ರಕಾಶಕರು.**



ಸ್ವಾಮಿ ವಿರಜಾನಂದ

## ಪರಮಾರ್ಥ ಪ್ರಸಂಗ

೧. ಭಗವತ್ಪ್ರಾಪ್ತಿಗೆ ತಾಳ್ಮೆ, ದೀರ್ಘ ಪ್ರಯತ್ನ, ಶಾರೀರಕ ಮತ್ತು ಮಾನಸಿಕ ಪರಿಶುದ್ಧತೆ, ಉತ್ಕಟ ಆಕಾಂಕ್ಷೆ ಮತ್ತು ಷಟ್‌ಸಂಪತ್ತಿ ಇರಬೇಕು. ಷಟ್‌ಸಂಪತ್ತಿ ಅಂದರೆ, ಶಮ (ಅಂತಃಕರಣ ಸ್ಥಿರತೆ), ದಮ (ಇಂದ್ರಿಯ ಸಂಯಮ), ಉಪರತಿ (ವಿಷಯಾಸಕ್ತಿ ತ್ಯಾಗ), ತಿತಿಕ್ಷ (ಎಂತಹ ಕಷ್ಟದಲ್ಲಿಯೂ ಸ್ವಲ್ಪವೂ ವ್ಯಥಿತನಾಗದೆ ಇರುವಿಕೆ), ಶ್ರದ್ಧ (ಗುರು ಮತ್ತು ಶಾಸ್ತ್ರವಾಕ್ಯ ವಿಶ್ವಾಸ) ಮತ್ತು ಸಮಾಧಾನ (ಇಷ್ಟ ದೇವತೆಯ ಮೇಲೆ ಚಿತ್ತೈಕಾಗ್ರತೆ) ಇಂತಹ ಆರು ಗುಣ ಅವಶ್ಯಕ.

೨. ಸಾಧನ ಭಜನೆ ಮೂಲಕ ಬರಬಹುದಾದ ಯಾವ ದರ್ಶನ ಅಥವಾ ಅದಕ್ಕೆ ಸಂಬಂಧಪಟ್ಟ ಯಾವ ಅನುಭವವನ್ನೇ ಆಗಲಿ ನಿನ್ನ ಗುರುವಿನೊಡನೆ ಹೊರತು ಮತ್ತಾರಲ್ಲಿಯೂ ಹೇಳಬೇಡ. ಯಾವಾಗಲೂ ನಿನ್ನ ಆಧ್ಯಾತ್ಮಿಕ ಅನುಭವವನ್ನು, ನಿನ್ನ ಅಂತರಂಗದ ಆಲೋಚನೆಗಳನ್ನು ನಿನ್ನಲ್ಲಿಯೇ ಬಚ್ಚಿಡು. ಅವು ಸಾಮಾನ್ಯ ಜನರ ಪ್ರದರ್ಶನಕ್ಕೆ ಅಲ್ಲ. ಇವು ಕೇವಲ ನಿನಗೆ ಮಾತ್ರ ಸೇರಿದ ಪವಿತ್ರ ಅನುಭವ. ಇದರಲ್ಲಿ ನೀನು ಮತ್ತು ದೇವರು ಮಾತ್ರ ಪಾಲುಗಾರರಾಗಿರಬೇಕು. ಹಾಗೆಯೇ ನಿನ್ನ ನ್ಯೂನತೆ ಮತ್ತು ಕಳಂಕವನ್ನು ಇತರರೊಂದಿಗೆ ವ್ಯಕ್ತಪಡಿಸಬೇಡ. ಅದರಿಂದ ನೀನು ನಿನ್ನ ಆತ್ಮಗೌರವವನ್ನು ಕಳೆದುಕೊಳ್ಳುವುದಲ್ಲದೆ ಇತರರು ನಿನಗೆ ಕೊಡುವ ಮನ್ನಣೆಯನ್ನೂ ಕಳೆದುಕೊಳ್ಳುವೆ. ಅವನ್ನು ನೀನು ಭಗವಂತನಿಗೆ ಅರಿಕೆ ಮಾಡಿಕೊಳ್ಳಬೇಕು. ಅವುಗಳಿಂದ ಪಾರಾಗಲು ಶಕ್ತಿಯನ್ನು ನೀಡೆಂದು ದೇವರನ್ನು ಪ್ರಾರ್ಥಿಸು.

೩. ನೀನು ಧ್ಯಾನ ಪ್ರಾರಂಭಿಸುವಾಗ ಮೊದಲು ಸ್ವಲ್ಪ ಹೊತ್ತು ಸ್ಥಿರವಾಗಿ ಕುಳಿತು ನಿನ್ನ ಮನಸ್ಸನ್ನು ಜಾಗ್ರತೆಯಿಂದ ನೋಡು. ಅದು ಇಷ್ಟಬಂದ ರೀತಿ ಅಲೆದಾಡಲು ಬಿಡು. ನೀನು ಕೇವಲ ಸಾಕ್ಷಿ, ಎಂದು ಆಲೋಚಿಸು. ಮನಸ್ಸು ಹೇಗೆ ತೇಲಿ, ಮುಳುಗಿ, ಧಾವಿಸಿ ಜಿಗಿದಾಡುವುದೆಂದು ಲಕ್ಷ್ಯದಲ್ಲಿಡು. "ನಾನು ಈ ದೇಹವಲ್ಲ, ಇಂದ್ರಿಯಗಳೂ ಅಲ್ಲ, ಮನಸ್ಸೂ ಅಲ್ಲ. ನಾನು ಮನಸ್ಸಿನಿಂದ ಸಂಪೂರ್ಣ ಬೇರೆ. ಮನಸ್ಸೂ ಕೂಡ ಪಂಚಭೂತಾತ್ಮಕ. ಅದು ಕೇವಲ ಭೌತಿಕ ವಸ್ತುವಿನ ಸೂಕ್ಷ್ಮ ರೂಪಮಾತ್ರವಾಗಿದೆ. ನಾನು ಆತ್ಮ, ಯಜಮಾನ; ಮನಸ್ಸು ಕೇವಲ

ನನ್ನ ಸೇವಕ" ಎಂದು ಭಾವಿಸು. ಯಾವಾಗ ನಿಷ್ಪ್ರಯೋಜಕವಾದ ಯೋಚನೆಗಳು ನಿನ್ನ ಮನಸ್ಸಿನಲ್ಲಿ ಏಳುತ್ತವೆಯೋ ಆ ತಕ್ಷಣವೇ ಅವುಗಳನ್ನು ಒತ್ತಾಯದಿಂದ ನಿಗ್ರಹಿಸಲು ಪ್ರಯತ್ನಿಸು.

೪. ಪ್ರತಿಯೊಬ್ಬರೂ ಸಾಧಾರಣವಾಗಿ ತಾವು ವಿಶ್ರಾಂತಿಯಲ್ಲಿರುವಾಗ ಎಡಮೂಗಿನಿಂದಲೂ, ಕೆಲಸಮಾಡುತ್ತಿರುವಾಗ ಬಲಮೂಗಿನಿಂದಲೂ, ಧ್ಯಾನದ ವೇಳೆಯಲ್ಲಿ ಎರಡು ಕಡೆಯಿಂದಲೂ ಉಸಿರಾಡುತ್ತಾರೆ. ಧ್ಯಾನಕ್ಕೆ ಬಹಳ ಅನುಕೂಲವಾದ ಕಾಲವೆ ದೇಹ ಮತ್ತು ಮನಸ್ಸು ಶಾಂತ ಸ್ಥಿತಿಯಲ್ಲಿದ್ದು ನಮ್ಮ ಮೂಗಿನ ಎರಡು ಹೊಳ್ಳೆಗಳಿಂದಲೂ ಒಂದೇ ರೀತಿ ಉಸಿರಾಡುತ್ತಿರುವ ಸಮಯ. ಆದರೆ ಈ ಉಸಿರಾಡುವಿಕೆಯ ಕಡೆಗೇ ಬಹಳ ಗಮನಕೊಡಬೇಡ. ನಿನ್ನ ಕೆಲಸ ಕಾರ್ಯಗಳನ್ನು ವ್ಯವಸ್ಥೆಗೊಳಿಸುವುದಕ್ಕೂ ಇದನ್ನೇ ಮಾರ್ಗದರ್ಶಕವಾಗಿಯೂ ಇಟ್ಟುಕೊಳ್ಳಬೇಡ.

೫. ಮನಸ್ಸು ಯಾವಾಗ ಸಂಪೂರ್ಣ ಶಾಂತವಾಗಿರುವುದೋ ಆಗ ನಮ್ಮ ಶ್ವಾಸ ಸ್ಥಿರವಾಗುವುದು; ಕುಂಭಕವೂ (ಶ್ವಾಸಧಾರಣ ಶಕ್ತಿ) ಉಂಟಾಗುವುದು. ನಮ್ಮ ಉಸಿರಾಡುವಿಕೆ ಯಾವಾಗ ಸ್ಥಿರವಾಗುವುದೋ ಆಗ ಮನಸ್ಸು ಏಕಾಗ್ರತೆಯನ್ನು ಪಡೆಯುವುದು. ಭಕ್ತಿ ಪ್ರೇಮದಿಂದ ಕೂಡ ಈ ಕುಂಭಕವನ್ನು ಸ್ವಾಭಾವಿಕವಾಗಿ ಪಡೆಯಬಹುದು. ಶ್ವಾಸ ಸ್ಥಿರವಾಗುವುದು. ನಾವು ಕೇವಲ ದೇವರ ಸ್ಮರಣೆ, ಮನನ ಜಪವನ್ನು ಹೃತ್ಪೂರ್ವಕಮಾಡಿದರೆ ಯಾವ ಯೋಗಸಾಧನೆ ಮಾಡದಿದ್ದರೂ ಪ್ರಾಣಾಯಾಮ (ಶ್ವಾಸಧಾರಣ ಶಕ್ತಿ) ತಾನೇ ತಾನಾಗಿ ನಮಗೆ ಪ್ರಾಪ್ತವಾಗುವುದು.

೬. ಮಾನಸಿಕ ಏಕಾಗ್ರತೆಯನ್ನು ಪಡೆಯಬೇಕಾದರೆ ಅಭ್ಯಾಸ ಮತ್ತು ವೈರಾಗ್ಯದಷ್ಟು ಸುಲಭ ಸರಾಗದ ಮಾರ್ಗ ಮತ್ತೊಂದು ಇಲ್ಲ.

೭. ನೀನು ಜಪ ಮತ್ತು ಧ್ಯಾನಕ್ಕೆ ಮೀಸಲಾಗಿಡುವ ಕಾಲ ಎಷ್ಟೇ ಅಲ್ಪವಾಗಿರಲಿ–ಕೇವಲ ಹತ್ತು ಅಥವಾ ಹದಿನೈದು ನಿಮಿಷಗಳಾದರೂ ಚಿಂತೆ ಇಲ್ಲ–ಅದನ್ನು ಹೃತ್ಪೂರ್ವಕ ಮಾಡು. ದೇವರೇ ನಿನ್ನ ಹೃದಯದಲ್ಲಿ ವಾಸಿಸುತ್ತಿರುವನು. ಅವನೇ ನಿನ್ನ ಅಂತರಂಗದ ಮಾರ್ಗದರ್ಶಕ. ಅವನು ನಿನ್ನ ಹೃದಯವನ್ನು ನೋಡುತ್ತಾನೆ. ಅವನಿಗೆ ನೀನು ಎಷ್ಟು ಹೊತ್ತು ಆತನನ್ನು ಕುರಿತು ಧ್ಯಾನಮಾಡುತ್ತೀಯೆ ಅಥವಾ ಎಷ್ಟು ಬಾರಿ

ಜಪಮಾಡಿದೆ, ಎಂಬುದು ಮುಖ್ಯವಲ್ಲ. ಅವನಿಗಾಗಿ ನೀನು ಎಷ್ಟು ಕಾತುರನಾಗಿರುವೆ ಎಂಬುದು ಮಾತ್ರ ಮುಖ್ಯ.

೮. ಪ್ರಾರಂಭದಲ್ಲಿ ಜಪ ಮತ್ತು ಧ್ಯಾನ ನೀರಸವಾಗಿರುವಂತೆ ತೋರುವುದು. ಆದರೂ ನೀನು ಔಷಧಿ ಸೇವನೆಯಂತೆ ಎಷ್ಟು ಕಷ್ಟವಾದರೂ ನಿನ್ನ ಸಾಧನೆಯನ್ನು ಮುಂದುವರಿಸಲೇಬೇಕು. ಮೂರು ನಾಲ್ಕು ವರ್ಷಗಳು ಬಿಡದೆ ನೀನು ಸಾಧನೆ ಮಾಡುತ್ತಾ ಹೋದರೆ ನಿನಗೆ ಇದರಲ್ಲಿ ಆನಂದ ಹುಟ್ಟುವುದು. ನಂತರ ಒಂದು ದಿನ ಧ್ಯಾನಮಾಡದೆ ಹೋದರೆ ವ್ಯಥೆಪಡುವೆ. ಅಂದು ಸಮಾಧಾನವೇ ಇರುವುದಿಲ್ಲ.

೯. ಆತ್ಮಸಾಕ್ಷಾತ್ಕಾರಕ್ಕೆ ಸ್ವಪ್ರಯತ್ನ (ಪುರುಷಕಾರ) ಆವಶ್ಯಕ. ನಿನ್ನ ಮನಸ್ಸಿನಲ್ಲಿ, "ನಾನು ಕೇವಲ ನನ್ನ ಸ್ವಂತ ಪರಿಶ್ರಮದಿಂದ ಸಾಧನೆ ಮಾಡಿ ದೇವರನ್ನು ಖಂಡಿತ ಸಾಕ್ಷಾತ್ಕಾರ ಮಾಡಿಕೊಳ್ಳುತ್ತೇನೆ" ಎಂದು ಸಂಕಲ್ಪಮಾಡು. ಆಸನದ ಮೇಲೆ ಬೆಳಿಗ್ಗೆ ಮತ್ತು ಸಂಜೆ ಎರಡು ಹೊತ್ತೂ ಕಡೆಯಪಕ್ಷ ಎರಡು ಗಂಟೆಗಳ ಕಾಲ ದಿನವೂ ಜಪ ಧ್ಯಾನಮಾಡು. ಹೀಗೆ ಮೂರು ನಾಲ್ಕು ವರ್ಷ ಸಾಧನೆ ಮಾಡಿದ ಮೇಲೆ ನೀನು ಮುಂದುವರಿಯುವೆಯೋ ಇಲ್ಲವೋ ಎಂಬುದನ್ನು ನೀನೇ ನೋಡುವೆ.

೧೦. ಹೆಚ್ಚು ಪ್ರಾಣಾಯಾಮವನ್ನು ಗೃಹಸ್ಥರು ಮಾಡುವುದು ಒಳ್ಳೆಯದಲ್ಲ. ಯಾರು ಅದನ್ನು ಮಾಡೇತೀರಬೇಕೆಂದು ಇಚ್ಛಿಸುವರೋ ಅವರು ತಮ್ಮ ಆಹಾರವಿಹಾರದಲ್ಲಿ ನಿಯಮ ಮತ್ತು ಮಿತಿಯನ್ನು ತಪ್ಪದೆ ಪಾಲಿಸಬೇಕು. ಅಂತಹವರು ಪುಷ್ಟಿಕರವಾದ ಪರಿಶುದ್ಧವಾದ ಆಹಾರವನ್ನು ಸಕಾಲದಲ್ಲಿ ತೆಗೆದುಕೊಳ್ಳಬೇಕು. ಕ್ರಮವಾದ ಕೆಲಸಕಾರ್ಯಗಳು, ಕ್ಲೇಶವಿಲ್ಲದ ಜೀವನ, ನಿರ್ಮಲ ಗಾಳಿ ಬೆಳಕಿರುವ ಶಾಂತವಾದ ಏಕಾಂತ ಒಳ್ಳೆಯ ಸ್ಥಳ, ಜೀರ್ಣಶಕ್ತಿ, ಮಿತಭಾಷಿತೆ ಇವುಗಳನ್ನು ಹೊಂದಿರಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಬ್ರಹ್ಮಚರ್ಯ ಅತ್ಯಗತ್ಯ. ಈ ನಿಯಮಗಳನ್ನು ಮೀರಿದರೆ ಹೃದ್ರೋಗ ಅಥವಾ ಮೆದುಳು ರೋಗಗಳಿಗೆ ಗುರಿಯಾಗಬಹುದು.

೧೧. ಜಪ ಮತ್ತು ಧ್ಯಾನವನ್ನು ಮುಂದುವರಿಸುತ್ತಾ ಹೋದಂತೆ ಮನಸ್ಸು ಶಾಂತವಾಗಿ ನಿರ್ಮಲವಾಗುವುದು. ಆಗ ನಿನ್ನ ಮನಸ್ಸೇ ನಿನ್ನ ಗುರು ಅಥವಾ ಮಾರ್ಗದರ್ಶಕವಾಗುತ್ತದೆ. ನೀನೇ ಪ್ರತಿಯೊಂದನ್ನು

ಗ್ರಹಿಸಿಕೊಳ್ಳಬಲ್ಲವನಾಗುವೆ. ನಿನ್ನ ಆಧ್ಯಾತ್ಮಿಕ ಅನುಮಾನ ಪ್ರಶ್ನೆಗಳಿಗೆಲ್ಲಾ ನಿನ್ನಲ್ಲಿಯೇ ಪರಿಹಾರದೊರಕುವುದು. ನಿನ್ನ ಮನಸ್ಸೇ ನೀನಾವುದನ್ನು ಮಾಡಬೇಕೆಂಬುದನ್ನು ಒಂದಾದ ಮೇಲೆ ಒಂದರಂತೆ ನಿನಗೆ ಹೇಳುವುದು. ನೀನು ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಅದೇ ತಿಳಿಸುತ್ತದೆ.

೧೨. ಜಪಮಾಡತ್ತಿರುವಾಗ ನಿನ್ನ ಇಷ್ಟದೇವತೆಯ ಆಕಾರದ ಮೇಲೂ ಧ್ಯಾನಮಾಡು. ಇಲ್ಲದಿದ್ದಲ್ಲಿ ಜಪ ಅಷ್ಟು ಫಲಕಾರಿಯಾಗಲಾರದು. ಧ್ಯಾನಿಸುತ್ತಿರುವಾಗ ಇಷ್ಟದೇವತೆಯ ಸಂಪೂರ್ಣ ರೂಪು ಕಾಣಿಸಿಕೊಳ್ಳದಿದ್ದರೂ ಚಿಂತೆಯಿಲ್ಲ. ಆ ಆಕಾರದ ಯಾವ ಭಾಗ ಮನಸ್ಸಿಗೆ ಬಂದರೆ ಅದರಿಂದಲೇ ಪ್ರಾರಂಭಿಸು ನೀನು ಪರಾಜಯ ಹೊಂದಿದರೂ ಮರಳಿ ಮರಳಿ ಯತ್ನಿಸು. ನಿನಗೆ ಜಯ ಲಭಿಸದಿದ್ದಲ್ಲಿ ಅದನ್ನು ಏಕೆ ಬಿಡಬೇಕು? ದೃಢಚಿತ್ತದಿಂದ ನೀನು ಅದನ್ನು ಮುಂದುವರಿಸುತ್ತಿರಬೇಕು. ಕೇವಲ ಇಚ್ಛಾಮಾತ್ರದಿಂದಲೇ ಅಷ್ಟೊಂದು ಸುಲಭವಾಗಿ ಧ್ಯಾನ ಲಭಿಸುವುದೇ? ಇತರ ವಸ್ತುಗಳ ಮೇಲಿಂದ ಮನಸ್ಸನ್ನು ಸೆಳೆದುಕೊಂಡು ನೀನು ಧ್ಯಾನಿಸುವ ವಸ್ತುವಿನ ಮೇಲೆ ಅದನ್ನು ನಿಲ್ಲಿಸುವುದಕ್ಕೆ ಪುನಃ ಪುನಃ ಪ್ರಯತ್ನಿಸಬೇಕು. ಸಾಧನೆಮಾಡುತ್ತಾ ಹೋದಂತೆ ಇದರಲ್ಲಿ ಯಶಸ್ಸು ತಾನಾಗಿ ಲಭಿಸುವುದು.

೧೩. ಮನೋಜಪ, ಕೈಯಲ್ಲಿ ಮಾಡುವುದು, ಮಾಲೆ ತಿರುಗಿಸುವುದು, ಆ ಸಂಖ್ಯೆಯನ್ನು ನೆನಪಿನಲ್ಲಿಟ್ಟುಕೊಳ್ಳುವುದು – ಇವೆಲ್ಲಾ ಕೇವಲ ಮನಸ್ಸನ್ನು ಉಳಿದ ವಸ್ತುಗಳ ಮೇಲಿಂದ ಹಿಂದಕ್ಕೆ ಸೆಳೆದುಕೊಳ್ಳುವುದಕ್ಕಾಗಿ ಮತ್ತು ಅದನ್ನು ನೀನು ಪೂಜಿಸುವ ವಸ್ತುವಿನ ಮೇಲೆ ಸ್ಥಿರವಾಗಿ ನಿಲ್ಲಿಸುವುದಕ್ಕಾಗಿ ಉಪಯುಕ್ತವಾಗುವ ಹಲವು ಪ್ರಾಥಮಿಕ ಸಾಧನಗಳು. ಇವಿಲ್ಲದಿದ್ದರೆ ನಿನ್ನ ಮನಸ್ಸು ಯಾವಾಗ ಬೇರೆ ಕಡೆ ಧಾವಿಸಿತೆಂದು ನಿನಗೆ ಗೊತ್ತಾಗದಿರಬಹುದು. ನೀನು ತೂಕಡಿಸಿದ್ದರೂ ಇರಬಹುದು. ಆದ್ದರಿಂದ ಈ ಸಿದ್ಧತೆಗಳು ಅನೇಕರಿಗೆ ಪ್ರಾರಂಭದಲ್ಲಿ ಸ್ವಲ್ಪ ಚಂಚಲತೆಗೆ ಕಾರಣವಾಗುವುದೆಂದು ತೋರಿದರೂ, ನಮ್ಮ ಚಿತ್ತವಿಕಾರಗಳನ್ನು ಗಮನಿಸುವುದಕ್ಕೂ, ಹಿಂತಿರುಗಿಸಿ ಅದನ್ನು ಧ್ಯಾನಿಸುವ ವಸ್ತುವಿನ ಮೇಲೆ ಇಡುವುದಕ್ಕೂ ಬಹಳ ಅನುಕೂಲ.

೧೪. ಎಂದಿಗೂ ನೀನು ದುರ್ಬಲನೆಂದು ಯೋಚಿಸಬೇಡ. ಆತ್ಮವಿಶ್ವಾಸ ಇರಲಿ. “ನಾನು ಮಾಡುವುದಕ್ಕಾಗದೆ ಇರುವುದು ಏನೂ ಇಲ್ಲ,

ನಾನಿಷ್ಟಪಟ್ಟರೆ ಏನು ಬೇಕಾದರೂ ಮಾಡಬಲ್ಲೆ" ಎಂದು ತಿಳಿ. ನಿನ್ನ ಮನಸ್ಸಿನ ಮುಂದೆ ನೀನೇಕೆ ಸೋಲನ್ನು ಒಪ್ಪಿಕೊಳ್ಳಬೇಕು? ನೀನು ಮನಸ್ಸನ್ನು ನಿಗ್ರಹಿಸಬಲ್ಲೆಯಾದರೆ ಇಡೀ ಪ್ರಪಂಚವೇ ನಿನ್ನ ಕಾಲಿಗೆ ಬೀಳುವುದೆಂಬುದನ್ನು ತಿಳಿ. ಯಾರಿಗೆ ತನ್ನಲ್ಲಿಯೇ ನಂಬಿಕೆ ಇಲ್ಲವೊ ಆತನಿಗೆ ದೇವರಲ್ಲಿ ಶ್ರದ್ಧೆಯಿಲ್ಲ. ಸ್ವಾಮಿ ವಿವೇಕಾನಂದರು ಯಾರಿಗೆ ಆತ್ಮವಿಶ್ವಾಸವಿಲ್ಲವೋ ಆತ ನಿಜವಾದ ನಾಸ್ತಿಕನೆಂದು ಹೇಳುವರು. ಆತ್ಮವಿಶ್ವಾಸವಿಲ್ಲದವನ ಮಾತನ್ನು ಯಾರೂ ಕೇಳುವುದಿಲ್ಲ. ದೇವರು ಕೂಡ ಆತನ ಪ್ರಾರ್ಥನೆಗೆ ಕಿವಿಗೊಡುವುದಿಲ್ಲ.

೧೫. ಧ್ಯಾನಕ್ಕೆ ದೀರ್ಘಕಾಲ ಸುಲಭವಾಗಿ ಕುಳಿತುಕೊಳ್ಳುವ ಸ್ಥಿತಿಯೇ ಆಸನ. ಇದಕ್ಕೆ ಬೆನ್ನೆಲಬು ನೇರವಾಗಿರಬೇಕು. ಎದೆ ಕತ್ತು ಮತ್ತು ಶಿರ ಇವು ಮೂರು ಒಂದೇ ಸಮನಾಗಿದ್ದು ದೇಹದ ಮೇಲು ಭಾಗದ ತೂಕವೆಲ್ಲವೂ ಪಕ್ಕೆಲಬುಗಳಮೇಲೆ ನಿಂತು ಎದೆ ಬಗ್ಗದಂತಿರಬೇಕು. ಯಾವ ವಿಧದಲ್ಲಿಯೂ ಬಗ್ಗಿರುವ ಸ್ಥಿತಿ ಹಿತವಲ್ಲ.

೧೬. ಈ ಪ್ರಪಂಚ ನಶ್ವರ, ನಿಜವಲ್ಲ, ದೇವರೊಬ್ಬನೇ ಸತ್ಯ ಎಂಬ ಭಾವನೆ ನಿನ್ನಲ್ಲಿ ಬೇರೂರುವವರೆಗೂ ನಿನ್ನ ಮನಸ್ಸು ಧ್ಯಾನದ ಸಮಯದಲ್ಲಿ ಚಂಚಲವಾಗುವುದು ಅನಿವಾರ್ಯ. ಇಂದ್ರಿಯ ಸುಖದ ಬಯಕೆ ಕುಗ್ಗಿದಷ್ಟು ಭಗವತ್ಪ್ರೇಮ ಹಿಗ್ಗುವುದು. ಮನಸ್ಸು ಶಾಂತವಾಗುವುದು. ಅವನ ಪ್ರೇಮದ ಲೇಶಮಾತ್ರ ಸವಿಯನ್ನುಂಡರೂ ಈ ಪ್ರಪಂಚದ ಸುಖಗಳೆಲ್ಲವೂ ಕ್ಷುದ್ರವಾಗಿ ಪರಿಣಮಿಸಿ ಬೇಸರವನ್ನುಂಟುಮಾಡುವುದು.

೧೭. ಜಪ, ಧ್ಯಾನ, ಶಾಸ್ತ್ರೋಕ್ತ ಪೂಜೆ, ಪ್ರಾರ್ಥನೆ, ಸ್ಮರಣೆ, ಪವಿತ್ರ ಗ್ರಂಥಗಳ ಪಠಣ, ಸಾಧು ಸಹವಾಸ, ಸದಾಲಾಪ, ನಿರ್ಜನ ಪ್ರದೇಶಕ್ಕೆ ಹೋಗುವುದು, ಆಧ್ಯಾತ್ಮಿಕ ವಿಚಾರವಾಗಿ ಆಲೋಚನೆ – ಇವುಗಳಲ್ಲಿ ಯಾವುದು ನಿನಗೆ ಹೆಚ್ಚು ಆಕರ್ಷಣೀಯವಾಗಿರುವುದೋ, ಸಮಯೋಚಿತವಾಗಿ ನಿನ್ನ ಮನಸ್ಸಿನ ಭಾವಕ್ಕೆ ಸರಿಹೊಂದಿ ಹೆಚ್ಚು ಸಂತೋಷವನ್ನುಂಟುಮಾಡುವುದೋ, ಅದರ ಪ್ರಯೋಜನವನ್ನುಪಯೋಗಿಸಿಕೊಂಡು ಅದನ್ನೇ ಮಾಡು. ಆದರೆ ಧ್ಯಾನ ಮತ್ತು ಜಪ ಪ್ರಧಾನ. ನಿನಗೆ ಅದೆಷ್ಟೇ ಕೆಲಸಗಳಿರಲಿ, ಖಾಯಿಲೆ ಅಥವಾ ಅಶಕ್ತತೆಯಿಂದ ಕೂಡಿದ್ದರೂ, ಆಪತ್ಕಾಲ ಅಥವಾ ವಿಪತ್ತಿನ ಸಮಯದಲ್ಲಿಯೂ ಸಹ ಎಂದಿಗೂ ಇವನ್ನು ಒಂದು ದಿನವಾದರೂ ತಪ್ಪಿಸಬೇಡ. ಇಂತಹ ಸಮಯ

ದಲ್ಲಿ ನಿನ್ನ ಸಾಧನೆಯನ್ನು ಪೂರ್ಣ ಪ್ರಮಾಣದಲ್ಲಿ ಮುಂದುವರಿಸಲಾಗದಿದ್ದಲ್ಲಿ, ಕಡೆಯಪಕ್ಷ ಹತ್ತು ಅಥವಾ ಹದಿನೈದುನಿಮಿಷಗಳವರೆಗಾದರೂ ಪ್ರಣಾಮ ಪ್ರಾರ್ಥನೆ ಮತ್ತು ಜಪಮಾಡು.

೧೮. ತಿಳುವಳಿಕೆಯುಳ್ಳ ಯಾವ ಮನುಷ್ಯನೂ ತನ್ನ ರೋಗವನ್ನು ತಾನೇ ನಿರ್ಣಯಮಾಡಿ ತನಗೆ ತಾನೇ ಔಷಧವನ್ನು ಸೂಚಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ರೋಗವಿರುವುದಾದರೆ ಒಬ್ಬ ವೈದ್ಯನ ಸಲಹೆಯನ್ನು ತೆಗೆದುಕೊಳ್ಳುವುದು ಅತ್ಯಾವಶ್ಯಕ. ಅದರಂತೆಯೇ ಅನೇಕ ಧರ್ಮಗ್ರಂಥಗಳನ್ನೋದಿದ ಯಾವನಾದರೂ ತನಗೆ ತಾನೇ ಒಂದು ಪ್ರತ್ಯೇಕ ಸಾಧನೆ ಮಾಡಿದರೆ ಅವನ ಮನಸ್ಸು ಅನೇಕ ಅನುಮಾನ, ಸಂದೇಹಗಳಿಂದ ಕಂಗೆಟ್ಟು ತೊಂದರೆಗೆ ಗುರಿಯಾಗಬಹುದು. ಅವನ ಪ್ರಗತಿಗೆ ಇದರಿಂದ ಅಡ್ಡಿಯಾಗಿ ಅವನ ಪ್ರಯತ್ನವೆಲ್ಲಾ ನಿಷ್ಪ್ರಯೋಜಕವಾಗಿ ಪರಿಣಮಿಸಬಹುದು; ಹಾನಿ ಕೂಡ ಸಂಭವಿಸಬಹುದು. ಇದಕ್ಕೆ ಕಾರಣ, ಧರ್ಮಗ್ರಂಥಗಳಲ್ಲಿ, ಪ್ರತಿಯೊಬ್ಬ ಸಾಧಕನ ಪ್ರಕೃತಿ ಮತ್ತು ಸಾಮರ್ಥ್ಯಕ್ಕೆ ತಕ್ಕಂತೆ, ಜೀವನದ ಹಲವಾರು ಅಂತಸ್ತಿಗೆ ತಕ್ಕಂತೆ ಬೇರೆಬೇರೆ ಅಥವಾ ವಿರುದ್ಧವಾದ ಮಾರ್ಗ ಅಥವಾ ಪದ್ಧತಿಗಳು ಇರುವುದು. ಆದಕಾರಣ ಅನೇಕವೇಳೆ ನಿನಗೆ ಯೋಗ್ಯವಾದ ಮಾರ್ಗವನ್ನು ನೀನೇ ನಿರ್ಧರಿಸುವುದು ಅಪಾಯಕರ. ಕೇವಲ ಗುರುವೊಬ್ಬನೇ ನಿನಗೆ ಸರಿಯಾದ ಮಾರ್ಗವನ್ನು ತೋರಿಸಿಕೊಡಬಲ್ಲ.

ಆಧ್ಯಾತ್ಮಿಕ ಜ್ಞಾನವನ್ನು ಗುರುವಿನಿಂದಲೇ ಪ್ರತ್ಯಕ್ಷ ಗಳಿಸಬೇಕು. ಆತ ನಿನಗೆ ಉಪದೇಶಿಸಿರುವ ಮಂತ್ರ, ಕೊಟ್ಟಿರುವ ಸಲಹೆ, ಇವನ್ನು ಮಾತ್ರ ನೀನು ಅನುಸರಿಸಬೇಕು. ಆತ ವಿಧಿಸಿರುವ ಸಾಧನೆಯನ್ನು ಸ್ವಲ್ಪವೂ ತಪ್ಪದೆ ಮಾಡಬೇಕು. ಗುರು ಮತ್ತು ಅವರ ಉಪದೇಶದಲ್ಲಿ ಪೂರ್ಣ ಶ್ರದ್ಧೆ ಇಟ್ಟು ಮಾಡುತ್ತಾ ಬಂದರೆ ಕಾಲಕ್ರಮೇಣ ಜಯ ನಿನಗೆ ಲಭಿಸುವುದರಲ್ಲಿ ಸಂದೇಹವಿಲ್ಲ. ಹೇಗಾದರೂ ಆಗಲಿ ಎಂದಿಗೂ ಈ ಸಾಧನೆಯನ್ನು ತ್ಯಜಿಸಬೇಡ. ಇನ್ನೊಬ್ಬರು ಹೇಳಿದಂತೆ ಮತ್ತಾವ ಮಾರ್ಗವನ್ನೂ ಅವಲಂಬಿಸಬೇಡ. ನೀನು ಒಂದು ಮಾರ್ಗದಿಂದ ಮತ್ತೊಂದಕ್ಕೆ ಹೀಗೆ ಬದಲಾಯಿಸುತ್ತಿದ್ದರೆ ನೀನು ಹಾದಿ ತಪ್ಪುವೆಯೆ ಹೊರತು ಬೇರಾವ ಪ್ರತಿಫಲವೂ ದೊರಕದು.

೧೯. ಶ್ರದ್ಧೆ ಅನೇಕ ಅದ್ಭುತ ಕೆಲಸಗಳನ್ನು ಮಾಡಬಲ್ಲದು.

ಅಸಾಧ್ಯವನ್ನು ಸಾಧ್ಯ ಮಾಡಬಲ್ಲುದು. ಶ್ರದ್ಧೆ ಒಣಗಿದ ಭೂಮಿಯ ಮೇಲೆ ಹಾಯಿ ಹರಡಿ ದೋಣಿಯನ್ನು ನಡೆಸುವುದು. ಸಂಶಯತಪ್ತಮನಸ್ಸು ಮೊಳಕಾಲುದ್ದದ ನೀರಿನಲ್ಲಿಯೂ ಮುಳುಗಿ ಹೋಗುವುದು.

೨೦. ಭರವಸೆಯೇ ಜೀವನ. ಭರವಸೆಯೇ ಎಲ್ಲಾ ಶಕ್ತಿ, ಸಾಹಸಕ್ಕೂ ಮೂಲ. ಎಂದು ಹತಾಶರಾಗುತ್ತೇವೆಯೋ ಅಂದು ಮರಣ ಯಾತನೆಯನ್ನು ಅನುಭವಿಸುತ್ತೇವೆ. ಬದುಕಿದ್ದರೂ ಸತ್ತಂತೆ. ಬದುಕಿರುವವರೆಗೂ ಭರವಸೆಯನ್ನು ತ್ಯಜಿಸಬೇಡಿ. ಮೃತ್ಯುಸಮ್ಮುಖರಾಗುವವರೆಗೂ ದೇವರನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಭರವಸೆಯನ್ನು ತ್ಯಜಿಸಬೇಡಿ. ಅವನು ಇಚ್ಛಿಸಿದರೆ ಯಾವಾಗಬೇಕಾದರೂ ತನ್ನ ಕೃಪೆಯನ್ನು ನಿಮ್ಮ ಮೇಲೆ ಬೀರಬಹುದು. ಕಡೆಯ ಘಳಿಗೆಯಲ್ಲಿಯಾದರೂ ನಿಮಗೆ ಅವನ ಸಾಕ್ಷಾತ್ಕಾರವಾಗಬಹುದು ಎಂಬ ನೆಚ್ಚಿಗೆ ಇರಲಿ.

೨೧. ಎಂದು ದೇವರೇ ತನ್ನ ಅಪಾರ ಕರುಣೆಯಿಂದ ಗುರುವಿನ ಮೂಲಕ, ಆ ದೇವಾಲಯದ ಬಾಗಿಲಿನ ಬೀಗದ ಕೈಯಂತೆ ಇರುವ ಸಿದ್ಧ ಮಂತ್ರವನ್ನು ನಿನಗೆ ತಿಳಿಸುವನೋ ಆಗ ನಿನಗೆ ದೇವರು ತನ್ನನ್ನೇ ಉದಾರವಾಗಿ ತೆತ್ತಿರುವನೆಂದು ತಿಳಿ. ಆದರೆ ಈ ನಿಶ್ಚಿತಮನೋಭಾವವನ್ನು ನೀನು ಖಂಡಿತ ಹೊಂದುವುದು ಅತ್ಯಾವಶ್ಯಕ. ನಿನ್ನ ಅಜಾಗರೂಕತೆಯಿಂದಾಗಲಿ ಅಥವಾ ತಾತ್ಸಾರದಿಂದಾಗಲಿ ನೀನು ಅಮೂಲ್ಯ ರತ್ನವನ್ನು ಕಳೆದುಕೊಂಡರೆ ಅವನ ಕೃಪೆಗೆ ಅಪಾತ್ರನೆಂದು ತಿಳಿ. ನಿನ್ನ ಗುರಿ ಮುಟ್ಟುವವರೆಗೂ ಗುರು ನಿನಗೆ ಅನುಗ್ರಹಿಸಿರುವ ಉಪದೇಶವನ್ನು ಹೃತ್ಪೂರ್ವಕ ಸಾಧನೆ ಮಾಡಿದರೆ ನೀನು ಆ ವರದ ಸರಿಯಾದ ಬೆಲೆಯನ್ನು ಅರಿತಂತೆ. ಹೀಗೆ ಮಾಡುವುದರಿಂದ ಆತನ ಋಣದ ಸ್ವಲ್ಪ ಭಾಗವನ್ನಾದರೂ ತೀರಿಸಬಲ್ಲವನಾಗುವೆ. ನೀನು ಎಂದು ಯಾರು ನಿನಗೆ ಅತ್ಯಂತ ಹತ್ತಿರ ಮತ್ತು ಪ್ರೀತಿಪಾತ್ರರಾಗಿರುವರೋ ಅವರಿಗಿಂತ ದೇವರು ಹತ್ತಿರದವನು ಮತ್ತು ಹೆಚ್ಚು ಪ್ರೀತಿಗೆ ಪಾತ್ರನು ಎಂದು ಅರಿಯುವೆಯೋ ಅಂದು ಆತನ ಕೃಪೆಯೂ ಹೆಚ್ಚುಹೆಚ್ಚಾಗಿ ನಿನಗೆ ದೊರಕುವುದು. ಆತನ ಕೃಪೆಯಿಂದ ಈ ಜನ್ಮದಲ್ಲಿಯೇ ನೀನು ಮುಕ್ತನಾಗಬಹುದು. ಸುಮಧುರ ಆನಂದವನ್ನು ಈ ಜನ್ಮದಲ್ಲಿಯೇ ಅನುಭವಿಸಬಹುದು.

೨೨. ಭಗವಂತನ ಮೇಲೆ ನಿಜವಾದ ಭಕ್ತಿ, ಪ್ರೇಮ ಹುಟ್ಟುವವರೆಗೆ ಈ ಪ್ರಪಂಚದ ಅಸತ್ಯತೆ, ನಶ್ವರತೆಗಳು ನಮಗೆ ಗೊತ್ತಾಗುವುದಿಲ್ಲ.

ಮನಸ್ಸೇನೋ ಒಂದೇ, ಆದರೆ ಅದನ್ನು ವಿಭಾಗ ಮಾಡಿ ಒಂದು ಭಾಗವನ್ನು ದೇವರಿಗೆ, ಉಳಿದುದನ್ನು ಹೆಸರು, ಕೀರ್ತಿ, ವಿಷಯ ಸುಖಾಭಿಲಾಷೆಯಿಂದ ತುಂಬಿಸಲಾಗುವುದಿಲ್ಲ. ಸಂಪೂರ್ಣ ಹೃದಯವನ್ನು ಆತನಿಗೆ ಅರ್ಪಿಸುವವರೆಗೂ ಆತನ ಸಾಕ್ಷಾತ್ಕಾರವಾಗುವುದಿಲ್ಲ. ಈ ರೀತಿ ಮಾಡುವವರೆಗೂ ಪುನಃಪುನಃ ಈ ಪ್ರಪಂಚದಲ್ಲಿ ಹುಟ್ಟಿ ಕೊನೆಯಿಲ್ಲದ ದುಃಖ ವ್ಯಥೆಯನ್ನು ಅನುಭವಿಸಬೇಕು.

೨೩. ಈ ಪ್ರಪಂಚವನ್ನು ತ್ಯಜಿಸಬೇಕಾಗಿದ್ದರೆ ಸನ್ಯಾಸಾಶ್ರಮ ಸ್ವೀಕರಿಸಬೇಕಾಗಿಲ್ಲ; ಅರಣ್ಯಕ್ಕೆ ಹೋಗಬೇಕಾಗಿಲ್ಲ. ನಿಜವಾದ ತ್ಯಾಗ ಮನಸ್ಸಿನಲ್ಲಿದೆ. ನೀನು ಮನಸ್ಸಿನಲ್ಲಿ ಈ ಪ್ರಪಂಚವನ್ನು ತ್ಯಜಿಸಿದರೆ ನೀನು ಇಲ್ಲಿದ್ದರೂ ಅಥವಾ ಕಾಡಿಗೆ ಹೋದರೂ ಎರಡೂ ಒಂದೇ. ನಿನ್ನ ಮನಸ್ಸಿನಿಂದ ಈ ಪ್ರಾಪಂಚಿಕ ವಸ್ತುಗಳ ಮೇಲಿನ ಮೋಹವನ್ನು ಸಂಪೂರ್ಣ ತ್ಯಜಿಸದೆ ಕಾಡಿಗೆ ಓಡಿಹೋದರೆ ಈ ಪ್ರಪಂಚ ಅಲ್ಲಿಗೂ ನಿನ್ನನ್ನು ಹಿಂಬಾಲಿಸಿ ಬರುವುದು. ಇಲ್ಲಿನಂತೆಯೇ ಅಲ್ಲಿಯೂ ನಿನಗೆ ತೊಂದರೆ ಕೊಡುವುದು. ಅದರಿಂದ ಬಿಡುಗಡೆಯೇ ಇಲ್ಲ.

೨೪. ನೀನು ಪ್ರಪಂಚದಲ್ಲಿರಲೇಬೇಕಾದರೆ, ದೇವರನ್ನೇ ನಿನ್ನ ಪ್ರಪಂಚ ಮಾಡಿಕೊ. ನಿನ್ನ ಮನೆಯನ್ನು ಅವನೊಡನೆಯೇ ಹೂಡು. ನೀನೇನು ಮಾಡಲಿ, ನೋಡಲಿ, ಅಥವಾ ಆಲಿಸಲಿ ಎಲ್ಲಾ ದೇವರೆಂದೇ ತಿಳಿ. ಇದೆಲ್ಲಾ ಒಂದು ನಾಟಕ, ಅವನೊಡನಾಡುವ ಒಂದು ಆಟ. ಈ ಜೀವನವೇ ಒಂದು ಆಟ. ಅದರಲ್ಲಿ ಮಾತೆಯೇ ಆಟ ಆಡುವಳು. ನೀನು ಅವಳ ಆಟದ ಜೊತೆಗಾರನೆಂದು ತಿಳಿ. ತಾಯಿಯ ಜೊತೆಗೆ ನೀನೂ ಆಟ ವಾಡುತ್ತಿರುವೆ ಎಂದು ತಿಳಿದಾಗ ಈ ಪ್ರಪಂಚವೆಲ್ಲಾ ನಿನಗೆ ಬೇರೆ ವಿಧವಾಗಿ ಕಾಣುವುದು. ಆಗ ನಿನಗೆ ಈ ಪ್ರಪಂಚದಲ್ಲಿ ಸುಖವೂ ಇಲ್ಲ, ದುಃಖವೂ ಇಲ್ಲ, ಒಳ್ಳೆಯದೂ ಇಲ್ಲ, ಕೆಟ್ಟದ್ದೂ ಇಲ್ಲ, ಮಮತೆಯೂ ಇಲ್ಲ, ದ್ವೇಷವೂ ಇಲ್ಲ, ದುರಾಶೆಯೂ ಇಲ್ಲ, ಅಸೂಯೆಯೂ ಇಲ್ಲ ಎಂಬುದು ನಿನಗೆ ಗೊತ್ತಾಗುವುದು. ಅದಕ್ಕನುಸಾರವಾಗಿ ನಿನ್ನ ಭ್ರಮೆ, ನಿನ್ನ ಸ್ವಾರ್ಥ ಚಿಂತನೆ, ಹೋರಾಟ ಎಲ್ಲಾ ಮಾಯವಾಗುವುವು. ಪ್ರತಿಕೂಲವಾಗಿರುವ ಯಾವ ದ್ವಂದ್ವಗಳೂ ನಿನ್ನನ್ನು ಯಾತನೆಗೆ ಗುರಿಮಾಡಲಾರವು. ನೀನು ಜಗನ್ಮಾತೆಯೊಡನಾಡುವ ಆ ಆಟದಲ್ಲಿ ನಿನ್ನ ಶತ್ರುವಿನ ಅಥವಾ ಮಿತ್ರನ ಅಗಲಿಕೆ ಅಥವಾ ಸೇರುವಿಕೆಯಿಂದುಂಟಾಗುವ ಅನುಭವ,

ಮೇಲುಕೀಳು, ನಾನು, ನನ್ನದು ಎಂಬ ಭಾವನೆಗಳೊಂದೂ ಇರುವುದಿಲ್ಲ. ಕೇವಲ ಅನಂತ ಆನಂದ, ಅನಂತ ಪ್ರೇಮ, ಅನಂತ ಶಾಂತಿ ಇವು ಮಾತ್ರ ಇರುವುವು. ಆ ಪರಮಾನಂದದ ಒಂದು ಹನಿಯನ್ನಾದರೂ ನಾವು ಕುಡಿದರೆ, ಈ ಪ್ರಾಪಂಚಿಕ ವಸ್ತುಗಳ ಆನಂದ ಅಸಹ್ಯಕರವಾಗಿ ಕಾಣಿಸುತ್ತವೆ. ಆ ಪ್ರೇಮದ ಒಂದು ಕಣವನ್ನಾದರೂ ನಾವು ಹೊಂದಿದರೆ, ಈ ಪ್ರಪಂಚವೇ ಆತ್ಮೀಯವಾಗುವುದು; ಈ ದೇಹದ ಪ್ರತಿಯೊಂದು ರೋಮಕೂಪದಲ್ಲಿಯೂ ಆನಂದ ಪ್ರವಹಿಸುವಂತೆ ಮಾಡುತ್ತದೆ. ಆ ಆಟದಲ್ಲಿ ಯಾವೊಂದು ಹೆದರಿಕೆ ಇಲ್ಲ, ವ್ಯಾಕುಲವಿಲ್ಲ, ನಿರ್ಬಂಧವಿಲ್ಲ, ಆಯಾಸವಿಲ್ಲ. ಅದು ಚಿರ ನೂತನ ಆಟ. ಆ ತಾಯಿಗೆ ಎಷ್ಟೊಂದು ಬಗೆಯ, ಲೆಕ್ಕವಿಲ್ಲದಷ್ಟು ಆಟದ ಕ್ರಮಗಳು ಗೊತ್ತಿವೆ! ಆಕೆ ಆಡುವ ರೀತಿ, ಕ್ರಮ, ಅನಂತವಾಗಿವೆ. ಕೇವಲ ಆ ಯೋಚನೆಯಲ್ಲೇ ನಾವು ಮೈಮರೆಯಬಹುದು, ಅದರಲ್ಲೇ ತನ್ಮಯರಾಗಬಹುದು. ಆ ಅನಿರ್ವಚನೀಯ ಭಾವದಲ್ಲಿ ಆಟ ನಿಂತು ಹೋಗುವುದು. ಆಗ ಆಟ ಆಡುವರಾರು? ಆರೊಡನೆ? ಓ! ಆ ಅನಂತ ಆನಂದದ ಅನುಭವ, ಆ ಸುಮಧುರ ಐಕ್ಯತೆ, ಮನಸ್ಸು ಮಾತುಗಳಿಗೆ ಮೀರಿದ್ದು! ಯಾರಿಗೆ ಅನುಭವವಾಗಿದೆ ಅವರಿಗೆ ಮಾತ್ರ ಗೊತ್ತು! ತಮಾಷೆ! ಓ! ಇದೊಂದು ದೊಡ್ಡ ತಮಾಷೆ!

೨೫. ನಾವು ಈ ಪ್ರಾಪಂಚಿಕ ಭೋಗಗಳೆಲ್ಲವನ್ನೂ ಸಂಪೂರ್ಣ ಅನುಭವಿಸಲು ಇಚ್ಛಿಸುತ್ತೇವೆ. ಅದೇ ಕಾಲದಲ್ಲಿ ದೇವರ ಸಾಕ್ಷಾತ್ಕಾರವನ್ನು ಪಡೆಯಬೇಕೆಂದೂ ಇಚ್ಛಿಸುತ್ತೇವೆ. ನಿಷ್ಫಲವಾದ ಕನಸೇ! ಅದೆಂದಿಗೂ ಆಗದು ಗೆಳೆಯಾ!

೨೬. ದೇವರೇ ನಿನ್ನ ಮುಂದೆ ಬಂದು, "ನಿನಗೇನು ಬೇಕು? ನಿನಗೆ ನಾನು ಬೇಕೋ, ಅಥವಾ ನೂರು ವರುಷ ಆಯುಸ್ಸು, ಹೆಸರು, ಕೀರ್ತಿ, ಆರೋಗ್ಯ, ಐಶ್ವರ್ಯ, ಹೆಂಡತಿ ಮಕ್ಕಳು ಇವುಗಳಿಂದ ಕೂಡಿರುವ ಸುಖವಾದ ಜೀವನ ಬೇಕೋ?" ಎಂದು ಕೇಳಿದರೆ, ನೂರು ಲಕ್ಷ ಜನರಲ್ಲಿ ಎಲ್ಲೋ ಒಬ್ಬಿಬ್ಬರ ಹೊರತು ಮಿಕ್ಕವರೆಲ್ಲ ಕಡೆಯದನ್ನೇ ಪ್ರಾರ್ಥಿಸುವುರೆಂಬುದನ್ನು ನೀನೇ ನೋಡುವೆ.

೨೭. ದೇವರ ಸಾಕ್ಷಾತ್ಕಾರವಾಗಬೇಕಾದರೆ ಅದಕ್ಕಾಗಿ ಒಬ್ಬ ಹೃತ್ಪೂರ್ವಕ, ಶೇಕಡ ನೂರರಷ್ಟು ತನ್ನನ್ನು ಅರ್ಪಿಸಿಕೊಳ್ಳಬೇಕು. ಹತ್ತು ಲಕ್ಷದಲ್ಲಿ ಒಂದು ಭಾಗ ಅಥವಾ ಅದಕ್ಕಿಂತ ಅಲ್ಪ ಲೋಪವಾದರೂ

ಆಗುವುದಿಲ್ಲ. ನಮ್ಮಲ್ಲಿ ಮುಕ್ಕಾಲು ಪಾಲು ಜನರೆಲ್ಲ ಆತನನ್ನು ಹೇಗೆ ಹೆಚ್ಚು ಕಷ್ಟ ಅಥವಾ ಆಯಾಸವಿಲ್ಲದೆ, ಏನನ್ನೂ ತ್ಯಾಗ ಮಾಡದೆ ಪ್ರತ್ಯಕ್ಷ ಮಾಡಿಕೊಳ್ಳಬೇಕೆಂದು ಇಚ್ಛಿಸುತ್ತೇವೆ. ಗುರು ತನ್ನ ಅಪಾರ ಕರುಣೆ ಯಿಂದ ಭಗವಂತನನ್ನು ನಮಗೆ ದೊರಕಿಸಿಕೊಟ್ಟು, ಮೋಕ್ಷ ಕೊಡಿಸಿ ಬಿಟ್ಟರೆ ಅದಕ್ಕಿಂತ ಒಳ್ಳೆಯದು ಬೇರೇನೂ ಇಲ್ಲವೆಂದು ನಾವು ಯೋಚಿಸು ತ್ತೇವೆ. ಅಯ್ಯೋ! ಇದು ಹೇಗೆ ತಾನೆ ಸಾಧ್ಯ? ಭಗವಂತನಿಗೆ ಆತನ ಪಾಲು ಸಂಪೂರ್ಣವಾಗಿ, ಕುರುಡುಕವಡೆಯುವರೆಗೆ ಪಾವತಿಯಾಗಲೇ ಬೇಕು.

೨೮. ಯಾರು ಅವನನ್ನು ನಿಜವಾಗಿ ಬಯಸುತ್ತಾರೋ ಅವರಿಗೆ ಅವನು ಸಿಕ್ಕಿಯೇ ಸಿಗುತ್ತಾನೆ. ಯಾರಿಗೆ ಅವನು ಬೇಡವಾಗಿರುವನೋ ಅವನು ಪಂಚೇಂದ್ರಿಯುಗಳ ದಾಸನಾಗಿ ಪಂಚ ಭೌತಿಕದೇಹ ಮತ್ತು ಪ್ರಪಂಚದ ಕೈಗೊಂಬೆಯಾಗುತ್ತಾನೆ. ಅವು ಕುಣಿಸಿದಂತೆ ಕುಣಿಯು ತ್ತಾನೆ. ಎಲ್ಲಾ ಬಗೆಯ ಕೆಟ್ಟ ಆಕರ್ಷಣೆಗೂ ತುತ್ತಾಗುವನು.

೨೯. ಜಾಹಿರಾತುಗಳ ಬಲೆಗೊಳಗಾಗಿ ಅನೇಕರು ಚಿನ್ನವನ್ನು ತೊಲ ಒಂದಕ್ಕೆ ಅರ್ಧ ರೂಪಾಯಿನಂತೆ ಕೊಳ್ಳಲು ಓಡಿಹೋಗುತ್ತಾರೆ. ಆದರೆ ಅಪ್ಪಟ ಚಿನ್ನ ಮಾತ್ರವೇ ಚಿನ್ನ. ಚಿನ್ನದಂತೆ ಕೇವಲ ಥಳಥಳಿಸಿದ ಮಾತ್ರಕ್ಕೆ ಅವು ಚಿನ್ನವಲ್ಲ. ಅವು ಕೇವಲ ಕೃತ್ರಿಮ, ಮೋಸ. ನೀನು ಅರ್ಧ ರೂಪಾಯಿಮಾತ್ರ ಕಳೆದುಕೊಳ್ಳುವೆ.

೩೦. ಕೇವಲ ಕೆಲವು ಸ್ತೋತ್ರಗಳನ್ನು ಪಠಿಸಿಬಿಟ್ಟರೆ ಅದು ಪ್ರಾರ್ಥನೆಯಾಗುವುದಿಲ್ಲ. ಅದರಿಂದ ಏನೂ ಪ್ರಯೋಜನವಿಲ್ಲ. ನೀನು ಪ್ರಾರ್ಥಿಸುವುದನ್ನು ಹೃತ್ಪೂರ್ವಕ ಅನುಭವಿಸಬೇಕು. ನಿನ್ನ ಪ್ರಾರ್ಥನೆ ನೆರವೇರುವವರೆಗೂ ತೀವ್ರವ್ಯಾಕುಲತೆ ಮತ್ತು ಉದ್ವೇಗವನ್ನು ಅನುಭವಿಸ ಬೇಕು. ನೀನು ಪ್ರಾರ್ಥಿಸುವ ವಸ್ತುವನ್ನು ದೊರಕಿಸಿಕೊಳ್ಳುವ ಸಾಧನ ವಿಧಾನಗಳಿಗಾಗಿ ಅವಿಶ್ರಾಂತ ಶ್ರಮಿಸಬೇಕು. ನಿನ್ನ ಹಾದಿಯಲ್ಲಿ ಎಷ್ಟೇ ದುಸ್ತರ ಕಷ್ಟ ಬಂದರೂ ಚಿಂತೆಯಿಲ್ಲ; ನಿನ್ನ ಇಡೀ ಜೀವಮಾನವೆಲ್ಲಾ ಅದರ ಮೇಲೆ ನಿಂತಿದೆ ಎಂದು ತಿಳಿದು ಹೃತ್ಪೂರ್ವಕ ಹೋರಾಡು. ಆಗ ಮಾತ್ರ, ನಿನ್ನ ಪ್ರಾರ್ಥನೆ ಸಫಲವಾಗುವುದು. ನಿನ್ನ ಹೃದಯದ ಅಪೇಕ್ಷೆ ಈಡೇರುವುದು. ಕೇವಲ ಅಂತಹ ಪ್ರಾರ್ಥನೆಯನ್ನು ಮಾತ್ರ ಭಗವಂತ ಕೇಳುವನು, ಸಂಪೂರ್ಣಗೊಳಿಸುವನು.

೩೧. ಶ್ರೇಷ್ಠತಮ ಜ್ಞಾನ ಭಕ್ತಿ, ಆಧ್ಯಾತ್ಮಿಕತೆ– ಇವುಗಳ ಸಂಪಾ

ದನೆಗೆ ಮಹತ್ತಾದ ಸ್ವಪ್ರಯತ್ನ ಆವಶ್ಯಕ. ಅವುಗಳನ್ನು ಹೊಂದುವು ದಕ್ಕಾಗಿ ನಾವು ತುಂಬಾ ಹೋರಾಡಬೇಕು. ಆಗ ಮಾತ್ರ ಅವು ನಮ್ಮ ವಾಗಿ ನಮ್ಮಲ್ಲಿಯೇ ಇದ್ದು, ಅನಿರ್ವಚನೀಯವಾದ ಆನಂದದಿಂದ ನಮ್ಮ ಮನಸ್ಸನ್ನು ತುಂಬುತ್ತವೆ. ಯಾರೂ ಇದನ್ನು ಮತ್ತೊಬ್ಬರಿಗೆ ದಾನ ಮಾಡಲಾರರು. ಆಧ್ಯಾತ್ಮಿಕ ಸಾಧನೆಯನ್ನು ಯಾವಾಗಲೂ ದಕ್ಷತೆ ಯಿಂದ ಮಾಡಬೇಕು. ಕೇವಲ ಆಗಮಾತ್ರ ನಮಗೆ ಸಾಕ್ಷಾತ್ಕಾರ ಲಭಿ ಸುವುದು. ನಮ್ಮ ನಮ್ಮ ಆಧ್ಯಾತ್ಮಿಕ ಪರಿಶ್ರಮದ ತೀವ್ರತೆಯಮೇಲೆ ಅದರ ಪರಿಣಾಮ ನಿಂತಿದೆ. ಹೆಚ್ಚು ಕಷ್ಟವಿಲ್ಲದೆ, ಸಂಯಮವಿಲ್ಲದೆ ಅದನ್ನು ಹೊಂದಿದರೆ ಅದು ಅದರ ಮಹತ್ವವನ್ನು ಕಳೆದುಕೊಳ್ಳುತ್ತದೆ. ಅದನ್ನಾರೂ ಹೆಚ್ಚು ಸನ್ಮಾನಿಸುವುದಿಲ್ಲ. ಬಹಳ ಕಷ್ಟಪಟ್ಟು ಆರ್ಜಿಸಿದ ಆನಂದವೂ ಅದರಿಂದ ಸಿಕ್ಕುವುದಿಲ್ಲ. ಅದು ಎಷ್ಟು ಬೇಗ ಸಿಗುವುದೋ ಅಷ್ಟೇ ಬೇಗ ಹೊರಟುಹೋಗುವುದು. ಜೀವನದ ಪೆಟ್ಟನ್ನು ಸಹಿಸುವುದಕ್ಕೆ ಯಾವ ಶಕ್ತಿಯನ್ನೂ ಇದು ಕೊಡಲಾರದು. ಅಪಾಯ ಕಷ್ಟಗಳು ಸಂಭವಿಸಿದಾಗ, ಸಂದಿಗ್ಧ ಸಮಯದಲ್ಲಿ ಸಿಕ್ಕಿಕೊಂಡಾಗ, ದಾರುಣ ದುಃಖ ಕೂಪದಲ್ಲಿ ಬಿದ್ದಾಗ, ಅವೆಲ್ಲಾ ಪೂರ್ಣ ಕೊಚ್ಚಿಕೊಂಡು ಹೋಗುತ್ತವೆ. ಆಧ್ಯಾತ್ಮಿ ಕತೆಯನ್ನು ನಮ್ಮದನ್ನಾಗಿಯೇ ಮಾಡಿಕೊಳ್ಳಬೇಕಾದರೆ, ನಮ್ಮ ಆತ್ಮ ಸಾಕ್ಷಾತ್ಕಾರದ ಯೋಜನೆಯೊಂದರಲ್ಲಿಯೇ ಮುಳುಗಿ, ನಮ್ಮ ಸ್ವಭಾವವೇ ಪೂರ್ಣ ಬದಲಾಯಿಸಿದಂತಾಗಿ, ಬೇರೊಂದು ಸಂಪೂರ್ಣ ಹೊಸ ವ್ಯಕ್ತಿ ಯಾಗಿ ಪರಿಣಮಿಸಬೇಕು. ನಮ್ಮಿಜನ್ಮದಲ್ಲಿಯೇ ಪುನರ್ಜನ್ಮವಾದಂತಿರ ಬೇಕು. ಇದು ಕೇವಲ ಮಕ್ಕಳ ಆಟವೇನು ? ನಮ್ಮ ಪ್ರಾಣವನ್ನೆ ಪಣ ವಾಗಿಟ್ಟು ಪೂರ್ತಿ ಎಚ್ಚೆತ್ತು ನಮ್ಮ ಶಕ್ತಿಮೀರಿ ಅದಕ್ಕಾಗಿ ಹೋರಾ ಡಿದರೆ ಮಾತ್ರ ಅದು ಸಾಧ್ಯ. ಗುರಿಯನ್ನು ಸಾಧಿಸುವವರೆಗೆ ಏಕಾಗ್ರ ಭಕ್ತಿಯಿಂದ ಕೊಂಚವೂ ಕ್ರಮತಪ್ಪದೆ ಸಾಧನೆ ಮಾಡಬೇಕು.

೩೨. ಇತರರಿಗಾಗಿ ಈ ಕ್ಷುದ್ರ ಸ್ವಾರ್ಥವನ್ನು ತ್ಯಜಿಸಿದರೆ ನೀನು ನಿನ್ನ ನಿಜವಾದ ಆತ್ಮನನ್ನು ಕಂಡುಹಿಡಿಯುವೆಯಲ್ಲದೆ ಮತ್ತೊಬ್ಬರ ಆತ್ಮ ವನ್ನೂ ನಿನ್ನದನ್ನಾಗಿ ಮಾಡಿಕೊಳ್ಳುವೆ. ನೀನು ಎಷ್ಟು ಹೆಚ್ಚಾಗಿ ನಿನ್ನ ಕ್ಷುದ್ರ ಅಹಂಕಾರದ ಹಿತಕ್ಕೆ ಪ್ರಯತ್ನಪಡುವೆಯೋ ಅಷ್ಟಷ್ಟೂ ನಿನ್ನ ನಿಜವಾದ ಆತ್ಮವನ್ನು ಕಳೆದುಕೊಳ್ಳುವುದಲ್ಲದೆ ಮತ್ತೊಬ್ಬರ ಪ್ರೇಮ ವನ್ನೂ ಕಳೆದುಕೊಳ್ಳುವೆ.

೩೩. ನಿರಂತರ ಹೋರಾಡು. ವೀರನಂತೆ ಹೋರಾಡು. ಹಿಂತಿರುಗಿ ನೋಡದಿರು. ಎಂದೂ ಮುಂದೆ ಮುಂದೆ ನುಗ್ಗು. ಗುರಿಯೆಡೆಗೆ ಧಾವಿಸು. ದಾರಿಯಲ್ಲಿ ದಣಿವಾಗುವುದೆಂದಾಗಲಿ, ನುಚ್ಚು ನೂರಾಗುವೆನೆಂದೆಂದಾಗಲಿ, ಹಾನಿಯಾಗುವುದೆಂದಾಗಲಿ, ಯಾವುದಕ್ಕೂ ಸ್ವಲ್ಪವೂ ಗಮನಕೊಡಬೇಡ. ಅಭೀಃ! ಅಭೀಃ! ಅಂಜದಿರು! ಕೆಚ್ಚೆದೆಯವನಾಗು! ಅಪಜಯದ ಯೋಚನೆಯೂ ಕೂಡ ನಿನ್ನ ಮನಸ್ಸನ್ನು ಪ್ರವೇಶಿಸದಂತೆ ಮಾಡು. ದೇವರ ಸಾಕ್ಷಾತ್ಕಾರವಾಗಬೇಕು, ಇಲ್ಲವೇ ಈ ಶರೀರ ಬಿದ್ದುಹೋಗಬೇಕು! ಇದೊಂದೇ ನಿನ್ನ ಮಂತ್ರವಾಗಿರಲಿ. ಜಯ ಅಥವಾ ಸಾವು! ಇದೇ ನಿನ್ನ ಪಣವಾಗಿರಲಿ. ನೀನು ಸಾಯಲೇ ಬೇಕಾಗಿದ್ದರೆ ವೀರನಂತೆ ಮರಣ ಹೊಂದು. ಕೇವಲ ಹೀಗೆ ಮಾಡಿದರೆ ಮಾತ್ರ ಬಂಧನದ ಕೋಟೆಯನ್ನು ಭೇದಿಸಲು ಸಾಧ್ಯ.

೩೪. ನಾನು ಅತ್ಯಂತ ದುರ್ಬಲ ದೀನ ಹೀನ ಎಂದು ಗೋಳಿಟ್ಟರೆ ಪ್ರಯೋಜನವಿಲ್ಲ. ಇವು ಕೇವಲ ಹೇಡಿಗಳ, ಸೋಮಾರಿಗಳ, ಮೂರ್ಖರ ಮಾತು. ಇಂಥಹವರಿಂದ ಏನಾದರೂ ಕೆಲಸವಾಗಬಲ್ಲುದೇ? ಹೋರಾಡು, ಸಂಪೂರ್ಣವಾಗಿ ಎಚ್ಚೆತ್ತು ಮುಂದೆ ಹೋಗು. ಆಗ ಮಾತ್ರ ನೀನು ಜಯ ಶಾಲಿಯಾಗುವೆ. ನೀನು ಸುಮ್ಮನೆ, "ಓ ಈ ಹಾದಿ ಎಷ್ಟು ದೂರ ಎಷ್ಟು ಕಷ್ಟ" ಎಂದು ಯೋಚಿಸುತ್ತಾ ಕುಳಿತರೆ ಹಾದಿ ಮುಗಿಯುವು ದೇನು? ಎದ್ದು ನಿಲ್ಲು, ನಡೆಯುವುದಕ್ಕೆ ಪ್ರಾರಂಭಿಸು. ನೀನು ಮುಂದೆ ಮುಂದೆ ಹೋದಂತೆಲ್ಲಾ ದೂರವೂ ಕಡಿಮೆಯಾಗುತ್ತಾ ಬರುವುದು. ಧೈರ್ಯ, ಶಕ್ತಿ, ಉತ್ಸಾಹ, ಅನಿರೀಕ್ಷಿತ ಸಹಾಯ ಎಲ್ಲಾ ಒದಗಿ ಬರು ವುವು. ಕ್ರಮೇಣ ದಾರಿ ಸುಲಭವಾಗಿ ಸುಗಮವಾಗುತ್ತದೆ. ನೀನು ಬೇಗ ನಿನ್ನ ಗುರಿಯನ್ನು ಸೇರುವೆ. ಓ! ಆ ಪೂರ್ಣತೆಯ ಆನಂದ!

೩೫. ಅನೇಕರು ತಾವು ಸದ್ಗುರುವಿನಿಂದ ದೀಕ್ಷೆ ಹೊಂದಿಬಿಟ್ಟರೆ, ತಮ್ಮ ಕಷ್ಟಗಳೆಲ್ಲಾ ಹೇಗೋ ಆತನ ಕೃಪೆಯಿಂದ ಆತನು ಇಚ್ಛಿಸಿದರೆ, ಮಾಯವಾಗುವುದು ಎಂದು ಅಭಿಪ್ರಾಯಪಡುತ್ತಾರೆ! ಹಾಗೆಯೇ ಗುಣ ವಾಗದ ರೋಗಗಳಿದ್ದರೆ ವಾಸಿಯಾಗುವುವು; ತಮಗೆ ಇಚ್ಛಿಸಿದ ಉದ್ಯೋಗ ಗಳು ದೊರಕುವುವು; ಪ್ರಾಪಂಚಿಕ ಸುಖ ಮತ್ತು ವೈಭವಗಳುಂಟಾಗು ವುವು; ತಮ್ಮ ಹೆಣ್ಣುಮಕ್ಕಳಿಗೆ ಯೋಗ್ಯ ವರ ಸಿಕ್ಕಿ ಬೇಗ ಮದುವೆಯಾಗು ವುದು; ಶಾಲೆ ಅಥವಾ ವಿಶ್ವವಿದ್ಯಾನಿಲಯಗಳಲ್ಲಿ ಯಶಸ್ಸು ಸಿಕ್ಕುವುದು;

ತಮ್ಮ ಕೋರ್ಟು ವ್ಯವಹಾರದಲ್ಲಿ ಜಯ ಲಭಿಸುವುದು ; ವ್ಯಾಪಾರ ಕಾರ್ಯ ಗಳಲ್ಲಿ ಏಳ್ಗೆ ದೊರೆಯುವುದು ; ಶನಿಯೇ ಮುಂತಾದ ಗ್ರಹಗಳ ಉಪದ್ರವ ಗಳಿಂದ ಬಿಡುಗಡೆಯಾಗುವುದು – ಎಂದು ಏನೇನೋ ತಿಳಿದುಕೊಂಡಿರು ವರು ! ಅವರು ತಮ್ಮ ಗುರುವಿನಲ್ಲಿ ಬೇಡಿಕೊಳ್ಳುವ ಪ್ರಾರ್ಥನೆಗಳಿಗೆ ತುದಿ ಮೊದಲೇ ಇಲ್ಲ! ದೀಕ್ಷೆ ಮತ್ತು ಈ ತುಚ್ಛ ಐಹಿಕ ವಿಚಾರಗಳಿಗೂ ಏನೇನೂ ಸಂಬಂಧವಿಲ್ಲವೆಂಬುದನ್ನು ಅವರು ಚೆನ್ನಾಗಿ ಅರಿತುಕೊಳ್ಳಬೇಕು. ಇಂತಹ ಅನುಗ್ರಹವನ್ನು ಗುರುವಿನಲ್ಲಿ ಯಾಚಿಸುವುದು ತಿಳಿಗೇಡಿತನ; ಇದು ಖಂಡಿತ ಆಧ್ಯಾತ್ಮಿಕತೆಯ ಕುರುಹಲ್ಲ. ಗುರು ಸರ್ವಶಕ್ತನಾದ ಭಗವಂತನಲ್ಲ, ಪ್ರಾಪಂಚಿಕ ವರಗಳನ್ನು ಹಂಚುವುದಕ್ಕೆ. ಆತ ಈ ಭೂಮಂಡಲದ ಜನರ ಭವಿಷ್ಯಾಧಿಕಾರಿಯಲ್ಲ. ಆತನನ್ನು ಈ ಬೇಡಿಕೆ ಗಳಿಂದ ಕಾಡಿ ತೊಂದರೆ ಕೊಡುವುದು ಶುದ್ಧ ತಪ್ಪು. ಅವು ಗುರುವಿನ ಮನಸ್ಸಿನಲ್ಲಿ ಅಸಂತೋಷವನ್ನುಂಟುಮಾಡುತ್ತವೆಯೇ ಹೊರತು ಆತನ ಅನುಗ್ರಹ ಅಥವಾ ಆಶೀರ್ವಾದಗಳನ್ನು ಹೊಂದುವಂತೆ ಮಾಡುವುದಿಲ್ಲ. ಗುರುಶಿಷ್ಯರಸಂಬಂಧ ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸಿರುವುದು. ಅವು ಕೇವಲ ಆಧ್ಯಾತ್ಮಿಕ ವಿಷಯಕ್ಕೆ ಮಾತ್ರ ಸಂಬಂಧಿಸಿವೆ.

೩೬. ಫಲಾಪೇಕ್ಷೆಯಿಂದ ಮಾಡುವ ಪೂಜೆ ಅಥವಾ ಸೇವೆ ಒಂದು ವ್ಯಾಪಾರ. ಇದರಿಂದ ಧರ್ಮೋಪಲಬ್ಧಿಯಾಗಲಾರದು. ಇದರಿಂದೇನಾ ದರೂ ಫಲ ದೊರಕಿದರೆ ಅದು ಕೇವಲ ಅಲ್ಪ ಮತ್ತು ಕ್ಷಣಿಕ. ಫಲಾ ಪೇಕ್ಷೆಯಿಂದ ಕೂಡಿದ ಪೂಜೆ ಎಂದಿಗೂ ಮನಸ್ಸನ್ನು ಪವಿತ್ರಗೊಳಿಸ ಲಾರದು. ಅದು ದೇವರಿಗಾಗಿ ನಿಕಟವಾದ ಭಕ್ತಿ, ಮೋಕ್ಷ, ಶಾಶ್ವತ ಶಾಂತಿ ಅಥವಾ ಆನಂದ ಇವೊಂದನ್ನೂ ಕೊಡುವುದಿಲ್ಲ. ಇಂತಹ ಆಸೆ ಅಥವಾ ಉದ್ದೇಶದಿಂದ ಪ್ರೇರೇಪಿತರಾಗಿ ಅರ್ಪಿಸಿದ ವಸ್ತುಗಳನ್ನು ಶ್ರೀ ರಾಮ ಕೃಷ್ಣರು ಸ್ವೀಕರಿಸುವುದಿರಲಿ, ಕೈಯಿಂದ ಕೂಡ ಮುಟ್ಟುತ್ತಿರಲಿಲ್ಲ.

೩೭. ಈ ಜನ್ಮದಲ್ಲೇ ಮೋಕ್ಷ ಸಿದ್ಧಿಸಬೇಕಾದರೆ ನಮ್ಮ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಅರ್ಪಿಸಿ ಸಾಧನೆ ಮಾಡಬೇಕು. ನಮ್ಮ ಸರ್ವಸ್ವ ವನ್ನೂ ಆತನಿಗೆ ಅರ್ಪಿಸಬೇಕು. ಸಾಧ್ಯವಾದರೆ ಇನ್ನೂ ಹೆಚ್ಚಾಗಿ ಆತನಿಗೆ ಅರ್ಪಿಸಬೇಕು. ಶ್ರೀ ರಾಮಕೃಷ್ಣರು ಹೇಳುತ್ತಿದ್ದಂತೆ, ಶ್ರದ್ಧಾಭಕ್ತಿಗಳನ್ನು ನಮ್ಮಲ್ಲಿರುವುದಕ್ಕಿಂತ ಹೆಚ್ಚಾಗಿ ಹೊಂದಬೇಕು. ಇದರ ಅರ್ಥವೇನೆಂದರೆ, ನಮ್ಮ ಭಕ್ತಿ ಶ್ರದ್ಧೆ ತುಂಬಿ ತುಳುಕಾಡುವ ಪಾತ್ರೆಯಂತಿರಬೇಕು. ಯಾರಿಗೆ

ಇಷ್ಟೊಂದು ವಿಪುಲವಾದ ಪ್ರಮಾಣದಲ್ಲಿ ಶ್ರದ್ಧೆ ಭಕ್ತಿಗಳಿವೆ? ಆದರೆ ನಿರಾಶೆಗೆ ಕಾರಣವಿಲ್ಲ. ನಿನ್ನ ಶಕ್ತಿಮೀರಿ ಸಾಧನೆಮಾಡು. ಆದರೆ ಇದೊಂದನ್ನು ಮಾತ್ರ ಚೆನ್ನಾಗಿ ನೆನಪಿನಲ್ಲಿಡು – ನೀನೆಷ್ಟೇಕಷ್ಟಪಟ್ಟರೂ ಅದು ಅತ್ಯಲ್ಪ. ಆತ್ಮಸಾಕ್ಷಾತ್ಕಾರ ಧ್ಯೇಯವಾಗಿರುವಾಗ ಎಷ್ಟೇ ಕಷ್ಟ ಪಟ್ಟರೂ ಸಾಲುವುದಿಲ್ಲ. ಕಟ್ಟಕೊನೆಗೆ ನಾವು ಗುರಿಯನ್ನು ಆತನ ಕೃಪೆ ಯಿಂದ ಮಾತ್ರ ಸೇರಲು ಸಾಧ್ಯ.

೩೮. ಆದರೆ ಯಾರು ತನ್ನ ಶಕ್ತಿಮೀರಿ ಪ್ರಯತ್ನಪಟ್ಟಿರುವನೋ, ತನ್ನನ್ನು ಸ್ವಲ್ಪವೂ ಲೆಕ್ಕಿಸಿಲ್ಲವೊ, ವಿಮುಖನಾಗಿಲ್ಲವೋ, ಯಾರು ತಾನು ಸಾಮರ್ಥ್ಯಮೀರಿ ಕಠೋರವಾಗಿ ಹೋರಾಡಿದರೂ ಭಗವಂತನ ಕೃಪೆ ಯಿಲ್ಲದೆ ಕೇವಲ ಸ್ವಪ್ರಯತ್ನದಿಂದ ಆತನ ದರ್ಶನ ದುರ್ಲಭವೆಂದು ಮನ ಗಂಡಿದ್ದಾನೋ, ಅಂತಹವನ ಮೇಲೆ ಮಾತ್ರ ಭಗವತ್ಕಟಾಕ್ಷ ಬೀಳುವುದು. ಯಾವಾಗ ಸಾಧಕ ಅಭೇದ್ಯವಾದ ಗಾಢಾಂಧಕಾರದಲ್ಲಿ ಸಿಲುಕಿ, ಅಪಾರ ವಾದ ಜಲರಾಶಿಯಲ್ಲಿ ತಾನು ಎಷ್ಟೇ ಪ್ರಯತ್ನಪಟ್ಟರೂ ತೇಲುವುದಕ್ಕೆ ಸಂಪೂರ್ಣ ಶಕ್ತಿಯುಡಗಿದವನಾಗಿ ಇನ್ನೇನು ಮುಳುಗಿ ಹೋಗುವ ಸಂಭವ ಬಂತೆಂದು ತಿಳಿಯುವನೋ ಕೇವಲ ಆಗ ಮಾತ್ರ ಭಗವಂತನು ತನ್ನ ಕರ ಕಮಲಗಳಿಂದ ಆತನನ್ನು ಹಿಡಿದೆತ್ತಿ ಜನನ ಮರಣದಿಂದ ಪಾರುಮಾಡು ವನು. ಅನಂತ ಆನಂದ, ಅನಂತ ಶಾಂತಿ ಇರುವ ಸ್ಥಳಕ್ಕೆ ಕರೆದೊಯ್ಯು ವನು. ಆ ಸಚ್ಚಿದಾನಂದ ಕಡಲಿನ ಕೇವಲ ಒಂದು ಬಿಂದುವನ್ನು ಹೊಂದಿ ದರೂ ಆ ಜೀವಿ ಎಣೆಯಿಲ್ಲದ ಆನಂದವನ್ನನುಭವಿಸುವನು.

೩೯. ನೀನೇಕೆ ಪ್ರಪಂಚ ನಿನ್ನನ್ನು ನುಂಗಿಬಿಡುವುದೆಂದು ಇಷ್ಟೊಂದು ಹೆದರುವೆ? ಧೈರ್ಯಶಾಲಿಯಾಗು, ಭಯವನ್ನು ಬಿಡು, ವೀರ ನಾಗು. ಪ್ರಪಂಚವನ್ನು ಹಗುರವಾಗಿ ನೋಡು. ಆಗ ಪ್ರಪಂಚವೇ ನಿನ್ನ ಮೇಲಿನ ಹಿಡಿತವನ್ನು ಸಡಿಲಮಾಡುವುದು. "ನಾನು ದುರ್ಬಲ, ಅತ್ಯಂತ ಕೀಳು, ಪಾಪಿಷ್ಠ, ನಾನು ಕೆಲಸಕ್ಕೆ ಬಾರದವನು. ನನ್ನಿಂದ ಯಾವ ಕೆಲಸವೂ ಈಡೇರುವುದಿಲ್ಲ. ನಾನು ಯಾವುದನ್ನು ಮಾಡಲೂ ಅಸ ಮರ್ಥ". ಇಂತಹ ಅಲ್ಪರ ಭಾವನೆಗಳನ್ನು ನೀನು ತ್ಯಜಿಸುವವರೆಗೆ ಜೀವನದಲ್ಲಿ ನೀನೆಂದೂ ಜಯಶಾಲಿಯಾಗಲಾರೆ. ನಿನ್ನ ಮನಸ್ಸಿನಿಂದ ಈ ಭಾವನೆಗಳನ್ನು ಸಂಪೂರ್ಣ ತೊಡೆದುಹಾಕು! ಎದ್ದು ನಿಲ್ಲು! ವೀರನಂತೆ ಹೇಳು – ನಾನು ಮಾಡುವುದಕ್ಕಾಗದೇ ಇರುವುದು ಏನಿದೆ? ನಾನು

ಅಮೃತ ಪುತ್ರ. ಅಮೃತತ್ವ ನನ್ನ ಆಜನ್ಮಸಿದ್ಧ ಹಕ್ಕು. ಯಾವುದೂ ಅದನ್ನು ನನ್ನಿಂದ ತೆಗೆದುಕೊಳ್ಳಲಾರದು.

೪೦. ಯಾವಾಗ ನಿನ್ನ ಮನಸ್ಸನ್ನು ದುರ್ಬಲತೆ ಅಶಾಂತಿ ಆವರಿಸುವುದೋ ಆಗ ಈ ಕೆಳಗಡೆ ಇರುವ ಪದ್ಯವನ್ನು ಪಠಿಸು:

"ಪವಿತ್ರಮಯ ನಾನು, ಬೇರಲ್ಲ; ನಿರ್ಗುಣ ಬ್ರಹ್ಮ. ಕಷ್ಟನಷ್ಟಗಳು ನನ್ನನ್ನು ಮುಟ್ಟಲಾರವು. ನಾನು ಸಚ್ಚಿದಾನಂದ, ಸ್ವಭಾವತಃ ನಿತ್ಯ ಮುಕ್ತನು ನಾನು. ಹೇ ಮನಸ್ಸೆ! ಉಚ್ಚರಿಸು, "ಓಂ ತತ್ ಸತ್ ಓಂ."

೪೧. ದೇವರ ಸ್ಮರಣೆ ಮಾಡು. ಸಾಧ್ಯವಾದಷ್ಟು ಅವನನ್ನು ಮನನ ಮಾಡು. ಆತನು ನಿನ್ನವನೇ. ನಿನ್ನ ಸ್ವಂತ ಆತ್ಮಕ್ಕಿಂತ ಇನ್ನೂ ಹತ್ತಿರದವನು, ಪ್ರೀತಿಪಾತ್ರನೆಂದು ತಿಳಿ. ಯಾರು ನಿನ್ನ ಇಹ ಮತ್ತು ಪರ ಜೀವನದ ಆಧಾರಭೂತನಾಗಿ ಆಶ್ರಯದಾತನಾಗಿರುವನೋ ಆತನನ್ನೇ ತ್ರಿಕರಣ ಪೂರ್ವಕ ಪ್ರೀತಿಸು. ಒಬ್ಬನು ತಾನು ಪ್ರೀತಿಸುವವರನ್ನು ನೆನೆಯುತ್ತಾ, ಅದರಿಂದ ಸಂತೋಷಾನಂದವನ್ನು ಪಡೆಯುತ್ತಾನೆ. ತನಗೆ ಪ್ರಿಯನಾದವನ ಹತ್ತಿರವೇ ಯಾವಾಗಲೂ ಇರಬೇಕೆಂದು ಇಚ್ಛಿಸುತ್ತಾನೆ. ಆತನನ್ನು ದೂರಮಾಡುವ ಯಾವ ಬಗೆಯ ಸಂಭಾಷಣೆ ಅಥವಾ ಆಕರ್ಷಣೆಗೂ ಕಿವಿಗೊಡುವುದಿಲ್ಲ. ಆದರೂ ಈ ಮರ್ತ್ಯಲೋಕದ ಪ್ರೇಮ ಈ ಜಗತ್ತಿನ ಉಳಿದ ಎಲ್ಲಾ ವಸ್ತುಗಳಂತೆ ಅಗಲಿಕೆ ಮತ್ತು ಅಂತ್ಯವನ್ನು ಹೊಂದಿದೆ. ಆದರೆ ಭಗವಂತನ ಮೇಲಿನ ಪ್ರೇಮಕ್ಕೆ ಮಿತಿಯೇ ಇಲ್ಲ. ಅದು ಎಂದಿಗೂ ತೀರಿಹೋಗದ ಅಮೂಲ್ಯ ವಸ್ತು. ನೀನು ಅದರ ಪಾನ ಮಾಡಿದಷ್ಟೂ, ಅದರ ಬಾಯಾರಿಕೆ ಹೆಚ್ಚುವುದು. ಕಟ್ಟಕಡೆಗೆ ನೀನು ಆ ಸಚ್ಚಿದಾನಂದದಲ್ಲಿ ನಿನ್ನನ್ನೇ ಮರೆತು ಅದರಲ್ಲಿ ಸಂಪೂರ್ಣ ತನ್ಮಯನಾಗುವೆ. ಆಗ ಈ ಕ್ಷುದ್ರವ್ಯಕ್ತಿತ್ವ ಕರಗಿಹೋಗಿ ದೇವತ್ವ ಅದರ ಸ್ಥಳವನ್ನಾಕ್ರಮಿಸುವುದು. ಈ ಶವಸದೃಶ ಬಾಳಿನಲ್ಲಿ ಶಿವನ ಪರಂಜ್ಯೋತಿ ಹೊಳೆಯುವುದು, ನಿನ್ನ ಆತ್ಮವನ್ನು ಪ್ರಕಾಶಗೊಳಿಸುವುದು. ಮರಣ ಭಯದಿಂದ ಪಾರಾಗಿ ನಿತ್ಯ ಅಮೃತತ್ವವನ್ನು ಪಡೆವೆ.

೪೨. ಆಧ್ಯಾತ್ಮಿಕ ವಿಚಾರವನ್ನು ನೀನು ಸಾಕಷ್ಟು ಓದಿರುವೆ, ಕೇಳಿರುವೆ. ಆ ಉಪದೇಶದಂತೆ ನಿನ್ನ ನಿತ್ಯ ಜೀವನದಲ್ಲಿ ನಡೆಯಲು ಸ್ವಲ್ಪವೂ ಪ್ರಯತ್ನಿಸದಿದ್ದಲ್ಲಿ ನೀನೆಷ್ಟು ಸಲಹೆಯನ್ನು ಪಡೆದರೂ ಏನೂ ಪ್ರಯೋಜನವಿಲ್ಲ. ಯಾರೂ ನಿನಗೆ ಏನನ್ನೂ ಮಾಡಲಾರರು. ನೀನೇ

ಅದನ್ನು ಮಾಡಿಕೊಳ್ಳಬೇಕು. ಅಪ್ರಚಲಿತವಾದ ಆಸಕ್ತಿಯಿಂದ ನೀನು ಕಾರ್ಯೋನ್ಮುಖನಾದರೆ ದೇವರೇ ನಿನಗೆ ಸಹಾಯಕನಾಗುವನು. ಆತನ ಕೃಪಾಕಟಾಕ್ಷವೂ ನಿನ್ನಮೇಲೆ ಬೀಳುವುದು. ದೇವರು ಅಂತಹ ಮನುಷ್ಯನ ಹೊರೆಯನ್ನು ತನ್ನ ಹೆಗಲಿನ ಮೇಲೆ ಹೊತ್ತು ಸ್ವಲ್ಪದೂರದ ವರೆಗೆ ನಡೆಸುತ್ತಾನೆ. ಮೊದಲು ಸ್ವಪ್ರಯತ್ನ, ನಂತರ ಭಗವತ್ಕೃಪೆ, ಕೊನೆಗೆ ಸತ್ಯಸಾಕ್ಷಾತ್ಕಾರ.

೪೩. ನಿಜವಾದ ಆಧ್ಯಾತ್ಮಿಕತೆಯನ್ನು ಗಳಿಸಬೇಕಾದರೆ ಬಹಳ ಕಷ್ಟ. ಎಲ್ಲರಿಗೂ ಅದು ದೊರಕುವುದಿಲ್ಲ. ಪೂರ್ವ ಜನ್ಮದ ಒಳ್ಳೆಯ ಸಂಸ್ಕಾರ, ಒಳ್ಳೆಯತನ, ಪ್ರಾಮಾಣಿಕತೆ, ನಿಷ್ಕಾಪಟ್ಯ, ಉತ್ಕಟ ಆಕಾಂಕ್ಷೆ ನಮ್ಮಲ್ಲಿ ಇದ್ದೇ ತೀರಬೇಕು. ಅಪಾರ ಪ್ರೇಮ ಕರುಣಾ ಪೂರಿತ ರಾದ ಶ್ರೀ ರಾಮಕೃಷ್ಣರೇ, ಯಾರು ಪ್ರಾಪಂಚಿಕತೆಯಲ್ಲಿ ತನ್ಮಯರಾಗಿರು ವರೋ ಅಂಥವರನ್ನು, "ಅವರು ಹಸಿ ಕಟ್ಟಿಗೆಯಂತೆ, ಸಾಕ್ಷಾತ್ಕಾರ ಅವರಿಗೆ ಈ ಜನ್ಮದಲ್ಲಿ ಇಲ್ಲ" ಎಂದು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ.

೪೪. ಜಪ ಮತ್ತು ಧ್ಯಾನವನ್ನು ಕೇವಲ ಬಲಾತ್ಕಾರದಿಂದ ಮಿತಿ ಮೀರಿ ಮಾಡಿ, ಪ್ರಯಾಸದಿಂದ ದಣಿಯುವುದನ್ನು ಖಂಡಿತ ವರ್ಜಿಸ ಬೇಕು. ಅದರಿಂದ ಒಳ್ಳೆಯದಾಗುವುದಕ್ಕಿಂತ ಹೆಚ್ಚು ಕೆಟ್ಟ ಪರಿಣಾಮ ವಾಗುತ್ತದೆ. ಜಪ ಮತ್ತು ಧ್ಯಾನಕ್ಕೆ ವಿನಿಯೋಗಿಸಿರುವ ಕಾಲವನ್ನು ನಿಧಾನವಾಗಿ ಕ್ರಮೇಣ ಹೆಚ್ಚಿಸುತ್ತಾ ಹೋಗು. ನಿನ್ನಲ್ಲಿ ನಿಜವಾದ ಅಂತಃ ಶುದ್ಧಿ, ಭಕ್ತಿ ಮತ್ತು ದೃಢಸಂಕಲ್ಪವಿದ್ದರೆ ಆತನ ಕೃಪೆಯಿಂದ ಕಾಲ ಕ್ರಮೇಣ ನೀನಿಚ್ಛೆಪಟ್ಟುದೆಲ್ಲವನ್ನೂ ಹೊಂದುವೆ.

೪೫. ಜಪ ಮತ್ತು ಧ್ಯಾನವನ್ನು ಹೆಚ್ಚು ನಿಷ್ಠೆ, ದೀರ್ಘ ಪ್ರಯತ್ನ, ಮತ್ತು ತಾಳ್ಮೆಯಿಂದ ಮಾಡುತ್ತಾಹೋಗು. ಕ್ರಮೇಣ ಮನಸ್ಸು ಶಾಂತ ವಾಗುವುದು, ಧ್ಯಾನ ಗಾಢವಾಗುವುದು. ಧ್ಯಾನದ ಮೇಲೆ ಆಸಕ್ತಿ ಹುಟ್ಟ ನೀನು ಒಂದು ದಿನ ಅದನ್ನು ಮಾಡದೇ ಹೋದರೆ ಎಲ್ಲವೂ ನಿನಗೆ ನಿಸ್ಸಾರವಾದಂತೆ ಕಾಣುತ್ತದೆ. ಕುಡುಕನಿಗೆ ಕ್ಲುಪ್ತಕಾಲದಲ್ಲಿ ಮಾದಕ ವಸ್ತು ತಪ್ಪಿದಂತೆ ಪೇಚಾಡುವೆ. ನೀನೊಬ್ಬನೇ ಏಕಾಂಗಿಯಾಗಿ ಧ್ಯಾನ ದಲ್ಲೇ ತನ್ಮಯನಾಗಲು ಬಯಸುವೆ.

೪೬. ಬ್ರಹ್ಮ ಮತ್ತು ಶಕ್ತಿ, ಪುರುಷ (ಶುದ್ಧಾತ್ಮ) ಮತ್ತು ಪ್ರಕೃತಿ ಎರಡೂ ಒಂದರಲ್ಲಿರುವುದು ಮತ್ತು ಒಂದೇ ಎರಡಾಗುವುದು.

ವಾಸ್ತವವಾಗಿ ಅವೆರಡೂ ಬೇರೆಯಲ್ಲ. ನಮಗೆ ಎಲ್ಲಿಯವರೆಗೆ ದ್ವೈತದ ಭಾವನೇ ಇರುವುದೋ, ಎಲ್ಲಿಯವರೆಗೆ ಉಪಾಸ್ಯ ಉಪಾಸಕ ಭಾವನೆ ಇರುವುದೋ ಅಲ್ಲಿಯವರೆಗೆ ಈ ಭೇದ ಭಾವ ನಮ್ಮಲ್ಲಿರುವುದು.

೪೭. ಸ್ವಪ್ನದಲ್ಲಿ ನಮ್ಮ ಗುರು, ಇಷ್ಟದೇವತೆ ಮತ್ತು ಇತರ ದೇವ ದೇವಿಯರನ್ನು ಕಂಡರೆ ಬಹಳ ಒಳ್ಳೆಯದು. ಅದು ನಮಗೆ ಹೆಚ್ಚು ಉತ್ತೇಜನಕಾರಿಯಾಗಿ ಹರ್ಷವಾಗುವುದು. ಆದರೆ ನಿನಗೆ ಆಗಾಗ ಅಂತಹ ಸ್ವಪ್ನಗಳು ಬರದಿದ್ದರೆ ಅದಕ್ಕಾಗಿ ವ್ಯಥೆಪಡಬೇಡ, ಚಿಂತಿಸಬೇಡ. ನಿನಗೆ ಅವುಗಳ ಅನುಭವವಾದರೆ ಸಿಕ್ಕಿದವರೊಡನೆ ಅದನ್ನು ವಿವರಿಸುತ್ತಾ ಹೋಗಬೇಡ. ನಿನಗಿಷ್ಟವಿದ್ದರೆ ಅದನ್ನು ನಿನ್ನ ಗುರುವಿನೊಡನೆ ಹೇಳು. ಆದರೆ, ನಿನ್ನ ಸ್ವಪ್ನದ ಪ್ರತಿಯೊಂದು ಭಾಗಕ್ಕೂ ಅರ್ಥವನ್ನು ಹುಡುಕುವ ಗೋಜಿಗೆ ಹೋಗಿ ನಿನ್ನ ತಲೆ ಕೆಡಿಸಿಕೊಳ್ಳಬೇಡ. ಕನಸು ಎಷ್ಟಾದರೂ ಕನಸೇ. ಅದರಲ್ಲಿ ಒಂದು ಐಕ್ಯತೆ ಮತ್ತು ಸಮಂಜಸವನ್ನು ನಿರೀಕ್ಷಿಸುವುದು ಭ್ರಾಂತಿ. ಸಾಕ್ಷಾತ್ಕಾರದ ವೇಳೆಯಲ್ಲಿ ಅಥವಾ ಧ್ಯಾನಮಗ್ನರಾಗಿರುವಾಗ ನೇರವಾಗಿ ದೇವರಿಂದ ಆದೇಶಪಡೆದಾಗ ಮಾತ್ರ ಇದು ಸಾಧ್ಯ. ಆಗ ಅನುಮಾನಕ್ಕೆ ಕಾರಣವೇ ಇರುವುದಿಲ್ಲ. ಇದನ್ನು ಹೊಂದಿದ ಮನುಷ್ಯನ ಸಂಪೂರ್ಣ ಜೀವನವೇ ಬದಲಾವಣೆಹೊಂದಿ ಆತನು ದೈವೀ ಮನುಷ್ಯನಾಗುತ್ತಾನೆ. ಅಂತಹ ಅನುಭವಗಳು ಸಿಕ್ಕಿದವರಿಗೆ ಬರುವುದಿಲ್ಲ. ಅದು ದೀರ್ಘಕಾಲದ ಉಗ್ರಸಾಧನೆ, ಭಗವತ್ಕೃಪೆಯ ಮೇಲೆ ನಿಂತಿದೆ.

೪೮. ಕೆಲವರು ಸ್ವಪ್ನದಲ್ಲಿ ಮಂತ್ರೋಪದೇಶವನ್ನು ಪಡೆಯುತ್ತಾರೆ. ಆದರೆ ಅನೇಕ ವೇಳೆ ಅಂತಹ ಮಂತ್ರಗಳು ಶಾಸ್ತ್ರೋಕ್ತವಾಗಿರುವುದಿಲ್ಲ. ಅವುಕೇವಲ ನಮ್ಮ ಕಲ್ಪನೆ ಅಥವಾ ಪಾಂಡಿತ್ಯ ಜನಿತ. ಆದರೂ ಆ ಮಂತ್ರವನ್ನು ಶ್ರದ್ಧೆಯಿಂದ ಜಪಿಸುತ್ತಾ ಹೋದರೆ ಕಾಲಕ್ರಮೇಣ ಅದರಿಂದಲೂ ಸಾಕ್ಷಾತ್ಕಾರವಾಗಬಹುದು.

೪೯. ಧ್ಯಾನವನ್ನು ಒಂದು ಏಕಾಂತ ಸ್ಥಳದಲ್ಲಿ ಮಬ್ಬಾದ ಬೆಳಕಿನಲ್ಲಿ ಅಥವಾ ಕತ್ತಲೆಯಲ್ಲಿ ಕುಳಿತು ಸಾಧನೆ ಮಾಡಿ. ಸಡಿಲವಾದ ಬಟ್ಟೆಯನ್ನು ಧರಿಸಿ. ಬಾಯಿಯನ್ನು ಮುಚ್ಚಿ, ಮೂಗಿನಿಂದ ಉಸಿರಾಡಿ. ಧ್ಯಾನದ ವೇಳೆಯಲ್ಲಿ ಅಂತರ್ಮುಖರಾಗಲು ಯತ್ನಿಸಿ. ಕಣ್ಣುಗಳನ್ನು ಮುಚ್ಚಿ ಹೃದಯದ ಕಮಲದಲ್ಲಿ ಏಕಾಗ್ರಮಾಡಿ, ನಿನ್ನ ಇಷ್ಟದೇವರು ಪ್ರಕಾಶಮಾನವಾಗಿ ಅಲ್ಲಿ ನೆಲಸಿರುವನೆಂದು ಭಾವಿಸಿ.

೫೦. ಧ್ಯಾನಮಾಡುವಾಗ ದೇಹಾಭಿಮಾನವನ್ನು ತೊರೆ. ದೇಹ ನಾನೆಂಬ ಭಾವನೆಯನ್ನು ಮರೆ. ನಾನು ಅವ್ಯಕ್ತ ಎಂದು ಭಾವಿಸು. ಅದರ ಮೇಲೆ, "ನಾನು, ನನ್ನದು" ಎಂಬ ಭಾವನೆ ಆರೋಪಿತ, ಭ್ರಾಂತಿ. ನಿನ್ನ ಇಷ್ಟದೇವತೆ ನಿತ್ಯ ಶುದ್ಧ, ಬುದ್ಧ, ಚೈತನ್ಯಸ್ವರೂಪನೆಂದು, ಉಪಾಧಿದೂರನೆಂದೂ ಭಾವಿಸು. ಧ್ಯಾನಿಸುತ್ತಿರುವಾಗ ಆ ಪರಮಾತ್ಮನು ಜೀವಾತ್ಮನನ್ನು ವ್ಯಾಪಿಸಿರುವನೆಂದು ಯೋಚಿಸು. ನಿನ್ನ ಜೀವಾತ್ಮ ಪರಮಾತ್ಮನಲ್ಲಿದೆ ಎಂದೂ ಭಾವಿಸು. ವಾಸ್ತವಿಕವಾಗಿ ಆತನ ನಿಜ ಸಾರವೇ ನಿನ್ನಲ್ಲಿಯೂ ಇರುವುದು. ವ್ಯತ್ಯಾಸವಿರುವುದು ಸ್ಪಷ್ಟತೆಯ ತರತಮದಲ್ಲಿ ಮಾತ್ರ. ಇವುಗಳ ನಿಜಾರ್ಥವನ್ನರಿಯಬೇಕಾದರೆ ಸಾಧನೆ ಆವಶ್ಯಕ. ಕೇವಲ ಮಾತಿನಲ್ಲಿ ವರ್ಣಿಸಲಸದಳ. ಬದ್ಧ ಆತ್ಮವೇ ಜೀವ, ಮುಕ್ತ ಆತ್ಮವೇ ಶಿವ.

೫೧. ನೀನು ಧ್ಯಾನಕ್ಕೆ ಕುಳಿತುಕೊಳ್ಳುವಾಗ ಹೀಗೆ ಯೋಚಿಸಿ ಪ್ರಾರ್ಥಿಸು: "ಹೇ ಪ್ರಭು ಪಾರಮಾರ್ಥಿಕ ದೃಷ್ಟಿಯಿಂದ ನಿನ್ನ ಸ್ವರೂಪವೇ ನಾನು ಆಗಿರುವೆ. ನನ್ನ ಈ ದುರವಸ್ಥೆಗೆ ನಿಜವಾದ ಕಾರಣ ನಾನು ಈ ಮಾಯಾಪಾಶದಲ್ಲಿ ಸಿಕ್ಕಿರುವೆ, 'ನಾನು, ನನ್ನದು' ಎಂಬ ಭ್ರಾಂತಿಗೆ ಬದ್ಧನಾಗಿರುವೆ. ದೇಹವೇ ಆತ್ಮವೆಂದು ತಪ್ಪುತಿಳಿದಿರುವೆ. ಕುಚಿಂತೆ ಕುವಾಸನೆ ಕುವೃತ್ತಿಗೆ ವಶನಾಗಿ ಇಂತಹ ದುರ್ದಶೆಗೆ ಬಂದಿರುವೆನು. ಹೇ ದೇವ! ನಾಸು ರೋಗ, ಶೋಕ, ದುಃಖ ದೈನ್ಯ ಭಯ ಭಾವನೆಗೆ ಒಳಗಾಗಿರುವೆನು. ದೀನ ಹೀನ ಮಲಿನನಾಗಿರುವೆ. ಮೃತ್ಯುವಶನಾಗಿರುವೆ. ವಿಷಯ ವಸ್ತುಗಳ ಅಧೀನಕ್ಕೆ ಒಳಗಾಗಿರುವೆ. ನಾನು ಅಸಹಾಯಕ, ಆಶ್ರಯ ರಹಿತ, ದರಿದ್ರ, ಅಲ್ಪ, ದುರ್ಬಲ ಮತ್ತು ನಿಷ್ಪ್ರಯೋಜಕ. ನಿನ್ನ ಅಪಾರ ಕರುಣೆಯಿಂದ ನನ್ನಲ್ಲಿ ಕನಿಕರವಿಡು. ಭಗವಂತ! ನನ್ನ ಸಮಸ್ತ ಪಾಪರಾಶಿ, ದೋಷರಾಶಿ, ಅಭಾವರಾಶಿ, ದುರ್ದಶರಾಶಿ ಇವನ್ನು ಅಮೂಲಾಗ್ರ ನಾಶಗೊಳಿಸು. ನಿನ್ನ ನಿತ್ಯ ಸತ್ಯ ಸ್ವರೂಪವನ್ನು ಪಡೆಯುವಂತೆ ಮಾಡು. ನಿನ್ನ ಯಥಾರ್ಥ ಸ್ವರೂಪವಾದ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವನ್ನು ಅರಿಯುವಂತೆಮಾಡು. ನನ್ನ ಅಂತರಾಳದಲ್ಲಿ ಅನಂತ ಶಕ್ತಿ ನಿರ್ಜೀವ ಅವಸ್ಥೆಯಲ್ಲಿ ನಿದ್ರಿತವಾಗಿದೆ. ಅದನ್ನು ಜಾಗ್ರತಗೊಳಿಸು."

೫೨. ಇಷ್ಟದೇವತೆಯ ಮೇಲೆ ಧ್ಯಾನಿಸಬೇಕಾದರೆ ಸ್ವಲ್ಪ ಕಲ್ಪನೆ,

ಭಾವನೆ ಅವಶ್ಯಕ. ಬರೀ ಅಸಂಸ್ಕೃತ ಶುಷ್ಕಭಾವನೆ ಮತ್ತು ಜಡ ದೃಷ್ಟಿಯಿಂದ ಪ್ರಯೋಜನವಿಲ್ಲ. ವ್ಯವಹಾರ ದೃಷ್ಟಿಯೇ ಪ್ರಾಮುಖ್ಯವಾದ ಪ್ರಾಪಂಚಿಕ ದೃಷ್ಟಿಯಿಂದ ಪ್ರಯೋಜನವಿಲ್ಲ. ಇಷ್ಟದೇವರು ಕರುಣಾಪೂರಿತ ನಯನದಿಂದ ಹೃದಯಾಕಾಶದಲ್ಲಿ ಅಥವಾ ಹೃದಯ ಪದ್ಮದಲ್ಲಿ ನೆಲೆಸಿರುವನೆಂದು ಭಾವಿಸಬೇಕು. ಅದರಂತೆಯೇ ಯೋಗದಲ್ಲಿ ಬರುವ ಶಟ್ಚಕ್ರಗಳು, ಆರು ಪದ್ಮಗಳು ಅಥವಾ ಸ್ನಾಯುು ಕೇಂದ್ರಗಳು ದೇಹವಲ್ಲಿ ಇಲ್ಲ. ನಾವು ಅದನ್ನು ನೋಡಲಾರೆವು. ಅವು ಇಂದ್ರಿಯ ಗೋಚರವಲ್ಲ. ಯಾರು ಉಪದೇಶ ಹೊಂದಿದ್ದಾರೋ ಅವರು ಇವನ್ನು ಕಲ್ಪಿಸಿಕೊಳ್ಳಬೇಕು. ಒಳಗೆ ಸುಪ್ತವಾಗಿ ಅಡಗಿರುವ ಒಂದು ದೊಡ್ಡ ಶಕ್ತಿಯ ಕೇಂದ್ರವೆಂದು ಭಾವಿಸಬೇಕು. ಯೋಗಾಭ್ಯಾಸದಿಂದ ಅದನ್ನು ಜಾಗ್ರತಗೊಳಿಸಬೇಕು. ಧ್ಯಾನ ಎಷ್ಟೆಷ್ಟು ಮನಃಪೂರ್ವಕವಾಗಿ ಮತ್ತು ಗಾಢವಾಗಿ ಆಗುವುದೋ ಮನಸ್ಸೂ ಅಷ್ಟೇ ಪವಿತ್ರವಾಗಿಯೂ, ಏಕಾಗ್ರವಾಗಿಯೂ ಆಗುವುದು. ಅಂತರ್ಯದಲ್ಲಿರುವ ಸುಪ್ತ ಶಕ್ತಿ ಜಾಗ್ರತವಾಗಿ ವಿಕಾಸವಾಗುತ್ತ ಬರುವುದು.

೫೩. ಪ್ರಾಣಾಯಾಮವನ್ನು ಕಣ್ಣುಮುಚ್ಚಿ ಮಾಡಬೇಕು. ಆಗ ಇಷ್ಟದೇವತೆಯ ಮೇಲೆ ಧ್ಯಾನಿಸುವುದಕ್ಕೆ ಬದಲಾಗಿ ನಿಮ್ಮ ಶ್ವಾಸೋಚ್ಛ್ವಾಸಗಳ ಕಡೆ ಗಮನಕೊಡಿ. ಎಡಗೈ ಬೆರಳುಗಳಿಂದ ಜಪದ ಸಂಖ್ಯೆಯನ್ನು ಜ್ಞಾಪಿಸಿಕೊಳ್ಳಿ. ಈ ಕ್ರಮಗಳನ್ನೆಲ್ಲಾ ಗುರುವಿನಿಂದಲೇ ಅರಿತುಕೊಳ್ಳಬೇಕು. ನೀನು ಉಸಿರನ್ನು ಒಳಕ್ಕೆ ತೆಗೆದುಕೊಳ್ಳುತ್ತಿರುವಾಗ ಪರಿಶುದ್ಧತೆ, ಶಕ್ತಿ, ಧೈರ್ಯ ಮತ್ತು ಇತರ ದೈವೀಗುಣಗಳನ್ನೆಲ್ಲಾ ಒಳಕ್ಕೆ ಸೆಳೆದುಕೊಳ್ಳುತ್ತಿರುವುದಾಗಿ ಭಾವಿಸು. ನೀನು ಉಸಿರನ್ನು ಬಿಡುತ್ತಿರುವಾಗ ಕೆಟ್ಟ ಆಲೋಚನೆ, ಅಪವಿತ್ರತೆ, ಕ್ಷುದ್ರತನ, ಅಸೂಯೆ ಮತ್ತು ಇತರ ಪಾಪಕರವಾದ ಪ್ರವೃತ್ತಿಗಳೇ ಮುಂತಾದ ನ್ಯೂನತೆಗಳನ್ನು ಬಿಡುತ್ತಿರುವಂತೆ ಯೋಚಿಸು.

೫೪. ನಿನ್ನ ಇಷ್ಟದೇವತೆಯ ಆಕಾರವನ್ನು ಹೃದಯ ಪದ್ಮದಲ್ಲಿ ನೆಲಸಿರುವಂತೆ ಧ್ಯಾನಮಾಡಲು ಅಶಕ್ತನಾದರೆ ಅದಕ್ಕೆ ಬದಲಾಗಿ ನಿನ್ನ ಮುಂದೆ ಒಂದು ಸಿಂಹಾಸನದಲ್ಲಿ ಅಥವಾ ಪದ್ಮದಲ್ಲಿ ಕುಳಿತಿರುವಂತೆ ಧ್ಯಾನಿಸಬಹುದು. ಮೊದಲನೆಯದೇ ನಿಜವಾಗಿಯೂ ಹೆಚ್ಚು ಅನುಕೂಲ ಮತ್ತು ಶ್ರೇಷ್ಠ. ಏಕೆಂದರೆ ಅದು ಇಷ್ಟದೈವವನ್ನು ಅಂತಃಕರಣದಲ್ಲಿ ಇಟ್ಟುಕೊಳ್ಳುವುದಕ್ಕೂ ಆತನನ್ನು ನೋಡುವುದಕ್ಕೂ ಅನುಕೂಲವಾಗು

ತ್ತದೆ. ಎರಡನೆಯ ಪದ್ಧತಿಯಲ್ಲಿ ದೇವರು ನಮ್ಮ ಹೊರಗಡೆ ಇರುವ ನೆಂದು ಯೋಚಿಸಬೇಕಾಗುತ್ತದೆ. ಕ್ರಮೇಣ ನಿರಂತರ ಪರಿಶ್ರಮದಿಂದ ಆತನು ನಮ್ಮಲ್ಲಿಯೇ ಇರುವನೆಂದು ನೋಡಲು ಮತ್ತು ಯೋಚಿಸಲು ಪ್ರಯತ್ನಿಸು. ನಾವು ಮತ್ತೊಬ್ಬರನ್ನು ಪ್ರೀತಿಸಿದಷ್ಟೂ ಆತನನ್ನು ನಮ್ಮ ಹೃದಯಾಂತರಾಳದಲ್ಲಿ ಇಟ್ಟುಕೊಳ್ಳಲು ಆಶಿಸುತ್ತೇವೆ. "ಓ! ಮನಸ್ಸೇ! ಕೇವಲ ನಾನು ಮತ್ತು ನೀನು ಮಾತ್ರ ಅವನನ್ನು ನೋಡುವ, ಮತ್ತಾರೂ ಬೇಡ!"

೫೫. ಜಪ ಮತ್ತು ಧ್ಯಾನವನ್ನು ಪ್ರತಿ ದಿನ ಬೆಳಿಗ್ಗೆ ಮತ್ತು ಸಂಜೆ ಹೆಚ್ಚು ಹೊತ್ತು ನಿಯಮಾನುಸಾರ ಅನುಸರಿಸಲಾಗದಿದ್ದಲ್ಲಿ, ಉಳಿದ ಸಮಯದಲ್ಲೇ, ನೀನು ಸರಳವಾದ ರೀತಿಯಲ್ಲಿ ಕುಳಿತಿರುವಾಗ ಅಥವಾ ಆರಾಮದಲ್ಲಿರುವಾಗ ಅಥವಾ ನಿನಗೆ ಅನಾರೋಗ್ಯವಾದಾಗ ಹಾಸಿಗೆಯ ಮೇಲೆ ವಿಶ್ರಾಂತಿ ಹೊಂದುತ್ತಿರುವಾಗಲೂ ನೀನು ಮಾಡಬಹುದು. ನಿನಗೆ ಆಯಾಸವಾಗದಿದ್ದರೆ ಅಥವಾ ಜೊಂಪು ಹಿಡಿಯದಿದ್ದರೆ ಬೆಳಗಿನ ಝಾವ ಕೆಲವು ಗಂಟೆಗಳ ಕಾಲ ಹಾಸಿಗೆಯಲ್ಲೇ ಕುಳಿತು ಸಾಧನೆಮಾಡು. ಆದರೆ ಸಾಧಾರಣವಾಗಿ ಜಪ ಮತ್ತು ಧ್ಯಾನವನ್ನು, ವಾಡಿಕೆಯಂತೆ ಆಸನದ ಮೇಲೆ ಅನುಸರಿಸಿದರೆ ನಮ್ಮ ಮನಸ್ಸನ್ನು ಹೆಚ್ಚಾಗಿ ಅಂಕೆ ಯಲ್ಲಿಟ್ಟುಕೊಳ್ಳಬಹುದು. ನೀನು ನಡೆಯುತ್ತಿರುವಾಗ, ಪ್ರಯಾಣ ಮಾಡುತ್ತಿರುವಾಗ ಅಥವಾ ಏನಾದರೂ ಕೆಲಸ ಮಾಡುತ್ತಿರುವಾಗ ದೇವರ ಸ್ಮರಣೆಗಾಗಿ ಮಂತ್ರವನ್ನು ಸಂಖ್ಯೆಯನ್ನೆಣಿಸದೆಯೇ ಕೇವಲ ಮಾನಸಿಕವಾಗಿ ಜಪಿಸುವುದನ್ನು ಅಭ್ಯಾಸಮಾಡಬಹುದು. ಆದರೆ ಆ ಸಮಯದಲ್ಲಿ ಧ್ಯಾನಮಾಡಬೇಡ. ಏಕೆಂದರೆ ನಿನ್ನ ಸುತ್ತುಮುತ್ತಲಿನ ಪರಿಸ್ಥಿತಿಗೆ ವಿಮನಸ್ಕನಾಗಿ ಅಪಾಯಕ್ಕೀಡಾಗಬಹುದು. ಕಾಲ ಅಮೂಲ್ಯ ವಾದುದು. ನಮ ಆಯುಸ್ಸೂ ಅಲ್ಪ, ಅನಿಶ್ಚಿತ. ಒಂದು ಕ್ಷಣವನ್ನೂ ವ್ಯರ್ಥಮಾಡಬೇಡ.

೫೬. ಒಳ್ಳೆಯದು ಕೆಟ್ಟದ್ದು ಸೇರಿ ಮನುಷ್ಯನಾಗುವನು. ಪ್ರತಿ ಯೊಬ್ಬರಲ್ಲೂ ಇವೆರಡೂ ಸ್ವಲ್ಪ ಹೆಚ್ಚಾಗಿಯೋ, ಕಡಿಮೆಯಾಗಿಯೋ ಅಂತೂ ಇದ್ದೇ ಇರುವುದು. ಮತ್ತೊಬ್ಬರಲ್ಲಿ ಲೋಪದೋಷಗಳನ್ನು ನೋಡುವುದಕ್ಕಿಂತ ಅದನ್ನು ನಿನ್ನಲ್ಲಿಯೇ ಹುಡುಕು. ಮತ್ತೊಬ್ಬರ ಒಳ್ಳೆಯ ಗುಣ ಮತ್ತು ನಿನ್ನ ಅವಗುಣ ಇವನ್ನು ಉತ್ಪ್ರೇಕ್ಷಿಸು.

ಮತ್ತೊಬ್ಬರ ನ್ಯೂನತೆ ಮತ್ತು ನಿನ್ನ ಒಳ್ಳೆಯ ಗುಣವನ್ನು ಕನಿಷ್ಠ ಮಾಡಲು ಯತ್ನಿಸು. ಹೂವಿನ ಮಕರಂದವನ್ನು ಹೀರುವ ಜೇನಿನಂತೆ ಆಗು. ಹುಣ್ಣು ಮತ್ತು ತಿಪ್ಪೆಮೇಲೆ ಕುಳಿತುಕೊಳ್ಳುವ ನೊಣದಂತಾಗ ಬೇಡ. ನಿನ್ನ ಶೀಲ ಸಂಪತ್ತಿಗೆ ಮತ್ತೊಬ್ಬರಲ್ಲಿ ತಪ್ಪು ಕಂಡುಹಿಡಿಯುವುದು ಅಥವಾ ಕಾಡುಹರಟೆ ಹಾನಿಕರ.

೫೭. ಕೇವಲ ಅವತಾರ ಪುರುಷರು ಮಾತ್ರ ಕುಂದು ಕೊರತೆ ಗಳಿಂದ ಪಾರಾಗಿ ಕೇವಲ ಸದ್ಗುಣವನ್ನೇ ಪಡೆದಿರಬಹುದು. ದೇವರ ಸಾಕ್ಷಾತ್ಕಾರವಾಗಿ ಬಹಳ ಮುಂದುವರಿದ ಸಾಧಕನೆಂದು ಗೌರವಿಸಲ್ಪಟ್ಟ ಯೋಗ್ಯ ಗುರುವಾಗಿದ್ದರೂ, ಕೆಲವು ಲೋಪದೋಷಗಳು ಇರಬಹುದು. ಆದರೆ ಅವರ ಅಪೂರ್ವವಾದ ಶ್ರೇಷ್ಠಗುಣಗಳು ಮಿಗಿಲಾಗಿದ್ದರೆ ಅವರ ನ್ಯೂನಾತಿರೇಕಗಳೂ ಅವರ ನಡತೆಗೆ ಅಲಂಕಾರಪ್ರಾಯವಾಗಿ ಅವರ ಮೇಲಿನ ಪ್ರೇಮವನ್ನು ಮತ್ತೂ ಹೆಚ್ಚಿಸುವುವು. ಇಂತಹ ಮಹಾಪುರುಷರ ವಿಚಾರ ಹಾಗಿರಲಿ, ಪ್ರೇಮದ ಕಣ್ಣಿಗೆ ತಾನು ಪ್ರೀತಿಸುವ ಅಥವಾ ಆರಾಧಿ ಸುವ ವ್ಯಕ್ತಿಯ ಕುರೂಪಾಗಲಿ ಅಥವಾ ಕಳಂಕವಾಗಲಿ ಕಾಣಿಸುವುದೇ ಇಲ್ಲ.

೫೮. ಗುರುವಿನಲ್ಲಿ ನಿಷ್ಕಪಟ ಭಕ್ತಿ ಮತ್ತು ಶ್ರದ್ಧೆ ಇದ್ದ ಹೊರತು ಆಧ್ಯಾತ್ಮಿಕ ಪ್ರಪಂಚದಲ್ಲಿ ಮುಂದುವರಿಯಲಾಗುವುದಿಲ್ಲ. ಎಂದೂ ಗುರು ವಾಕ್ಯದಲ್ಲಿ ಅನುಮಾನ ಅಥವಾ ಅವಿಶ್ವಾಸವಿಡಬೇಡ. ಅವು ವೇದ ಅಥವಾ ಶಾಸ್ತ್ರೋಕ್ತ ವಾಕ್ಯದಷ್ಟೇ ಪವಿತ್ರವೆಂದು ತಿಳಿ. ನಿನಗೆ ಸತ್ಯ ಸಾಕ್ಷಾತ್ಕಾರ ವಾಗಬೇಕೆಂದು ಇಷ್ಟವಿದ್ದಲ್ಲಿ ಅನನ್ಯ ಭಾವದಿಂದ ಗುರುವಿನ ಸಲಹೆಯಂತೆ ನಡೆಯಲು ಯತ್ನಿಸು. ಇಹದಲ್ಲಾಗಲಿ ಪರದಲ್ಲಾಗಲಿ ಗುರುವಿಗಿಂತ ಹಿತಚಿಂತಕರು ಈ ಪ್ರಪಂಚದಲ್ಲಿ ಬೇರಿಲ್ಲವೆಂದು ತಿಳಿ. ಆತನು ತೋರಿ ಸಿರುವ ಹಾದಿಯಲ್ಲೇ ನೀನು ನಿಶ್ಚಲತೆಯಿಂದ ನಡೆದರೆ ಅದೇ ನೀನು ಆತ ನಿಗೆ ಸಲ್ಲಿಸುವ ನಿಜವಾದ ಸೇವೆ. ಇದರಿಂದ ಅವರು ಪ್ರಸನ್ನರಾಗುವರು.

೫೯. ಪ್ರಾರಂಭದಲ್ಲಿ ಜಪ ಮಾಡುವಾಗ ಮನಸ್ಸಿನಲ್ಲಿ ಮಂತ್ರವನ್ನು ನಿಧಾನವಾಗಿ ಮತ್ತು ಸ್ಪಷ್ಟವಾಗಿ ಉಚ್ಚರಿಸಬೇಕು. ಮೊದಮೊದಲು ಇದು ಬಹಳ ಹೊತ್ತನ್ನು ತೆಗೆದುಕೊಳ್ಳುತ್ತದೆ. ಶುರುವಿನಲ್ಲಿ ಗಂಟೆಗೆ ಎರಡು ಅಥವಾ ಮೂರು ಸಾವಿರಕ್ಕಿಂತ ಹೆಚ್ಚಾಗಿ ಜಪ ಮಾಡಲಾಗುವು ದಿಲ್ಲ. ಸಾಧನೆ ಮುಂದುವರಿದಂತೆ ಬೇಗ ಮಾಡಬಹುದು. ನಂತರ ಕಾಲ

ಕ್ರಮೇಣ ಗಂಟೆಗೆ ಎಂಟು ಅಥವಾ ಹತ್ತುಸಾವಿರ ಸಾರಿ ಕೂಡ ಮಂತ್ರೋಚ್ಚಾರಣೆ ಮಾಡಬಹುದು. ಜಪವನ್ನು ಮಾಡುತ್ತಿರುವಾಗ ಮಂತ್ರ ಮತ್ತು ಅವಕ್ಕೆ ಸಂಬಂಧಪಟ್ಟ ಇಷ್ಟದೇವತೆಯ ಮೇಲೆ ಮನಸ್ಸನ್ನು ನಿಲ್ಲಿಸಲು ಯತ್ನಿಸು.

೬೦. ನೀನೇ ಕಷ್ಟಪಟ್ಟು ಪ್ರಯತ್ನಪಡುವವರೆಗೂ ಗುರು ನಿನಗೆ ಸತ್ಯ ಸಾಕ್ಷಾತ್ಕಾರವಾಗುವಂತೆ ಮಾಡಲಾರ. ಗುರು ನಿನಗೆ ದಾರಿ ತೋರಿಸ ಬಹುದು; ನಿನ್ನ ಅನುಮಾನ ಕಷ್ಟಗಳನ್ನು ತೊಡೆಯಬಹುದು; ನಿನ್ನ ತಪ್ಪುಗಳನ್ನು ತಿದ್ದಬಹುದು; ಸರಿಯಾದ ಹಾದಿಗೆ ನಿನ್ನನ್ನು ತರಬಹುದು; ಮತ್ತು ಕೊಂಚದೂರ ನಿನ್ನ ಕೈಹಿಡಿದು ಕೂಡ ಆ ಹಾದಿಯಲ್ಲಿ ನಡೆಸ ಬಹುದು. ಆದರೆ ನಡೆಯುವ ಕೆಲಸ ಮಾತ್ರ ನಿನ್ನಿಂದಲೇ ಆಗಬೇಕು. ಆತನೇನೋ ನಿನ್ನನ್ನು ಗುರಿಯೆಡೆಗೆ ಹೊತ್ತುಕೊಂಡು ಹೋಗಲಾಗುವುದಿಲ್ಲ. ದಾರಿಯೇನೋ ಬಹುದೂರ ಮತ್ತು ಕಠಿಣವೆಂಬುದು ನಿಜ. ಆದರೆ ನೀನು ಹಾದಿಯಲ್ಲೇ ಇನ್ನು ಮುಂದುವರಿಯಲು ಸಾಧ್ಯವಿಲ್ಲವೆಂದು ಕುಳಿತು ಬಿಟ್ಟರೆ, ಭಯಪಟ್ಟರೆ, ನಿರಾಶೆಹೊಂದಿದರೆ ಅದರಿಂದೇನೂ ಪ್ರಯೋಜನ ವಾಗುವುದಿಲ್ಲ. ನೀನು ನಿಂತಲ್ಲಿಯೇ ನಿಲ್ಲಲಾರೆ. ನೀನು ಮುಂದುವರಿಯ ಬೇಕು ಇಲ್ಲವೇ ಹಿಂದೆ ಬೀಳಬೇಕು. ನೀನು ಹಿಂದೆ ಸರಿದರೆ ಸಾಧಿಸಿದ ಷ್ಟನ್ನೂ ವೃಥಾ ಕಳೆದುಕೊಳ್ಳುವೆ. ನೀನು ಮುಂದುವರಿದಷ್ಟೂ ದಾರಿ ಇನ್ನೂ ಸುಗಮವಾಗುತ್ತದೆ. ಧೈರ್ಯೋತ್ಸಾಹ ಮೂಡುತ್ತವೆ. ನೀನು ಸಂತೋಷಪಡುವೆ.

೬೧. ನಮ್ಮಲ್ಲೇ ಏನೂ ಸತ್ವವಿಲ್ಲದೇ ಹೋದರೆ ಎಷ್ಟೇ ಸಹಾಯ ಒದಗಿದರೂ ಪ್ರಯೋಜನವಿಲ್ಲ. ಬಂಜರು ಭೂಮಿಯಲ್ಲಿ ಬಿತ್ತಿರುವ ಬೀಜಕ್ಕೆ ಎಷ್ಟು ನೀರು ಹಾಕಿದರೆತಾನೆ ಏನು ಪ್ರಯೋಜನ? ಆದರೆ ಅದನ್ನು ಕೂಡ ಹಲವು ರೀತಿಯಿಂದ ಸರಿಮಾಡಿ ಅದರಿಂದ ಒಳ್ಳೆಯ ಬೆಳೆ ತೆಗೆಯಬಹುದು. ಅದರಂತೆ ಐಹಿಕಸುಖಾಸಕ್ತರಾದ ಜನರೂ, ಶ್ರದ್ಧೆ, ನಿಶ್ಚಲತೆ, ದೀರ್ಘ ಪ್ರಯತ್ನಗಳಿಂದ ಗುರುವಿನ ಉಪದೇಶದಂತೆ ನಡೆದರೆ, ಅತ್ಯುನ್ನತ ಗುರಿಯನ್ನು ಸೇರಬಹುದು. ಅನಂತರ ಜೀವನ ಸುಖಸಂತೋಷ ದಿಂದ ಕೂಡಿರುವುದು.

೬೨. ಮುಂದೆ! ಮುಂದೆ! ಅತ್ತಿತ್ತ ನೋಡಬೇಡ! ಜ್ಯೋತಿ ಅಥವಾ ದರ್ಶನಗಳೇ ಮುಂತಾದ ಮಾನಸಿಕ ದೃಶ್ಯಗಳಿಗೆ ಸ್ವಲ್ಪವೂ ಗಮನ

ಕೊಡಬೇಡ. ನೀನು ಧ್ಯಾನವನ್ನು ಮುಂದುವರಿಸಿದಹಾಗೆಲ್ಲಾ ಅನೇಕ ಬಗೆಯ ರಹಸ್ಯಾನುಭವಗಳು ತಮಗೆ ತಾವೇ ಬರುವುವು. ನೀನು ಹಲವು ಬಗೆಯ ಅಲೌಕಿಕ ವಸ್ತುಗಳನ್ನು ನೋಡಬಹುದು, ಅದರಿಂದ ಸ್ವಲ್ಪ ಆನಂದವನ್ನೂ ಹೊಂದಬಹುದು. ಆದರೆ ಅಷ್ಟಕ್ಕೇ ನಿಂತುಬಿಡಬೇಡ. ನೀನು ಹಾಗೆ ಮಾಡಿದರೆ ಎಂದಿಗೂ ಮುಂದೆ ಹೋಗಲಾರೆ. ಯಾವಾಗಲೂ ಗುರಿಯನ್ನು ಲಕ್ಷ್ಯದಲ್ಲಿಡು. ಇದರಿಂದ ದೇವರ ಮೇಲೆ ನಿನ್ನ ಭಕ್ತಿ, ಪ್ರೇಮ ಹೆಚ್ಚುವುದು. ಆತನಲ್ಲೇ ನಿನ್ನ ಮನಸ್ಸು ಲೀನವಾಗುವುದು. ಈ ಜೀವನದಲ್ಲೇ ಸ್ವತಃ ಆತನ ದರ್ಶನವನ್ನು ಹೇಗೆ ಪಡೆಯಬಹುದು ಎಂಬುದೇ ನಿನ್ನ ಏಕಮಾತ್ರ ಆಸೆ ಮತ್ತು ಗುರಿಯಾಗಿರಲಿ.

೬೩. ಸಿದ್ಧಿ ಮತ್ತು ಅದ್ಭುತಗಳಲ್ಲಿ (ಇಂದ್ರಜಾಲ, ಮಹೇಂದ್ರ ಜಾಲ ಶಕ್ತಿಗಳು) ಆಸಕ್ತನಾದರೆ ಅವು ಮನುಷ್ಯರನ್ನು ಭೋಗದಾಸೆಯ ಮೂಲಕ ಮಾಯೆ ಮತ್ತು ಭ್ರಮೆಯ ಗುಲಾಮರನ್ನಾಗಿ ಮಾಡಿ ಅವರನ್ನು ಭ್ರಷ್ಟರನ್ನಾಗಿ ಮಾಡುವುದು. ಈ ಶಕ್ತಿಗಾಗಿ ಹಾತೊರೆದರೆ ಅದು ದೇವರ ಸಾಕ್ಷಾತ್ಕಾರಕ್ಕೆ ಒಂದು ಪ್ರಬಲ ಅಡ್ಡಿಯಾಗುವುದಲ್ಲದೆ ಕ್ರಮೇಣ ಅದು ಮನುಷ್ಯರನ್ನು ಹೀನಸ್ಥಿತಿಗೆಳೆದು ಅವನನ್ನು ಸಂಪೂರ್ಣ ಹಾಳುಮಾಡುತ್ತದೆ. ಈ ಅದ್ಭುತ ಶಕ್ತಿಗಳು ದೇವರ ಮೇಲೆ ಪ್ರೇಮವನ್ನೂ ಹುಟ್ಟಿಸುವುದಿಲ್ಲ, ಮುಕ್ತಿಗೆ ಮಾರ್ಗದರ್ಶಕಗಳೂ ಅಲ್ಲ. ಹೆಚ್ಚೆಂದರೆ ಹೆಸರು, ಕೀರ್ತಿಯನ್ನು ತರಬಲ್ಲುವು. ನಮ್ಮ ಭೋಗೇಚ್ಛೆಯನ್ನು ತೃಪ್ತಿ ಪಡಿಸಬಲ್ಲುವು. ಆದರೆ ಅಪವಿತ್ರ ಆಸೆಗಳ ತೃಪ್ತಿಗಾಗಿ ಒಬ್ಬನು ಮತ್ತೊಬ್ಬನನ್ನು ಹಾಳುಮಾಡುವುದಕ್ಕೂ ಹೇಸುವುದಿಲ್ಲ. ಅದಕ್ಕೇ ಭಕ್ತರು ಈ ಶಕ್ತಿಯನ್ನು ವಿಷದಂತೆ ತ್ಯಜಿಸುತ್ತಾರೆ.

೬೪. ಸಾಧಾರಣ ನಮ್ಮ ಪ್ರಾರ್ಥನೆ ಕೇವಲ ಬಾಯಿಮಾತಾಗಿದೆ. ನಾವು ಹೃತ್ಪೂರ್ವಕ ಪ್ರಾರ್ಥಿಸುವುದಿಲ್ಲ. ಅದಕ್ಕೇ ಅದರಿಂದ ಫಲವೇನೂ ದೊರಕುವುದಿಲ್ಲ. ನಿಜವಾಗಿ ನಮ್ಮ ಪ್ರಾರ್ಥನೆ ನೇರವಾಗಿ ಹೃದಯದಿಂದ ಬಂದಿದ್ದರೆ ಅವು ಖಂಡಿತ ನೆರವೇರುತ್ತವೆ. ಯಾವಾಗ ನಿನಗೆ ಜಪ ಮತ್ತು ಧ್ಯಾನದಿಂದ ಪ್ರಯೋಜನವಾಗುತ್ತಿಲ್ಲವೆಂದು ಗೊತ್ತಾಗುವುದೋ ಆಗ ನಿನ್ನಲ್ಲಿರುವ ಲೋಪದೋಷವನ್ನು ತಿಳಿ. ಪಾತ್ರೆಯ ನೀರೆಲ್ಲ ಸೋರಿಹೋಗುತ್ತಿರುವ ಬಿರುಕು ಮತ್ತು ತೂತುಗಳನ್ನು ಹುಡುಕು, ಅವುಗಳನ್ನು ತಿದ್ದಲು

ಪ್ರಯತ್ನಿಸು. ಕಾಮಕಾಂಚನಾದಿ ವಿಷಯದಮೇಲೆ ಮನಸ್ಸಿದ್ದರೆ ಧ್ಯಾನ ದಿಂದ ಯಾವೊಂದು ಪರಿಣಾಮವೂ ಆಗುವುದಿಲ್ಲ. ಹೀಗೆಂದು ಜಪ, ಧ್ಯಾನ ವನ್ನು ನಿಯಮಿತ ಕಾಲದಲ್ಲಿ ಮಾಡುವುದನ್ನು ಬಿಡಬೇಡ. ಯೋಗ್ಯ ಕಾಲದಲ್ಲಿ ನೀನಿಷ್ಟಪಟ್ಟದ್ದನ್ನು ಹೊಂದಿಯೇ ಹೊಂದುವೆ. ಪ್ರಾಪಂಚಿಕ ಸುಖಾಸಕ್ತಿ ಕ್ರಮೇಣ ಅಸತ್ಯ ನಿಸ್ಸಾರವೆಂದು ತೋರುವುದು. ಭಗವದ್ಭಕ್ತಿ ಮತ್ತು ಪ್ರೇಮ ಹೆಚ್ಚುವುದು. ನೀನು ಕೇವಲ ಅವನಲ್ಲಿ ಮಾತ್ರ ಸಂತೋಷ ವನ್ನು ಕಾಣುತ್ತೀಯೆ.

೬೫. ಮುಕ್ತಿ ಅಥವಾ ಬಿಡುಗಡೆಗಾಗಿ ಇರುವ ನಮ್ಮ ಆಸೆ ಕೇವಲ ನಟನೆ ಅಷ್ಟೆ. ಅದು ನಿಜವಲ್ಲ ಮತ್ತು ಅಂತಃಕರಣ ಪೂರ್ವಕವಾದುದಲ್ಲ. ದೇವರೇ ನಮ್ಮ ಮುಂದೆ ಬಂದು ನಿಂತು, "ಇದೋ ನಾನು ನಿನಗೆ ಮುಕ್ತಿ ಯನ್ನು ದಯಪಾಲಿಸುತ್ತಿರುವೆ–ತೆಗೆದುಕೋ" ಎಂದರೆ, ಆಗ ನಾವು ಭಯಪಟ್ಟು, ಏನುಮಾಡಬೇಕೆಂದರಿಯದೆ, "ಬೇಡ, ಬೇಡ–ನನಗೆ ಈ ಕ್ಷಣದಲ್ಲಿ ಮುಕ್ತಿ ಬೇಕಾಗಿಲ್ಲ. ನಾನು ಮುಕ್ತಿಯನ್ನು ಹೊಂದಿದರೆ ನನ್ನನ್ನೇ ಅವಲಂಬಿಸಿರುವ ನನ್ನ ಹತ್ತಿರದ ಪ್ರಿತಿಪಾತ್ರರಾದವರಿಗೆ ಏನಾ ಗುವುದೋ ? ನಾನು ಸತ್ತಮೇಲೆ ನನಗೆ ಮುಕ್ತಿಯನ್ನು ಕೊಡು" ಎಂದು ಕೇಳುತ್ತೇವೆ. ಆ ಮುದುಕ ಸೌದೆ ಒಡೆಯುವವನ ಕಥೆ ನೆನಪಿದೆಯೇ ? ಸೌದೆ ಹೊರೆಯ ಭಾರದಿಂದ ಸಾಕಾಗಿ ಮೃತ್ಯುಗೆ, "ಓ ! ದೇವರೆ, ನನ ಗಿನ್ನು ಸಹಿಸಲಸಾಧ್ಯ; ನನ್ನನ್ನು ಬಿಡುಗಡೆಮಾಡು" ಎಂದು ಪ್ರಾರ್ಥಿಸಿದ. ಯಾವಾಗ ಯಮ ಅವನನ್ನು ಕರೆದೊಯ್ಯಲು ಬಂದನೋ ಆಗ ಅವನು, "ಬೇಡ, ಬೇಡ ದೇವರೇ, ನಾನು ಕೇವಲ ನನ್ನ ತಲೆಯಮೇಲಿನ ಈ ಸೌದೆ ಹೊರೆಯನ್ನು ಇಳಿಸಲು ನಿನ್ನನ್ನು ಕರೆದೆ, ಅಷ್ಟೆ" ಎಂದನು. ಈ ಪ್ರಪಂಚಕ್ಕೆ ಕೈಕಾಲುಗಳಿಂದ ಬಂಧಿಸಲ್ಪಟ್ಟಿರುವ ಎಲ್ಲಾ ಮನುಷ್ಯ ಜೀವಿ ಗಳ ಅವಸ್ಥೆಯೂ ಇಷ್ಟೇ. ಅವರು ಕೇವಲ ತಮ್ಮ ವ್ಯಥೆಗಳಿಂದ ಪಾರಾ ಗಲು ಇಚ್ಛಿಸುತ್ತಾರೆ ಅಷ್ಟೆ. ನಿಜವಾದ ಮುಕ್ತಿಗಲ್ಲ.

೬೬. ನೀನು ಯಾವುದಕ್ಕಾಗಿ ಅತ್ಯಂತ ಇಚ್ಛಿಪಡುತ್ತೀಯೋ ಅದನ್ನು ಹೊಂದಿಯೇ ಹೊಂದುವೆ. ನೀನು ನಿಜವಾಗಿಯೂ ದೇವರನ್ನು ನೋಡಲು ಆಸೆಪಟ್ಟರೆ ಅವನನ್ನು ನೀನು ನೋಡುತ್ತೀಯೆ. ನೀನು ಪ್ರಾಪಂಚಿಕ ಸುಖಾಸಕ್ತಿಗಾಗಿ ಪ್ರಾರ್ಥಿಸಿದರೆ ಅದನ್ನೇ ಹೊಂದುವೆ. ಆದರೆ ಎರಡಕ್ಕೂ ನೀನು ಕಷ್ಟಪಡಬೇಕು. ಕಷ್ಟಪಡದೆ ಶ್ರಮವಿಲ್ಲದೆ, ಏನನ್ನೂ

ಗಳಿಸಲಾಗುವುದಿಲ್ಲ. ಐಹಿಕ ಸುಖಕ್ಕಾಗಿ ಜನರು ಎಷ್ಟೊಂದು ಕಷ್ಟವನ್ನನು ಭವಿಸುತ್ತಾರೆ! ಅನ್ನ ನಿದ್ರೆಯನ್ನೂ ಬಿಟ್ಟು ಹಗಲೂ ರಾತ್ರೆ ಕಾಯಾ ವಾಚಾ ಮನಸಾ ತಮ್ಮ ಹೆಂಡತಿ ಮಕ್ಕಳಿಗೆ ಹಣಕ್ಕೆ, ಆಸ್ತಿಗೆ, ಭೋಗಕ್ಕೆ, ಹೆಸರು ಕೀರ್ತಿಗೆ ಶಕ್ತಿಮಿಾರಿ ದುಡಿಯುತ್ತಾರೆ. ಒಂದು ಕ್ಷಣವೂ ಬಿಡುವಿಲ್ಲ. ಬಿಡುಗಡೆಯೇ ಇಲ್ಲ. ಆದರೂ ಅವರು ಇಚ್ಛೆಪಟ್ಟದ್ದೆಲ್ಲಾ ಸಿಕ್ಕುವುದಿಲ್ಲ. ಏಕೆಂದರೆ ಅವರ ಆಸೆಗೆ ಪಾರವಿಲ್ಲ. ನೀನು ದೇವರಿಗಾಗಿ ಅದೇ ರೀತಿ ಶ್ರಮಿಸಿದರೆ ದೇವರನ್ನು ಖಂಡಿತ ಹೊಂದುವೆ. ಚಿನ್ನ ವಜ್ರ ವೈಢೂರ್ಯಕ್ಕೆ ಬದಲಾಗಿ ನಾವು ಗಾಜಿನ ಚೂರಿನಲ್ಲೇ ತೃಪ್ತರಾಗಿರುವೆವು. ನಮಗೆ ಪುನಃ ಪುನಃ ಪೆಟ್ಟುಬೀಳುವುದು, ಆದರೂ ನಮಗೆ ಬುದ್ಧಿ ಬರುವುದಿಲ್ಲ. ಇದೇ ಮಹಾ ಮಾಯೆ ಬೀಸುವ ಮೋಹ. ಭಗವತ್ಸಾಕ್ಷಾತ್ಕಾರ ಕಷ್ಟ. ಆದರೆ ನಮ್ಮ ಮನಸ್ಸು ಪೂರ್ಣವಾಗಿ ಕೇವಲ ದೇವರ ಕಡೆಗೆ ತಿರುಗಿದರೆ ಆಗ ಸುಲಭವಾಗುವುದು. ಯಾರ ಮೇಲೆ ಮಹಾಮಾತೆಯ ಕೃಪಾ ಕಟಾಕ್ಷ ಬೀಳುವುದೋ ಅವರಿಗೆ ಮಾತ್ರ ಇದು ಸಾಧ್ಯ.

೬೭ ಪ್ರಯತ್ನವಿಲ್ಲದೆ ಯಾವ ಅಭೀಷ್ಟವೂ ಸಿದ್ಧಿಸುವುದಿಲ್ಲ. ಚಿಕ್ಕ ಮಕ್ಕಳು ಮಾತ್ರ ಅವರು ಇಚ್ಛಿಸಿದ್ದನ್ನೆಲ್ಲಾ ಕಷ್ಟವಿಲ್ಲದೆ ಹೊಂದುತ್ತಾರೆ. ಏಕೆಂದರೆ ಅವರಿಗೆ ತಮ್ಮ ತಾಯಿ ತಮಗೆ ಬೇಕಾದುದನ್ನೆಲ್ಲಾ ಕೊಡುವಳೆಂದು ಗೊತ್ತು. ತಾಯಿ ಯಾವುದನ್ನು ಬೇಕೋ ಅದನ್ನು ಯಾವಾಗ ಬೇಕೋ ಆಗ ಕೊಡುತ್ತಾಳೆ. ಅವರಿಗೆ ತಾವೇ ಇದನ್ನು ಯೋಚಿಸಬೇಕಾದ ಆವಶ್ಯಕತೆ ಇಲ್ಲ. ಆಧ್ಯಾತ್ಮಿಕ ಜೀವನದಲ್ಲಿಯೂ ನಾವು ಮಗುವಿನಂತಾಗಬೇಕು. ಮಗುವಿಗೆ ಹಸಿವಾದಾಗ ಅದು ಅಳುತ್ತದೆ. ತಕ್ಷಣ ತಾಯಿ ಕೆಲಸವನ್ನೆಲ್ಲಾ ಬಿಟ್ಟುಬಂದು ಮಗುವನ್ನು ತೊಡೆಯಮೇಲೆತ್ತಿ ಹಾಲುಕೊಡುವಳು. ಈಗ ನೋಡು, ಮಗು ಕೂಡ ತನ್ನಿಷ್ಟವನ್ನು ತಿಳಿಸಲು ಅಳಬೇಕು. ಹಾಗೆಯೇ ಭಕ್ತನೂ ದೇವರ ಪ್ರಾರ್ಥನೆ ಮಾಡಬೇಕು. ಅವನ ಅಗಲಿಕೆಗೆ ತೀವ್ರ ಯಾತನೆ ಅನುಭವಿಸಬೇಕು. ಕಣ್ಣೀರು ಕರೆದು ಭಗವತ್ಪ್ರೇಮಕ್ಕಾಗಿ ಹಾತೊರೆಯಬೇಕು. ತನಗೆ ಯಾರಾದರೂ ಏನಾದರೂ ಕೊಟ್ಟರೆ ಅದರಮೇಲೆ ಅವನಿಗೆ ಸ್ವಲ್ಪವೂ ಲಕ್ಷ್ಯವಿಲ್ಲ. ಅವನು ಅದನ್ನು ನೋಡುವುದು ಕೂಡ ಇಲ್ಲ. ಅವನಿಗೆ ಕೇವಲ ದೇವರು ಮಾತ್ರ ಬೇಕು. ಅವನ ದೈವೀಕ ಶಕ್ತಿಗಳಲ್ಲಿ, ಆ ಸಚ್ಚಿದಾನಂದವಾಗಲಿ ಅಥವಾ ಸ್ವರ್ಗೀಯ ವೈಭವವಾಗಲಿ ಒಂದೂ ಬೇಡ. ಧನ ಐಶ್ವರ್ಯಾದಿಗಳು ಅವನನ್ನು

ಸ್ವಲ್ಪವೂ ಆಕರ್ಷಿಸಲಾರವು. ಬಂಗಾಳದ ಭಕ್ತ ಕವಿ ರಾಮಪ್ರಸಾದನು ಹೀಗೆ ಹಾಡಿದ್ದಾನೆ.

"ಹೇ ಜಗಜ್ಜನನಿ, ತಾರಾ! ಕೆಲಸಕ್ಕೆ ಬಾರದ ಐಶ್ವರ್ಯದಿಂದ ಏನು ಪ್ರಯೋಜನ? ಯಾರು ಅದನ್ನು ಬೇಡುವರು? ನೀನು ನನಗೆ ಇಂತಹ ಐಶ್ವರ್ಯವನ್ನು ಕೊಟ್ಟರೆ ನಿರ್ಲಕ್ಷ್ಯದಿಂದ ಅದನ್ನು ಮೂಲೆಗೆಸೆಯುವೆನು. ಆದರೆ ಭಯ ನಿವಾರಣ ನಿನ್ನ ಪಾದ ಪದ್ಮಗಳನ್ನು ದಯಪಾಲಿಸಿದರೆ ಅದನ್ನು ನನ್ನ ಹೃದಯಪದ್ಮದಲ್ಲಿ ರಕ್ಷಿಸುವೆನು."

೬೮. ಮನಸ್ಸನ್ನು ಹಿಡಿತಕ್ಕೆ ತರುವುದು ಬಹು ಮುಖ್ಯ. ನೀನು ಅದನ್ನು ಮಾಡಲಾರದೆ ಹೋದರೆ ಏನೂ ಪ್ರಯೋಜನವಿಲ್ಲ. ನಾಣ್ಣುಡಿಯಂತೆ "ಗುರು, ಭಗವಂತ, ಆತನ ಭಕ್ತರ ಕೃಪೆ ಪಡೆದರೂ ಒಂದರ ಕರುಣೆಯಿಲ್ಲದೆ ಇದ್ದರೆ ಜೀವನ ಮಣ್ಣುಪಾಲಾಗುವುದು".

ಈ "ಒಂದು" ಎನ್ನುವುದೇ ಮನಸ್ಸು. ಈ ಮನಸ್ಸನ್ನು ಜಯಿಸಿದರೆ ಪ್ರಪಂಚವನ್ನೇ ಗೆಲ್ಲಬಹುದು. ಸಾಧನೆ, ತಪಸ್ಸು ಎಲ್ಲಾ ಈ ಮನಸ್ಸಿನ ಜಯಕ್ಕಾಗಿ ಮಾತ್ರ. ಶ್ರೀ ರಾಮಕೃಷ್ಣರು ಇದರ ಮೇಲೆ ಒಂದು ಹಾಡನ್ನು ಹಾಡುತ್ತಿದ್ದರು. ಅದರ ಅರ್ಥ ಇದು.

"ನನಗೆ ಗೊತ್ತಿರುವ ಮಂತ್ರವನ್ನು ನಿನಗೆ ಉಪದೇಶಿಸಿರುವೆನು. ಅಪಾಯದಿಂದ ನಾನು ಪಾರಾಗುವ ಮತ್ತು ಇತರರನ್ನು ಪಾರುಗಾಣಿಸುವ ಮಂತ್ರ ಅದು. ಈಗ ಎಲ್ಲ ನಿಂತಿರುವುದು ನಿನ್ನ ಮನಸ್ಸಿನ ಮೇಲೆ".

೬೯. ಸದ್ಗುರು, ಸಿದ್ಧ ಮಂತ್ರವನ್ನು ಕರುಣಿಸುವನು. ಆ ಮಂತ್ರ ಜಪದಿಂದ ಋಷಿಗಳೂ ಯೋಗಿಗಳೂ ಮುಕ್ತಿಯನ್ನು ಪಡೆದರು. ಅದೇ ಮಂತ್ರ ಗುರುಪರಂಪರೆಯಲ್ಲಿ ಬಂದಿರುವುದು. ಗುರು ತನ್ನ ಕಲ್ಪನಾ ಪ್ರಪಂಚದಿಂದ ಉದ್ಭವಿಸಿದ ಊಹೆಯನ್ನು ತನ್ನ ಶಿಷ್ಯನಿಗೆ ಕೊಡುವುದಿಲ್ಲ. ಮಂತ್ರದ ಮೇಲಿನ ಶ್ರದ್ಧೆಯನ್ನು ಎಂದೂ ಕಳೆದು ಕೊಳ್ಳಕೂಡದು. ಅದು ಅಲ್ಪನೆಂದೂ ಭಾವಿಸಬಾರದು. ಮಂತ್ರಸಹಿತ ಜಪವನ್ನು ಬಹುದಿನ ನಿಯಮಾನುಸಾರ ಸಾಧನೆ ಮಾಡಿದರೂ ಮನಸ್ಸಿನ ಏಕಾಗ್ರತೆ ಅಥವಾ ಪರಿಶುದ್ಧತೆಯನ್ನು ಪಡೆಯದಿದ್ದಲ್ಲಿ ಮಂತ್ರದ ತಪ್ಪೇನೂ ಅಲ್ಲ. ನಿನ್ನ ದೋಷವೇ ಅದಕ್ಕೆ ಕಾರಣ. ಇವನ್ನು ತಿದ್ದಿಕೊಳ್ಳಲು ನೀನು ಪ್ರಯತ್ನ ಪಡದೆ ಕೇವಲ ಮಂತ್ರವನ್ನು ಬಾಯಲ್ಲಿ ಉಚ್ಚರಿಸುವುದರಿಂದ ಅಥವಾ ಗುರುವನ್ನು ಬದಲಾಯಿಸಿ ಮತ್ತೊಬ್ಬರ ಶಿಷ್ಯನಾಗುವುದರಿಂದ ಏನಾದ

ಹಾಗಾಯಿತು ? ಮನ ಮತ್ತು ಮುಖವನ್ನು ಒಂದುಮಾಡಬೇಕು.

೭೦. ಮಂತ್ರ ಮಹಾಶಕ್ತಿ ಮೂಲ, ನಿನ್ನ ಇಷ್ಟ ದೈವತಾಸಾರವೆಂದು ತಿಳಿ. ಸೂಕ್ಷ್ಮವಸ್ತುವನ್ನು ಮುಟ್ಟಬೇಕಾದರೆ ಸ್ಥೂಲವನ್ನು ಹಿಡಿದುಕೊಳ್ಳಬೇಕು. ಸೂಕ್ಷ್ಮವಸ್ತುವಿನ ಮೂಲಕ ಮಾತು ಮತ್ತು ಮನಸ್ಸನ್ನು ಮೀರಿರುವ ಅತಿ ಸೂಕ್ಷ್ಮವನ್ನು ಪಡೆಯಬಹುದು.

೭೧. ಧ್ಯಾನದ ಗೂಢರಹಸ್ಯವೇ; ಜೀವಾತ್ಮನ ಹೃದಯದಲ್ಲಿ, ನಿನ್ನ ಯಥಾರ್ತ ಸ್ವರೂಪವಾದ ಪರಮಾತ್ಮನಾಗಿರುವ ಸಗುಣಬ್ರಹ್ಮ ಪರಮೇಶ್ವರನನ್ನು ಸ್ಥಾಪಿಸುವುದು. ಅವನ ಜ್ಯೋತಿರ್ಮಯ ಆನಂದಮಯ ಪ್ರೇಮಮಯ ರೂಪು ಮತ್ತು ಭಾವದಲ್ಲಿ, ವಿಷಯಾಸಕ್ತಿವರ್ಜಿತ ಮನಸ್ಸನ್ನು ತದ್ಗತ ಮಾಡಲು ಯತ್ನಿಸಬೇಕು. ಈ ಭಾವ ಪರಿಪಕ್ವವಾಗಿ ಪೂರ್ಣತೆ ಪ್ರಾಪ್ತವಾದರೆ ಆಗ ಮನಸ್ಸು ನಿರವಚ್ಛಿನ್ನ ತೈಲಧಾರೆಯಂತೆ ಇಷ್ಟದೈವದ ಕಡೆ ಪ್ರವಹಿಸುವುದು. ಆಗ ಮನಸ್ಸು ಇಷ್ಟದೇವತೆಯಲ್ಲಿ ತನ್ಮಯವಾಗುವುದು. ಈ ಅವಸ್ಥೆಯನ್ನೇ ಭಾವ ಅಥವಾ ಸಮಾಧಿ ಎನ್ನುವರು.

೭೨. ಪ್ರತಿದಿನ ನಿಷ್ಠಾಪೂರ್ವಕ ಜಪ ಧ್ಯಾನ ಮಾಡುವ ಅಭ್ಯಾಸ ಇಟ್ಟುಕೊಂಡರೆ ಕಾಲಕ್ರಮೇಣ ಅದು ಒಂದು ಬಗೆಯ ಉತ್ಕಟ ಆಕಾಂಕ್ಷೆಯಾಗಿ ಪರಿಣಮಿಸುತ್ತದೆ. ಧ್ಯಾನ ಗಾಢವಾದಹಾಗೆಲ್ಲಾ ನಮಗೊಂದು ಬಗೆಯ ಉನ್ಮಾದಾವಸ್ಥೆ ಪ್ರಾಪ್ತವಾಗಿ ಆಮೇಲೂ ಕೆಲವು ಕಾಲ ಅದು ಇರುತ್ತದೆ. ನಾವೊಂದು ಉಚ್ಚಾವಸ್ಥೆಗೆ ಹೋದಂತೆ ಭಾಸವಾಗುವುದು. ಧ್ಯಾನ ಮುಗಿದ ಕೂಡಲೇ ಎದ್ದು ಪ್ರಾಪಂಚಿಕ ಮಾತುಕತೆಯಲ್ಲಿ ತೊಡಗಬೇಡ. ಆ ಸಮಯದಲ್ಲಿ ಮಾತೇ ಬೇಡವಾಗಿರುತ್ತದೆ. ಹಾಗೆ ಮಾಡುವುದರಿಂದ ನಮ್ಮ ಮನಸ್ಸು ಕದಡಿದಂತಾಗಿ ವ್ಯಥೆಯಾಗುವುದು. ಆ ಸ್ಥಿತಿಯನ್ನು ನಿನ್ನ ಕೈಲಾಗುವಷ್ಟೂ ಹೆಚ್ಚಿಸಲು ಪ್ರಯತ್ನಪಡು.

೭೩. ಕುಡಕರು ಅಥವಾ ಗಾಂಜಾ ಸೇವಕರು ಸಕಾಲದಲ್ಲಿ ತಮಗೆ ಅದು ಸಿಕ್ಕದೇ ಇದ್ದರೆ ಹೇಗೆ ಶಕ್ತಿಹೀನರಾಗಿ ಕಂಗಾಲಾಗುತ್ತಾರೋ ಹಾಗೆಯೇ ಸಾಧಕರೂ ಕೂಡ ಯಥಾಕಾಲಕ್ಕೆ ಸರಿಯಾಗಿ ಜಪ ಮತ್ತು ಧ್ಯಾನವನ್ನು ಯಾವುದಾದರೂ ಕಾರಣದಿಂದ ಮಾಡಲಾರದೇ ಹೋದರೆ ಆ ರೀತಿ ಅನುಭವಿಸುತ್ತಾರೆ. ಯಾವುದನ್ನು ಅಭ್ಯಾಸಮಾಡಿದರೂ ಹೀಗೆಯೆ ಪರಿತಪಿಸುತ್ತೇವೆ.

೭೪. "ಸಂಸಾರಿಕರಾದ ನಮಗೆ ಮುಕ್ತಿಯ ಭರವಸೆ ಉಂಟೆ?" ಏಕಿಲ್ಲ? ನಿಜವಾಗಿಯೂ ಭರವಸೆಯುಂಟು. ದೇವರು ಸನ್ಯಾಸಿಗಳಿಗೆ ಮಾತ್ರ ಇದ್ದಾನೆಯೇ? ಪ್ರತಿಯೊಬ್ಬರೂ ಆತನ ಮಕ್ಕಳು. ಯಾರು ಪ್ರಪಂಚವನ್ನು ಬಿಟ್ಟು ಬದುಕಬಲ್ಲರು? ಸನ್ಯಾಸಿಗಳಾದ ನಮಗೂ ಪ್ರಪಂಚದ ಸಂಬಂಧವಿದೆ. ನಾವೂ ಕೂಡ ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವುದಕ್ಕಾಗಿ ಯೋಚಿಸಬೇಕು ಮತ್ತು ಅವರ ಯಾತನೆ ವೇದನೆ ಗಳಿಗಾಗಿ ಮರುಗುತ್ತೇವೆ. ಆಶ್ರಮದ ಸನ್ಯಾಸಿಗಳ ಕ್ಷೇಮ ಚಿಂತನೆ, ಮತ್ತು ಲೋಕಪ್ರಸಿದ್ಧವಾದ ನಮ್ಮ ಸಂಸ್ಥೆಯ ಹಿತಕ್ಕಾಗಿ ಯೋಚಿಸ ಬೇಕಾಗುತ್ತದೆ. ಗುರು ಮಹಾರಾಜರ ಕೆಲಸದ ಬೆಳವಳಿಗೆ ಮತ್ತು ಅಭಿವೃದ್ಧಿಗಾಗಿ ಎಂದರೆ ಅವರ ವಿಚಾರಗಳು ಮತ್ತು ಧ್ಯೇಯಗಳ ಪ್ರಚಾರ ಕ್ಕಾಗಿ ಯೋಚಿಸಬೇಕಾಗುತ್ತದೆ. ಬಹಳ ದೂರ ಹಬ್ಬಿದ ಕ್ಷಾಮ ಪ್ರವಾಹಗಳು ಸಾಂಕ್ರಾಮಿಕರೋಗಗಳ ಪರಿಣಾಮವಾಗಿ ಹೃದಯ ಕರಗು ವಂತೆ ಘೋರ ಕಷ್ಟ ನಷ್ಟಗಳಿಂದ ನರಳುತ್ತಿರುವ ರೋಗಿಗಳು, ಅನಾಥರು, ಉಪವಾಸದಿಂದ ನರಳುತ್ತಿರುವರು, ನಿರಾಶ್ರಿತರಾದ ನಮ್ಮ ಒಡನಾಡಿಗಳ ಕಥೆಗಳಿಂದ ನಾವು ತೀವ್ರ ಸಂಕಟ ಅನುಭವಿಸುತ್ತೇವೆ. ಅದನ್ನು ನಿವಾ ರಿಸಲು ಹಲವಾರು ಪ್ರಯತ್ನಗಳನ್ನು ಚಿಂತಿಸುತ್ತೇವೆ. ಆದರೆ ಕೇವಲ ನಮ್ಮ ಸ್ವಾರ್ಥಕ್ಕಾಗಿ ಚಿಂತಿಸುವುದಕ್ಕೂ ಇತರರಿಗಾಗಿ ಚಿಂತಿಸುವುದಕ್ಕೂ ಅಗಾಧ ಅಂತರವಿದೆ. ಒಂದು ಮಾಯೆ ಅಥವಾ ಅವಿದ್ಯೆ ಅಂದರೆ ಅಜ್ಞಾ ನಕ್ಕೆ ಸಂಬಂಧಪಟ್ಟಿದೆ. ಈ ಪ್ರಪಂಚದಲ್ಲಿರುವುದರಿಂದ ಹಾನಿಯಿಲ್ಲ. ಆದರೆ ನೀನು ಪ್ರಾಪಂಚಿಕನೆಂದು ಪ್ರಪಂಚವೇ ನಿನ್ನ ಸರ್ವಸ್ವವೆಂದು ಭಾವಿ ಸದೆ ಜಾಗ್ರತನಾಗಿರು. ಈ ಪ್ರಪಂಚದಲ್ಲಿದ್ದು ನಿನ್ನ ಕರ್ತವ್ಯ ಕರ್ಮ ತೀರಿಸು. ಆದರೆ ತ್ಯಾಗಭಾವನೆ, "ನಾನು ಕರ್ತನಲ್ಲ" ಎಂಬ ನಿರ್ಲಿಪ್ತ ಭಾವನೆ ಯಾವಾಗಲೂ ನಿನ್ನಲ್ಲಿರಲಿ.

೭೫. ಈ ಜಗತ್ತು ಒಂದು ದೊಡ್ಡ ಕನಸೆಂದು ತಿಳಿ. ಎಲ್ಲಿಯ ವರೆಗೆ ಅದು ಉಳಿದಿರುತ್ತದೆಯೋ ಅಲ್ಲಿಯವರೆಗೂ ವ್ಯಾವಹಾರಿಕ ದೃಷ್ಟಿ ಯಿಂದ ಈ ಪ್ರಪಂಚ ನಿಜವೆಂದು ಭಾವಿಸಿ ನಿನ್ನ ಕರ್ತವ್ಯವನ್ನು ಮಾಡು. ಆದರೆ ಅದೇ ಸಮಯದಲ್ಲಿ ದೇವರೊಬ್ಬನೇ ಸತ್ಯ, ಶಾಶ್ವತ, ನಿತ್ಯ, ಆತನನ್ನು ಪಡೆಯುವವರೆಗೂ ಅಂತಿಮಸುಖ, ಶಾಂತಿ, ಮುಕ್ತಿ ಎಂಬುದಿಲ್ಲ ಎಂಬ ಭಾವನೆ ದೃಢವಾಗಿ ಇರಲಿ. ಅತ್ಯುತ್ತಮ ಮನುಷ್ಯ

ಜನ್ಮಧಾರಣೆಮಾಡಿ, ನಿಜವಾದ ಜ್ಞಾನವನ್ನು ಹೊಂದುವ ಸುಯೋಗವನ್ನು ಪಡೆದೂ, ನೀನು ದೇವರ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸದಿದ್ದಲ್ಲಿ ಈ ಜೀವನ ವ್ಯರ್ಥ.

೭೬. ಎಲ್ಲಿಯವರೆಗೆ ನಮ್ಮ ಮನಸ್ಸು ಪ್ರಾಪಂಚಿಕತೆಯಿಂದ ತುಂಬಿರುತ್ತದೆಯೋ, ಎಲ್ಲಿಯವರೆಗೆ ವಿಷಯ ವಸ್ತುಗಳಿಗಾಗಿ ಮೋಹ ಮತ್ತು ಹಂಬಲಿಕೆ ಇದೆಯೋ ಅಲ್ಲಿಯವರೆಗೂ ಬಾಹ್ಯಪರಿತ್ಯಾಗದಿಂದ ಏನೂ ಪ್ರಯೋಜನವಿಲ್ಲ. ನೀನು ಕೇವಲ ಹೊರಗಡೆ ತ್ಯಾಗಮಾಡಿ ಕಾಡಿಗಾಗಲಿ ಅಥವಾ ಪರ್ವತ ಗುಹೆಗಾಗಲಿ ಓಡಿಹೋಗು. ಪ್ರಪಂಚ ಅಲ್ಲಿಗೂ ನಿನ್ನನ್ನೂ ಹಿಂಬಾಲಿಸುವುದು, ನಿನ್ನ ಕಣ್ಣಿಗೆ ಮಣ್ಣೆರಚುವುದು ಮತ್ತು ಅನೇಕ ರೋಗಿನಿಂದ ನಿನ್ನನ್ನು ಚಪಲ ಚಿತ್ತನನ್ನಾಗಿ ಮಾಡುವುದು. ಹೊಸ ಹೊಸ ಬಂಧನಗಳನ್ನು ನಿನಗಾಗಿ ಸೃಷ್ಟಿಸುವುದು. ಗೃಹಸ್ಥನಾಗಲಿ, ಸನ್ಯಾಸಿಯಾಗಲಿ, ಯಾರೇ ಆದರೂ ಆದರ್ಶದ ಮೇಲೆ ಲಕ್ಷ್ಯವಿಲ್ಲದೆ ಇದ್ದರೆ, ಪತನ ಅನಿವಾರ್ಯ. ಯಾರಿಗೂ ನಿನ್ನನ್ನು ರಕ್ಷಿಸಲಾಗುವುದಿಲ್ಲ.

೭೭. ಯಾವಾಗಲೂ ಜಾಗರೂಕನಾಗಿರು. ನಿನ್ನ ಮನಸ್ಸನ್ನು ಒಂದು ಗಳಿಗೆಯೂ ನಂಬಬೇಡ. ನೀನು ಆಧ್ಯಾತ್ಮಿಕತೆಯಲ್ಲಿ ಎಷ್ಟೇ ಮುಂದುವರಿದಿದ್ದರೂ ಇಂದ್ರಿಯಗಳನ್ನು ಜಯಿಸಿರುವೆನೆಂದು ಹೆಮ್ಮೆ ಪಡಬೇಡ. ಏಕೆಂದರೆ ಇನ್ನೂ ನೀನು ಬೀಳುವ ಸಂಭವ ಇದೆ. ಸೂಕ್ಷ್ಮ ಮಾರ್ಗಗಳಿಂದ ಕೆಲವುವೇಳೆ ಸದ್ಗುಣಗಳ ನೆವದಲ್ಲಿ, ದಯೆಯ ನೆವದಲ್ಲಿ, ನಿನ್ನನ್ನು ತನ್ನಧೀನತೆಯಲ್ಲಿಟ್ಟುಕೊಳ್ಳಲು, ಮರುಳುಗೊಳಿಸಲು ಮಾಯೆ ಯತ್ನಿಸಬಹುದು. ಬಹುದೂರ ಹೋದಮೇಲೆ ನಿನಗರಿವಿಲ್ಲದೆಯೇ ಆತ್ಮ ಹಾನಿಯಾಗಿರುವುದೆಂಬುದು ಗೊತ್ತಾಗುವುದು. ನೀನು ಅದನ್ನು ಅರಿಯುವ ವೇಳೆಗಾಗಲೇ, ಕಾಲಮೀರಿ, ಇನ್ನು ಹಿಂತಿರುಗಲು ದುಃಸಾಧ್ಯವಾಗಬಹುದು.

೭೮. ಸಾಧಾರಣವಾಗಿ ಮದುವೆಯಾಗಿ ಗೃಹಸ್ಥನಾಗಿರುವುದು ಉತ್ತಮ. ಏಕೆಂದರೆ ಅದು ನಾಲ್ಕು ಆಶ್ರಮಗಳಲ್ಲೊಂದು. ಇದು ಜೀವನದ ಒಂದು ಹಂತ. ಆತ್ಮವಿಕಾಸಕ್ಕೆ ಇದೊಂದು ಮಾರ್ಗ. ಆದರೆ ಬ್ರಹ್ಮಚರ್ಯ ವ್ರತಧಾರಣೆ ಮಾಡಿದವನು ಅಥವಾ ಸನ್ಯಾಸಿ ದೀಕ್ಷೆ ತೆಗೆದುಕೊಂಡವನು ಕಾಮಿನಿ ಕಾಂಚನದ ದಾಸನಾದರೆ ಅವನು ಪಾಪಿಷ್ಠನಾಗುವುದಲ್ಲದೆ ಇಹಪರಗಳೆರಡನ್ನೂ ಕಳೆದುಕೊಳ್ಳುವನು. ಯಾರು ಈ ಪ್ರಪಂಚವನ್ನು ತ್ಯಜಿ

ಸಿರುವರೋ ಅವರು ಮತ್ತು ವಿಧವೆಯರು ತಮ್ಮ ಆಜನ್ಮಪರ್ಯಂತ ಬ್ರಹ್ಮಚರ್ಯ ವ್ರತವನ್ನು ಪಾಲಿಸಬೇಕು. ಎಂದೂ ಮನಃಪೂರ್ವಕ ಅದನ್ನು ಭಂಗಮಾಡಕೂಡದು. ಯಾರಿಗೆ ಇದು ಅಸಾಧ್ಯವೋ ಅವರು ತಮ್ಮ ಮತ್ತು ಇತರರ ಒಳ್ಳೆಯದಕ್ಕಾಗಿ ಮದುವೆಯಾಗಲು ಹಿಂದೆ ಮುಂದೆ ನೋಡಕೂಡದು. ಏಕೆಂದರೆ ಅದಕ್ಕೆ ಶಾಸ್ತ್ರದ ಅನುಮತಿಯೂ ಇದೆ. ಸಾಧು ಪಾಲ್, ಬೈಬಲ್ಲಿನಲ್ಲಿ "ಬೇಯುವುದಕ್ಕಿಂತ ಮದುವೆಯಾಗುವುದೇ ಲೇಸು" ಎನ್ನುವನು.

೭೯. ಪ್ರತಿಯೊಬ್ಬರೂ ಹೆಂಗಸಾಗಲಿ, ಗಂಡಸಾಗಲಿ ಸ್ವಾತಂತ್ರ್ಯ ಜೀವನಕ್ಕೆ ಯಾವುದಾದರೊಂದು ಬಗೆಯ ಶಿಕ್ಷಣ, ವೃತ್ತಿ, ಕೈಗಾರಿಕೆ ಕಲಿತಿರುವುದು ಅತ್ಯಾವಶ್ಯಕ. ಪರಾಧೀನತೆ ತಿರಸ್ಕರಣೀಯ ಸ್ಥಿತಿ. ಅದು ಬಾಳನ್ನು ದುಸ್ಸಹನೀಯವನ್ನಾಗಿ ಮಾಡುವುದು. ಅಂತಹ ಪರಿಸ್ಥಿತಿಯಲ್ಲಿ ನಾವೆಷ್ಟೇ ಮನಃಪೂರ್ವಕವಾಗಿ ಇಚ್ಛಿಸಿದರೂ ದೇವರು ಮತ್ತು ಧರ್ಮ ಚಿಂತನೆಯನ್ನು ಮಾಡಲು ಅಸಾಧ್ಯ.

೮೦. ಗುರುದತ್ತ ಮಂತ್ರವನ್ನು ಆ ಪ್ರಾಣಸಾಧನೆ ಮಾಡಿ ನಮ್ಮ ನಿತ್ಯ ಜೀವನದಲ್ಲಿಯೂ ಆತನ ಉಪದೇಶದಂತೆ ನಡೆಯಲು ಪ್ರಯತ್ನಿಸಿದರೆ ಇದೇ ನೀನು ಗುರುವಿಗೆ ಸಲ್ಲಿಸಬೇಕಾದ ನಿಜವಾದ ಗುರುದಕ್ಷಿಣೆ. ಇದೇ ಆತನ ಪ್ರೇಮವನ್ನು ಗಳಿಸುವುದಕ್ಕೆ, ಸಿದ್ಧಿ ಪ್ರಾಪ್ತಿಗೆ, ಸರ್ವ ಶ್ರೇಷ್ಠ ಉಪಾಯ.

೮೧. ತಂದೆ ಹೇಗೆ ಮಗನು ತನ್ನನ್ನು ಮೀರಿಸಬೇಕೆಂದು ಇಚ್ಛಿಸುತ್ತಾನೋ ಹಾಗೆಯೇ ಗುರು ಕೂಡ ತನ್ನ ಶಿಷ್ಯ ತನ್ನನ್ನು ಮೀರಿಸಬೇಕೆಂದು ಇಚ್ಛಿಸುತ್ತಾನೆ. ತಂದೆ ತನಗಿಂತ ತನ್ನ ಮಗ ಯಶಸ್ವಿಯಾಗಬೇಕೆಂದೂ, ಗುರು ಶಿಷ್ಯ ತನಗಿಂತಲೂ ಯಶಸ್ವಿಯಾಗಬೇಕೆಂದೂ ಬಯಸುತ್ತಾರೆ.

೮೨. ದೇವರೇ ಪರಮಗುರು. ಗುರುಗಳ ಗುರು. ಆತನೇ ನಿಜವಾದ ಕರ್ತ. ಮಾನವ ಗುರು ಕೇವಲ ಆತನ ಉಪಕರಣ. ಶಿಷ್ಯನಿಗೆ ತನ್ನ ಶಕ್ತಿ ಪ್ರವಹಿಸುವಂತೆ ಮಾಡುವ ವಾಹಕ ಮಾತ್ರ.

೮೩. ಯೋಗ್ಯ ಗುರು ತನ್ನ ಶಿಷ್ಯನಿಗೆ ಮಂತ್ರದೀಕ್ಷೆ ಕೊಡುವಾಗ ತಾನು ತನ್ನ ಆಧ್ಯಾತ್ಮಿಕ ಸಾಧನೆ ಮೂಲಕ ಸಾಕ್ಷಾತ್ಕಾರ ಮಾಡಿಕೊಂಡಿರುವ ಗಹನ ರಹಸ್ಯ ಸತ್ಯಗಳನ್ನು ಕೊಡುತ್ತಾನೆ. ಕೇವಲ ವ್ಯಾವಹಾರಿಕ

ದೃಷ್ಟಿಯಿಂದ ಆತನನ್ನು ಅಳೆಯುವುದಕ್ಕೆ, ಆತನ ಮಹತ್ವವನ್ನು ನಿರ್ಣಯಿಸುವುದಕ್ಕೆ ಪ್ರಯತ್ನಿಸಬೇಡ. ಇದು ಕಾಯಿಪಲ್ಯ ಮಾರುವವನು ಒಂದು ವಜ್ರದ ಬೆಲೆಯನ್ನು ಒಂಬತ್ತು ಸೇರು ಕಾಳಿನಷ್ಟು ಬೆಲೆ ಕಟ್ಟಿ, ಒಂದು ಕಾಳನ್ನೂ ಇದಕ್ಕಿಂತ ಜಾಸ್ತಿ ಕೊಡುವುದಿಲ್ಲವೆಂದಹಾಗೆ ಆಗುತ್ತದೆ. ಇವು ಕೇವಲ ಚರ್ಚೆ ಅಥವಾ ವಾದವಿವಾದಗಳ ವಿಷಯವಲ್ಲ. ಬುದ್ಧಿಯ ಹಿಡಿತಕ್ಕೆ ಸಿಲುಕದ ಸೂಕ್ಷ್ಮ ಗಹನ ಸತ್ಯಾಂಶಗಳು. ದೃಢನಂಬುಗೆಯಿಂದ ಗುರುವಿನ ಉಪದೇಶದಂತೆ ಆಧ್ಯಾತ್ಮಿಕ ಸಾಧನೆಯನ್ನು ನಡೆಸುತ್ತಾ ಹೋದರೆ ಮಾತ್ರ ಇದು ಮನನವಾಗುವುದು. ನಂತರ ಒಂದಾದ ಮೇಲೊಂದು ತೆರೆಬಿದ್ದು ಪರಂಜ್ಯೋತಿ ಪೂರ್ಣ ತೇಜಸ್ಸಿನಿಂದ ಪ್ರಕಾಶಿಸುವುದು.

೮೪. ಪ್ರತಿದಿನವೂ ಸ್ವಲ್ಪಹೊತ್ತಾದರೂ ಜಪ ಧ್ಯಾನ ಮಾಡು. ನೀನು ಯಾವಾಗ ಅದನ್ನು ತಪ್ಪಿಸುವೆಯೋ ಆಗ ನೀನೇ ಪ್ರಶ್ನೆ ಹಾಕಿಕೊ:—ನಿನಗೆ ಎಲ್ಲಾ ಬಗೆಯ ಕೆಲಸಕ್ಕೂ, ಅದೆಷ್ಟೇ ಕ್ಷುದ್ರವಾಗಿರಲಿ, ಹೇಗೋ ಕಾಲ ಸಿಗುತ್ತದೆ. ಆದರೂ ಕೇವಲ ಒಂದು ಗಂಟೆಯಷ್ಟು ಜಪ ಧ್ಯಾನಕ್ಕೆ ಕಾಲ ಸಿಗುವುದಿಲ್ಲ. ಬಾಯಾರಿಕೆಯನ್ನಿಂಗಿಸಲು ನೀರು, ಕ್ಷುಧೆಯನ್ನಡಗಿಸಲು ಆಹಾರ, ಬದುಕಿರುವುದಕ್ಕೆ ಉಸಿರಾಡುವುದು ಹೇಗೆ ಆವಶ್ಯಕವೋ ಹಾಗೆಯೇ ಜಪ ಧ್ಯಾನ ಪ್ರಾರ್ಥನೆ ಸಾಧನೆಗಳೂ, ಅದಕ್ಕಿಂತ ಹೆಚ್ಚಿಲ್ಲದಿದ್ದಲ್ಲಿ, ಅವುಗಳಷ್ಟೇ ಮಹತ್ವವಾದುದು. ಸತ್ಯ ಸಾಕ್ಷಾತ್ಕಾರಕ್ಕೆ ಅತ್ಯಂತ ಆವಶ್ಯಕವಾದುವು. ಆತನಿಗಾಗಿ ಹಂಬಲಿಕೆ ನಮ್ಮಲ್ಲಿ ಉತ್ಪನ್ನವಾಗಬೇಕು. ಪ್ರತಿನಿತ್ಯದ ಸಾಧನೆಯಿಂದ ಇದು ಕ್ರಮೇಣ ಬರುತ್ತದೆ. ಶಕ್ತಿಯೂ ಇದರಿಂದ ಸಂಗ್ರಹವಾಗುವುದು.

೮೫. ದೀಕ್ಷೆ ಹೊಂದಿದಮೇಲೆ ಅನೇಕರು ಗುರುವಿಗೆ, "ನಮಗೆ ಏನನ್ನೂ ಮಾಡುವುದಕ್ಕೆ ಆಗುವುದಿಲ್ಲ. ನಿಮ್ಮಮೇಲೆ ನಮ್ಮೆಲ್ಲಾ ಜವಾಬ್ದಾರಿಯನ್ನೂ ಬಿಟ್ಟಿರುವುದರಿಂದ ಈಗ ನಾವು ಪೂರ್ತಿ ಬಿಡುಗಡೆ ಹೊಂದಿದ್ದೇವೆ" ಎನ್ನುತ್ತಾರೆ. ಇದು ಏನುಮಾಡುವುದಕ್ಕೂ ಇಚ್ಛೆಯಿಲ್ಲದ ಕೇವಲ ತನ್ನ ಜವಾಬ್ದಾರಿಯನ್ನು ಕಳೆದುಕೊಳ್ಳುವುದಕ್ಕೆ ಹೇಳುವ ನೆಪ ಅಷ್ಟೆ. ಆಧ್ಯಾತ್ಮಿಕತೆಯನ್ನು ಪಡೆಯಬೇಕಾದರೆ ಇಷ್ಟೊಂದು ಸುಲಭವೆ? ಅದು ಅಷ್ಟೊಂದು ಅಗ್ಗವೆಂದು ತಿಳಿದಿರಾ? "ಭಾವದಂತೆ ಭಕ್ತಿ" ನಮ್ಮ ಭಾವ ಭಕ್ತಿಯ ತೀವ್ರತೆಯಂತೆ ಸಿದ್ಧಿ ಕೂಡ. ಕೇವಲ ಬಾಯಿಮಾತಿನಿಂದ ಗುರು

ವಿನ ಮೇಲೆ ಸಮಸ್ತ ಹೊಣೆಯನ್ನೂ ಹೊರಿಸಲಾಗುವುದೆ? ಈ ಕ್ಷುದ್ರ ಅಹಂಭಾವವನ್ನು ತ್ಯಜಿಸಿ ಸಂಪೂರ್ಣ ನಾವು ಶರಣಾಗತರಾಗಬೇಕು. ಅದು ಬಹಳಕಾಲದ ಸಾಧನೆಯಿಂದ ಮಾತ್ರ ಸಾಧ್ಯ. ಕೇವಲ ಕೆಲವು ಕುರುಡು ಕಾಸುಗಳ ಸಂಪಾದನೆಗಾಗಿ ಹಗಲೂ ರಾತ್ರಿ, ಅನ್ನ ನಿದ್ರೆಯನ್ನೂ ಬಿಟ್ಟು, ಬಿಡುವಿಲ್ಲದೆ ಒದ್ದಾಡುತ್ತೀರಿ. ಆದರೆ ಈ ಆಧ್ಯಾತ್ಮಿಕ ಜ್ಞಾನಾರ್ಜನೆಗೆ ಮತ್ತು ಭಕ್ತಿಯನ್ನು ಗಳಿಸುವುದಕ್ಕೆ ಮಾತ್ರ "ನಮಗೇನೂ ಮಾಡಲಿಕ್ಕಾಗುವುದಿಲ್ಲ" ಅಲ್ಲವೆ? ನಿಜವಾಗಿ ಎಂತಹ ನಾಚಿಕೆಗೇಡು! ಸತ್ಯ ಸಾಕ್ಷಾತ್ಕಾರವಾಗಬೇಕಾದರೆ ಪೂರ್ಣ ಮನಸ್ಸಿನಿಂದ ಆಧ್ಯಾತ್ಮಿಕ ಸಾಧನೆಯನ್ನು ತನ್ನ ಶಕ್ತಿ ಇದ್ದಷ್ಟು, ಒಂದು ದಿನವಾದಮೇಲೆ ಇನ್ನೊಂದು ದಿನ, ತಿಂಗಳಮೇಲೆ ತಿಂಗಳು, ವರುಷದ ಮೇಲೆ ವರುಷ ಮಾಡಬೇಕು. ಇದಲ್ಲದೆ ಬೇರೆ ದಾರಿ ಇಲ್ಲ.

೮೬. ಯಾರಾದರಾಗಲಿ, ಗುರು ಕೂಡ, ಒಬ್ಬರ ಪಾಪದ ಹೊರೆಯನ್ನು ಮತ್ತೊಬ್ಬರು ತೆಗೆದುಕೊಳ್ಳಲಾಗುವುದಿಲ್ಲ. ಗುರು ನಿನಗೆ ದೀಕ್ಷೆ ಕೊಟ್ಟದ್ದರಿಂದ ನಿನ್ನ ಪಾಪಗಳ ಹೊರೆಯನ್ನೆಲ್ಲಾ ತಾನೇ ತನ್ನ ಹೆಗಲಿಗೆ ವಹಿಸಿಕೊಂಡನೆಂದು ಯೋಚಿಸಿದರೆ ಅದು ಶುದ್ಧ ತಪ್ಪು. ಕೇವಲ ದೇವರೇ ಅವತಾರಮಾಡಿಬಂದಾಗ ಮಾತ್ರ ಇದು ಸಾಧ್ಯವಾಗಬಹುದು. ನಿಜವಾಗಿ ಅವರಿದನ್ನು ಮಾಡೇಮಾಡುತ್ತಾರೆ. ಅವರು ಸತ್ಯವಾಗಿ ಅಹೇತುಕ ಕೃಪಾಸಿಂಧು. ಅವರು, ವಿಶೇಷವಾಗಿ ಪಾಪಿಷ್ಠರು, ದುಃಖಿಗಳು ಇವರನ್ನು ಮೇಲೆತ್ತುವುದಕ್ಕಾಗಿ ಅವತರಿಸುತ್ತಾರೆ. ದೇವರನ್ನು ಯಾವ ಪಾಪವೂ ಸ್ಪರ್ಶಿಸುವುದಿಲ್ಲ. ಆದರೂ ಈ ಮನುಷ್ಯದೇಹಧಾರಣೆಯಿಂದ ಆತನಲ್ಲಿ ಶರಣಾದವರ ಪಾಪಗಳೆಲ್ಲಾ ಆತನನ್ನು ಖಾಯಿಲೆಯ ರೂಪದಲ್ಲಿ ಮುತ್ತುತ್ತವೆ. ಆತನಿಗೆ ವ್ಯಥೆಯನ್ನುಂಟುಮಾಡುತ್ತವೆ. ಪಾಪಮಾಡಿದ ಮೇಲೆ ಅದು ತೀವ್ರ ಪಶ್ಚಾತ್ತಾಪ ಮತ್ತು ಪಾಪಕೃತ್ಯಗಳನ್ನೆಲ್ಲಾ ತ್ಯಜಿಸಿ ಪವಿತ್ರ ಜೀವನ ನಡೆಸುವುದರಿಂದ ಮಾತ್ರ ಪರಿಹಾರವಾಗುವುದು. ಆತ್ಮಜ್ಞಾನದ ಬೆಂಕಿ ಮಾತ್ರ ಪಾಪವೃತ್ತಿಯನ್ನು ದಹಿಸಬಲ್ಲದು.

೮೭. ಜನರು ಧರ್ಮಕ್ಕೆ ಯಾವ ಬಗೆಯ ತರಬೇತಾಗಲಿ ಕೊಂದರೆಯಾಗಲಿ ಅನಾವಶ್ಯಕವೆಂದೂ, ಅದೊಂದು ದಾರಿಯಲ್ಲಿ ಬಿದ್ದಿರುವ ವಾರಸುದಾರರಿಲ್ಲದ ಆಸ್ತಿಯೆಂದೂ, ಕೇವಲ ಅದನ್ನು ಎತ್ತಿಕೊಂಡು ಬಿಟ್ಟರೆ ಆಯಿತೆಂದೂ ಯೋಚಿಸುತ್ತಾರೆ. ಪ್ರತಿಯೊಬ್ಬನೂ ಧರ್ಮದ

ವಿಚಾರವಾಗಿ ತನ್ನ ಅಭಿಪ್ರಾಯವನ್ನು, ಯೋಜನೆಯನ್ನು ಕೊಡಲು ಮುಂದೆ ಬರುತ್ತಾನೆ. ಶಾಸ್ತ್ರಗಳ ಅಧ್ಯಯನ ಅಥವಾ ಯಾವ ಬಗೆಯ ಸಾಧನೆಯನ್ನೂ ಮಾಡದೆ ತಾನು ಒಬ್ಬ ನಿಪುಣನೆಂದೂ, ಎಲ್ಲವನ್ನೂ ತಿಳಿದಿರುವ ಪಂಡಿತನೆಂದೂ ಯೋಚಿಸುತ್ತಾನೆ. ಯಾವ ಐಹಿಕ ಜ್ಞಾನದಲ್ಲೇ ಆಗಲಿ ಪ್ರವೀಣನಾಗಬೇಕಾದರೆ ಒಬ್ಬ ನಿಪುಣನಾದ ಗುರುವಿನಲ್ಲಿ ಅನೇಕ ವರುಷಗಳು ವಿದ್ಯಾಭ್ಯಾಸಮಾಡಬೇಕು. ಆಧ್ಯಾತ್ಮಿಕ ಜ್ಞಾನಾರ್ಜನೆಗೆ ಮತ್ತು ಧರ್ಮದ ಅತ್ಯಂತ ಸೂಕ್ಷ್ಮ ಸತ್ಯಗಳನ್ನು ನಮ್ಮ ಜೀವನದಲ್ಲಿ ಗ್ರಹಿಸುವುದಕ್ಕೆ ಬಹಳ ಪರಿಶ್ರಮದ ಶಿಕ್ಷಣವಾಗಲಿ ಸಾಧನೆಯಾಗಲಿ ಅನಾವಶ್ಯಕವೆಂದು ಭಾವಿಸುವುದು ಕೇವಲ ತಿಳಿಗೇಡಿತನ.

೮೮. ದೀಕ್ಷೆಯನ್ನು ಪಡೆದ ಕೇವಲ ಕೆಲವು ದಿನಗಳಲ್ಲಿ ಅನೇಕರು, "ನಮ್ಮ ಮನಸ್ಸೇಕೆ ಇನ್ನೂ ಶಾಂತವಾಗಿಲ್ಲ? ನಮಗೇಕೆ ಸರಿಯಾಗಿ ಧ್ಯಾನ ಮಾಡಲು ಆಗುತ್ತಿಲ್ಲ. ದಯವಿಟ್ಟು ಮನಸ್ಸು ಪ್ರಶಾಂತವಾಗುವಂತೆ ಮಾಡಿ" ಎಂದು ಗೊಣಗುಟ್ಟುತ್ತಾರೆ. ಮನೋನಿಶ್ಚಲತೆಯನ್ನು ಪಡೆಯುವುದು ಅಥವಾ ಧ್ಯಾನದಲ್ಲಿ ಗಾಢವಾಗಿ ಮಗ್ನನಾಗುವುದು ಅಷ್ಟೊಂದು ಸುಲಭವೆ? ಮನಸ್ಸು ನಮ್ಮ ಹಿಂದಿನ ಜನ್ಮದ ಸಂಸ್ಕಾರ ಮತ್ತು ವಿಷಯವಸ್ತುಗಳ ಮೇಲಿನ ವ್ಯಾಮೋಹದಿಂದ ಕೂಡಿದೆ. ಇವುಗಳ ಪ್ರೇರಣೆಯಿಂದ ಮನಸ್ಸು ಸ್ವಾಭಾವಿಕವಾಗಿ ಚಂಚಲವಾಗಿದೆ. ಪರಿಣಾಮವಾಗಿ ಅದು ಯಾವಾಗಲೂ ಈ ವಸ್ತುಗಳನ್ನು ಪಡೆಯಲು, ಆನಂದಿಸಲು ತವಕಪಡುವುದು. ಪದೇ ಪದೇ ಪ್ರಯತ್ನ ಮತ್ತು ಸ್ವಾರ್ಥ ತ್ಯಾಗದಿಂದಲ್ಲದೆ ಚಂಚಲವಾದ ಮನಸ್ಸನ್ನು ಶಾಂತ ಸ್ಥಿತಿಗೆ ತರುವುದಕ್ಕೆ ಬೇರಾವ ಸುಲಭ ಹಾದಿಯೂ ಇಲ್ಲ. ಗುರು ಹೇಳಿರುವಂತೆ ಜಪ ಮತ್ತು ಧ್ಯಾನವನ್ನು ಸಹನೆ ಮತ್ತು ಏಕನಿಷ್ಠೆಯಿಂದ ದಿನಗಳ ನೇಲೆ ದಿನ, ತಿಂಗಳ ಮೇಲೆ ತಿಂಗಳು, ಇಲ್ಲ ವರ್ಷದ ನಂತರ ವರ್ಷಗಳು ಸಾಧನೆಮಾಡಬೇಕು. ಪ್ರಾಪಂಚಿಕ ವಸ್ತುಗಳಮೇಲೆ ಇರುವ ಆಸಕ್ತಿಯನ್ನು ತಗ್ಗಿಸಲು ಯತ್ನಿಸಬೇಕು. ನಿನ್ನಲ್ಲಿ ವಿಷಯವಸ್ತುಗಳ ಮೇಲಿನ ಹಂಬಲ ಕಡಿಮೆಯಾದಷ್ಟೂ, ನಿನ್ನ ಇಷ್ಟದೇವತೆಯಮೇಲೆ ಪ್ರೇಮ ಮತ್ತು ಭಕ್ತಿ ಹೆಚ್ಚಾಗುವುದು. ನೀನು ಭಗವಂತನನ್ನು ನಿನ್ನ ಪ್ರಿಯತಮ ಬಂಧುವಿಗಿಂತ ಹೆಚ್ಚೆಂದು ಅರಿತಷ್ಟೂ, ಮನಸ್ಸೂ ತನಗೆ ತಾನೇ ನಿಶ್ಚಲವಾಗಿ ಶಾಂತವಾಗುವುದು. ನಂತರ ಧ್ಯಾನವೂ ಗಾಢವಾಗುವುದು. ನಿನಗೆ ಶಾಂತಿ ಸಂತೋಷ ಲಭಿಸುವುದು. ಬೇಗ ಫಲ

ದೊರೆಯಬೇಕೆಂದು ಆತುರಪಡುವುದಕ್ಕಿಂತ ಶ್ರೀ ರಾಮಕೃಷ್ಣರು ಹೇಳು ತ್ತಿದ್ದ, ಆ ವಂಶಪಾರಂಪರ್ಯವಾಗಿ ಬಂದ ರೈತನು ತನ್ನ ಭೂಮಿಯನ್ನು ವರುಷಗಳಮೇಲೆ ವರುಷಗಳು ಬೆಳೆ ಸಿಗದಿದ್ದರೂ, ಪ್ರತಿ ವರುಷವೂ ಉಳು ವಂತೆ ಆಧ್ಯಾತ್ಮಿಕ ಸಾಧನೆ ಬಿಡದೆ ಸಾಗಬೇಕು.

೮೯. ನೀನು ದೇವಾಲಯಕ್ಕಾಗಲಿ, ಸಾಧು ದರ್ಶನಕ್ಕಾಗಲಿ ಬರಿಗೈಯಲ್ಲಿ ಹೋಗಬೇಡ. ಕಡೆಯಪಕ್ಷ ಒಂದೆರಡು ಕಾಸಿನ ಹಣ್ಣು ಮಿಠಾಯಿ ಅಥವಾ ಸ್ವಲ್ಪ ಹೂವನ್ನಾದರೂ ತೆಗೆದುಕೊಂಡುಹೋಗು.

೯೦. ಈ ಐಹಿಕ ಜೀವನದಲ್ಲಿ ಅನಿವಾರ್ಯವಾದ ಕಷ್ಟ ನಷ್ಟ ಅನ್ಯಾಯ, ಕಾದಾಡುವ ಬಂಧುಗಳು, ತಪ್ಪು ಅಭಿಪ್ರಾಯ, ಮತ್ತು ಜಗಳ ಇವೇ ಮುಂತಾದುವನ್ನು ಚಿಂತಿಸುತ್ತಾ, ದುಃಖದಿಂದ ಖಿನ್ನನಾಗಬೇಡ. ಅದರಿಂದೇನೂ ಪ್ರಯೋಜನವಿಲ್ಲ. ನೀನು ಅವನ್ನು ಚಿಂತಿಸಿದಷ್ಟೂ ಇನ್ನೊಬ್ಬ ರೊಡನೆ ಅವನ್ನು ಕುರಿತು ವಿಮರ್ಶಿಸಿದಷ್ಟೂ ಅವು ಮತ್ತಷ್ಟು ಭೀಮಾ ಕಾರವನ್ನು ತಾಳುತ್ತವೆ; ಹತ್ತರಷ್ಟು ಹೆಚ್ಚಾಗುತ್ತವೆ. ನೀನು ಮನಃ ಶಾಂತಿಯನ್ನು ಸಂಪೂರ್ಣ ಕಳೆದುಕೊಳ್ಳುವೆ. ಜೀವನ ಅಸಹನೀಯ ವಾಗುವುದು. ಕಷ್ಟವನ್ನು ಸಹಿಸುವುದಕ್ಕೆ ಆದಷ್ಟು ಪ್ರಯತ್ನಪಡು. ಮಾತಿನಿಂದ ಮಾತು ಬೆಳೆಯುವುದು. ಯಾರಾದರೂ ನಿನಗೆ ಅಪ್ರಿಯ ವಾದ ಅನ್ಯಾಯವಾದ ಮಾತನ್ನಾಡಿದರೆ ನೀನು ಅದನ್ನು ನಿರ್ಲಕ್ಷಿಸಿ ಸುಮ್ಮ ನಿರುವುದೊಳ್ಳೆಯದು. ಮೂಕರಿಗೆ ಯಾವ ಶತ್ರುವೂ ಇಲ್ಲ. ಗುರು ಮಹಾರಾಜರು ಹೇಳುತ್ತಿದ್ದಂತೆ, “ತಾಳಿದವನು ಬಾಳುವನು ತಾಳದವನು ಅಳಿಯುವನು”. ಸವಿನುಡಿ, ಒಳ್ಳೆಯ ವರ್ತನೆ, ಸ್ಥೈರಣೆ, ಸೇವೆ ಮತ್ತು ಪ್ರೀತಿ ಇವೇ ಜೀವನದ ಎಲ್ಲಾ ಸಮಸ್ಯೆಯನ್ನು ಎದುರಿಸಿ ಪಾರಾಗಬಲ್ಲದು. ದುಷ್ಟ ಜಂತುಗಳೂ ಕೂಡ ನಾವು ದಯೆ ತೋರಿದರೆ ಆಜ್ಞಾಧಾರಕವಾಗಿರು ತ್ತವೆ. ನಿನ್ನನ್ನು ನೀನೇ ಪರೀಕ್ಷಿಸಿಕೊ. ಪುನಃ ಪುನಃ ಪರಾಜಯವನ್ನು ಹೊಂದಿದರೂ ಕೂಡ ನಿನ್ನ ತಪ್ಪನ್ನು ತಿದ್ದಿಕೊಳ್ಳುವೆನೆಂದು ದೃಢಸಂಕಲ್ಪ ಮಾಡು. ದೇವರ ಮುಂದೆ ನಿನ್ನ ಲೋಪ ದೋಷಗಳನ್ನೆಲ್ಲಾ ಇಡು. ಕಂಬನಿದುಂಬಿ ನಿನ್ನ ದೋಷಗಳನ್ನೆಲ್ಲಾ ಹೋಗಲಾಡಿಸುವಂತೆ ಮನಃ ಪೂರ್ವಕ ಬೇಡಿಕೊ. ಮತ್ತೊಬ್ಬರನ್ನು ತಿದ್ದಲು ಯತ್ನಿಸುವುದು ನಿಷ್ಫಲ ಮತ್ತು ಹುಚ್ಚುತನ. ನಮ್ಮನ್ನು ನಾವೇ ತಿದ್ದಿಕೊಳ್ಳಬೇಕು. ಯಾರ ಲ್ಲಿಯೂ ಕೆಟ್ಟ ಭಾವನೆಯನ್ನು ತಾಳಬೇಡ. ಯಾರು ಒಳ್ಳೆಯವರೋ ಅವ

ರಿಗೆ ಪ್ರಪಂಚವೆಲ್ಲಾ ಒಳ್ಳೆಯದು. ನೀನು ಇದಕ್ಕೆ ಅಸಮರ್ಥನಾದರೆ ಅದು ನಿನ್ನ ತಪ್ಪು. ನೀನು ಅದರ ಪರಿಣಾಮವಾಗಿ ದುಃಖಪಡಬೇಕು.

೯೧. ವಸ್ತು ಅಥವಾ ವ್ಯಕ್ತಿಯಮೇಲೆ ಇರುವ ಆಸಕ್ತಿ ಮತ್ತು ಮಮತಾಭಾವನೆಯೆ ಈ ಪ್ರಪಂಚದ ಬಂಧನಕ್ಕೆಲ್ಲಾ ಮೂಲಕಾರಣ. ಜ್ಞಾನಿ ಯಾರನ್ನೂ ಪ್ರತ್ಯೇಕವಾಗಿ ಪ್ರೀತಿಸುವುದಿಲ್ಲ. ಯಾರೂ ತನ್ನನ್ನು ಸ್ವತಃ ಪ್ರೀತಿಸುವುದಾಗಲಿ ತನ್ನಲ್ಲಿ ಮೋಹಗೊಳ್ಳುವುದಾಗಲಿ ಅವನಿಗೆ ಬೇಡ. ಅವನು ಮುಕ್ತಾತ್ಮ. ಮತ್ತಾರೂ ಈ ಶಾರೀರಕವಾದ ಮಮತೆಯ ಕಟ್ಟುಗಳಿಂದ ದಾಸರಾಗುವುದನ್ನು ಅವನು ಇಚ್ಛಿಸುವುದಿಲ್ಲ. ಜ್ಞಾನಿ ತನ್ನಾತ್ಮವನ್ನು, ದೇವರನ್ನು, ಎಲ್ಲರಲ್ಲಿಯೂ ನೋಡುತ್ತಾನೆ. ಅವನ ಪ್ರೇಮ ವಿಶ್ವವ್ಯಾಪಿಯಾದುದು. ಸರ್ವತ್ರ ಸಮದರ್ಶಿ ಅವನು. ಆತನ ಪ್ರೇಮದಲ್ಲಿ ಯಾವ ವಿಧದ ಶಾರೀರಕ ಅಥವಾ ವಿಷಯ ಸಂಬಂಧವೂ ಇಲ್ಲ. ಕಾಮದ ಛಾಯೆ ಕೂಡ ಇಲ್ಲ. ಶರೀರ ಸೌಂದರ್ಯಕ್ಕೆ ಎಂದಿಗೂ ಮರುಳಾಗನು. ಜ್ಞಾನಿಯೇ ನಿಜವಾದ ಪ್ರೇಮಿ. ದೇವರನ್ನು ಯಾರು ಪ್ರೀತಿಸುವನೋ ಆತನೇ ಜ್ಞಾನಿ.

೯೨. ತ್ಯಾಗ, ಭಗವತ್ಪ್ರೇಮ ಮತ್ತು ಪವಿತ್ರತೆ ಇವೇ ಭಗವತ್ಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನಗಳು. ದೇಹಕ್ಕೆ ಕೈಕಾಲುಗಳು ಹೇಗೋ ಹಾಗೆ ಅವು ಒಂದಕ್ಕೊಂದು ಸಂಬಂಧವನ್ನು ಹೊಂದಿವೆ. ಅವುಗಳಲ್ಲಿ ಒಂದು ಇದ್ದರೆ ಉಳಿದೆರಡೂ ಇದ್ದೇ ಇರುತ್ತವೆ. ಭಗವಂತನ ಸ್ವಭಾವವೇ ಪ್ರೇಮ ಮತ್ತು ಪವಿತ್ರತೆ. ಈ ಪ್ರಾಪಂಚಿಕ ವಸ್ತುಗಳಲ್ಲಿ ತಿರಸ್ಕಾರ, ಎಲ್ಲಾ ಜೀವಿಗಳಲ್ಲಿಯೂ ಪ್ರೇಮ ಮತ್ತು ಅವೆಲ್ಲಾ ತಮ್ಮದೇ ಎಂಬ ಮನೋಭಾವನೆ ಇವುಗಳಿಲ್ಲದಿದ್ದರೆ ಆತನನ್ನು ಪಡೆಯಲಾಗುವುದಿಲ್ಲ. ಕಾಯಾ ವಾಚಾ ಮನಸಾ, ಪರಿಶುದ್ಧತೆ ಇರದಿದ್ದರೆ ಆತನನ್ನು ಪಡೆಯಲಾರೆ. ಯಾರು ದೃಢವಾಗಿ ಸತತ ಪರಿಶ್ರಮದಿಂದ ಪವಿತ್ರ ಭಾವನೆಗಳ ನಿರಂತರ ಪ್ರವಾಹ ಮನಸ್ಸಿನಲ್ಲಿ ಹರಿಯುವಂತೆ ಮಾಡಲು ಪ್ರಯತ್ನಿಸುವರೋ ಅಂತಹವರಿಂದ ಎಲ್ಲಾ ಕೆಟ್ಟ ಆಲೋಚನೆಗಳೂ ಪ್ರವೃತ್ತಿಗಳೂ ಓಡಿಹೋಗುವುವು. ಅವರ ನಡತೆ ಹೇಗೆ ವ್ಯತ್ಯಾಸ ಹೊಂದುವುದೆಂದರೆ, ಕೆಟ್ಟ ಆಲೋಚನೆ ಮತ್ತು ಕೆಲಸ, ದ್ವೇಷ, ಅಸೂಯೆಯ ಭಾವನೆ ಅವರಿಗೆ ಅಸಾಧ್ಯ. ಅಂತಹ ಮನುಷ್ಯನಲ್ಲಿ ಕೆಟ್ಟವರನ್ನು ಒಳ್ಳೆಯವರನ್ನಾಗಿ ಮಾರ್ಪಡಿಸುವ ಶಕ್ತಿ ಇದೆ. ಅತ್ಯಂತ ಪಾಪಿಷ್ಠನೂ ಕೂಡ ಆತನ ಸ್ಪರ್ಶ

ದಿಂದ ಧರ್ಮಿಷ್ಠನಾಗಿ ಸತ್ಯವಂತನಾಗುತ್ತಾನೆ. ನಾಸ್ತಿಕನೂ ಕೂಡ, ದೇವರ ಭಕ್ತನಾಗಿ ಮಾರ್ಪಡುತ್ತಾನೆ. ಯಾರು ಪ್ರಪಂಚದಲ್ಲಿ ಅತಿ ದುಃಖಪೀಡಿತ ರಾಗಿರುವರೋ ಅವರೂ ಶಾಶ್ವತ ಶಾಂತಿಯನ್ನು ಪಡೆಯುತ್ತಾರೆ.

೯೩. ಪಾಪ ಮತ್ತು ವಿಷವನ್ನು ಹೇಗೆ ರಕ್ತದಲ್ಲಿ ಅಡಗಿಸಲಾರೆವೋ ಹಾಗೆಯೇ ಪ್ರೇಮ ಮತ್ತು ಪರಿಶುದ್ಧತೆಗಳನ್ನು ಬಚ್ಚಿಡಲಾರೆವು. ಬೆಂಕಿ ಯನ್ನು ಬಟ್ಟೆಯಿಂದ ಮುಚ್ಚಲು ಸಾಧ್ಯವೆ? ಯಾರಿಗೆ ತನ್ನದೆಂಬುವು ದಿಲ್ಲವೊ ಮಿತ್ರ ಶತೃವೆಂಬ ತಾರತಮ್ಯ ಭಾವವಿಲ್ಲವೋ, ಅವನು ಜನರ ದೃಷ್ಟಿಯಿಂದ ಅವಿತುಕೊಂಡರೂ ಪ್ರಪಂಚವೆಲ್ಲವೂ ಆತನ ಜ್ಞಾನಜ್ಯೋತಿ ಯಿಂದ ಪ್ರಕಾಶಿತವಾಗಿ ಆತನ ದೈವಿಕ ಪ್ರೇಮದ ಆಕರ್ಷಣೆಗೆ ಒಳಗಾಗು ವುದು. ಯಾರು ಅಂತಹ ಬ್ರಹ್ಮಜ್ಞಾನಿಗೆ ಶರಣಾಗಿರುವರೋ ಯಾರು ಆತನ ಕೃಪೆಯನ್ನು ಹೊಂದುವರೋ ಅವರೇ ಧನ್ಯರು.

೯೪. ಯೌವನ ಆಧ್ಯಾತ್ಮಿಕಸಾಧನೆಗೆ ಅತ್ಯುತ್ತಮ ಕಾಲ. ಆ ಕಾಲದಲ್ಲಿ ಸಾಹಸ ಪೂರ್ಣವಾದ ಪ್ರಯತ್ನದಿಂದ ಬೇಕಾದಷ್ಟು ಆಧ್ಯಾತ್ಮಿಕ ಶಕ್ತಿಯನ್ನು ಗಳಿಸಿದರೆ ಅಂತಹವರು ನಂತರ ಜೀವಮಾನವನ್ನೆಲ್ಲಾ ಪುನಃ ಜಾರುವ ಭಯವಿಲ್ಲದೆ ನಿರ್ಭೀತಿಯಿಂದ ಶಾಂತಿ ಸಂತೋಷದಲ್ಲಿ ಬಾಳಬಹುದು. ಎಷ್ಟೇ ಕಷ್ಟ ಅಪಾಯ ಸಂಭವಿಸಿದರೂ, ಆತ ಸ್ಥಿರ ವಾಗಿ ಇರುವನು. ನಿನ್ನ ಶೀಲವನ್ನು ಯೌವನದಲ್ಲಿ ತಿದ್ದದೆ ಇದ್ದರೆ ಅನಂತರ ಅಸಾಧ್ಯ. ಒಂದು ಕ್ಷಣವನ್ನು ಕೂಡ ಸೋಮಾರಿತನದಿಂದಾಗಲಿ ಅಥವಾ ನಿಷ್ಪ್ರಯೋಜಕವಾದ ಕ್ರಿಯೆಯಿಂದಾಗಲಿ ವ್ಯರ್ಥಮಾಡಬೇಡ. "ನನ್ನ ಆರೋಗ್ಯ ಸರಿಯಿಲ್ಲ!" "ನನಗೆ ಕಾಲವೇ ಇಲ್ಲ" ಈ ಬಗೆಯ ನೆವ ಕೇವಲ ಅಸಂಬದ್ಧಮಾತುಗಳು. ಊಟ ವಿನೋದಗಳು, ನಿದ್ರೆ ಮತ್ತು ಇತರ ನಿತ್ಯ ಕೆಲಸಗಳನ್ನು ಒಂದು ನಿಯಮಕ್ಕೆ ತಂದರೆ ಈ ಶರೀರ ಮತ್ತು ಮನಸ್ಸು ದೃಢವಾಗಿ ಸಂತೋಷದಿಂದ ಇರುವುದು. ಅದರಿಂದ ಹೆಚ್ಚು ಕೆಲಸವನ್ನೂ ಮಾಡಬಹುದು. ಕೆಲಸದ ರೀತಿಯೂ ಉತ್ತಮವಾಗುವುದು. ಆಗ ನಮಗೆ ಅಧ್ಯಾತ್ಮಿಕ ಸಾಧನೆಗಾಗಲಿ, ಮತ್ತಾವ ಕೆಲಸಕ್ಕಾಗಲಿ ಸಾಕಷ್ಟು ಸಮಯ ದೊರಕುವುದು.

೯೫. ಯಾರು ತಾರತಮ್ಯವಿಲ್ಲದೆ ತಮಗೇನು ಸಿಕ್ಕುವುದೋ ಅದನ್ನು ಯಾವ ಕಾಲದಲ್ಲಾಗಲೀ ಸಿಕ್ಕಾಪಟ್ಟೆ ತಿನ್ನುತ್ತಿರುವರೊ ಮತ್ತು ಅಕ್ರಮ ಜೀವನವನ್ನು ನಡೆಸುತ್ತಿರುವರೋ, ಕಾಮ ಮುಂತಾದ ಮನೋವಿಕಾರ

ಗಳಲ್ಲಿ ಮುಳುಗಿರುವರೋ ಅವರಿಗೆ ದೇಹವಾಗಲೀ ಮನಸ್ಸಾಗಲೀ ಉಲ್ಲಾಸ ವಾಗಿರುವುದಿಲ್ಲ. ಅಷ್ಟೊಂದು ಹೊರೆಯನ್ನು ದೇಹ ಮತ್ತು ಮನಸ್ಸಿನ ಮೇಲೆ ನಿಷ್ಕಾರಣವಾಗಿ ಅಜಾಗರೂಕತೆಯಿಂದ ಹೊರಿಸಿದರೆ ದೇಹ ಕಡೆಗೆ ಶಿಥಿಲ ವಾಗುವುದು. ಕೆಲಸ ಮಾಡುವುದಕ್ಕೆ ಅಸಾಧ್ಯವಾಗುವುದು. ಎಂಟು ಹತ್ತು ಗಂಟೆ ನಿದ್ರೆ ಕೂಡ ಇದಕ್ಕೆ ಸಾಲುವುದಿಲ್ಲ. ಇನ್ನುಳಿದ ಶಕ್ತಿಯೂ ಕೂಡ ಕಾಡುಹರಟೆಯಿಂದ ವ್ಯರ್ಥವಾಗಿ ಹೋಗಬಹುದು. ಇದರ ಪರಿ ಣಾಮವಾಗಿ ಜಪ ಧ್ಯಾನಕ್ಕೆ ಅತ್ಯಲ್ಪಕಾಲ ಅಥವಾ ಏನೂ ಉಳಿಯುವುದೇ ಇಲ್ಲ. ಅದನ್ನು ಮಾಡಲು ಇಚ್ಛೆಯೂ ಇರುವುದಿಲ್ಲ. ಅಂತಹವರು ಸಾಧ ನೆಗೆ ಕುಳಿತೊಡನೆಯೆ ಅವರಿಗೆ ಆಕಳಿಕೆ ಬಂದು ತೂಕಡಿಸತೊಡಗುತ್ತಾರೆ. ಹೀಗೆಯೇ ಆಗುತ್ತಿದ್ದರೆ ಯಾವ ಮಹತ್ವದ ಕೆಲಸ ತಾನೆ ಸಾಧ್ಯ? ಧರ್ಮ ಮತ್ತು ಪರೋಪಕಾರ ಮಾಡುವುದು ಹಾಗಿರಲಿ, ಅಂತಹವನು ಈ ಪ್ರಪಂಚದಲ್ಲಿ ವ್ಯಾವಹಾರಿಕ ಮನುಷ್ಯನಾಗಿರಲು ಕೂಡ ಅಸಾಧ್ಯ. ಪ್ರಶಸ್ತವಾದ ಈ ಮಾನವ ಜನ್ಮ ಈ ರೀತಿ ವ್ಯರ್ಥವಾಗುವುದು ಎಷ್ಟು ಶೋಚನೀಯ! ದೈವತ್ವವನ್ನು ಹೊಂದುವ ಭರವಸೆ ಇರುವ ಈ ಮಾನವ ಜೀವನದಲ್ಲೇ ಮಾನವ, ಸದ್ಗುಣವನ್ನು ಹೊಂದುವುದಕ್ಕಾಗದೆ ಹೋದರೆ ಅವನಿಗೂ ಮೃಗಕ್ಕೂ ಏನು ವ್ಯತ್ಯಾಸ?

೯೬. ಆಧ್ಯಾತ್ಮಿಕ ಸಾಧನೆಗೆ ಇನ್ನೂ ಪ್ರಾರಂಭಿಸಿರುವವನು ಯಾವಾ ಗಲೂ ಜಾಗರೂಕತೆಯಿಂದ ಎಚ್ಚೆತ್ತಿರಬೇಕು. ಇನ್ನೂ ಅಪಕ್ವ ಮನಸ್ಸು ಜನ ಮತ್ತು ವಸ್ತುಗಳ ವ್ಯಾಮೋಹಕ್ಕೆ ಅರಿಯದೆ ಸಿಲುಕಿ ಆತನನ್ನು ಪುನಃ ದಾಸ್ಯಕ್ಕೆ ಒಯ್ಯುತ್ತದೆ. ಪ್ರಾರಂಭದಲ್ಲಿ ಮಾತ್ರ ಈ ಎಚ್ಚರಿಕೆಯನ್ನು ಗಮ ನಿಸಬೇಕೆಂದು ಅರ್ಥವಲ್ಲ. ಹತ್ತು ಹನ್ನೆರಡು ವರುಷಗಳ ಜಪ ಧ್ಯಾನ ಸಾಧನೆ ಮಾಡಿದ್ದರೂ ಕೂಡ ಆ ಸಾಧಕ ಆಧ್ಯಾತ್ಮಿಕತೆಯ ಮೆಟ್ಟಿಲ್ಟಕ್ಕೆ ಹತ್ತದೇ ಇರ ಬಹುದು. ಈ ಆರಂಭ ಸ್ಥಿತಿಯನ್ನು ಅನೇಕ ವರುಷಗಳು ಅಥವಾ ಜೀವ ಮಾನವೆಲ್ಲಾ ಏನಾದರೂ ಸ್ವಲ್ಪವಾದರೂ ಸ್ಪಷ್ಟವಾಗಿ ಸಿದ್ಧಿಸುವವರೆಗೆ ಮುಂದುವರಿಸಬೇಕು. ಇದು ಆಯಾಯ ವ್ಯಕ್ತಿಗಳ ಪರಿಶ್ರಮ ಮತ್ತು ಆಕಾಂಕ್ಷೆಗಳ ತೀವ್ರತೆಯ ಮೇಲೆ ವ್ಯತ್ಯಾಸವಾಗುವುದು. ಸತ್ಯದ ಈ ಅನು ಭೂತಿಯೇ ಧರ್ಮ. ಹಿಂದೆ ಮಾಡಿದ ಯಾವ ಧಾರ್ಮಿಕ ಕರ್ಮವಾಗಲಿ, ನೇಮವಾಗಲಿ, ಉಗ್ರ ಸಂಯಮವಾಗಲಿ, ಕಟ್ಟುಪಾಡಾಗಲಿ ಎಲ್ಲವೂ ಭಗ ವಂತನ ರಾಜ್ಯವನ್ನು ಪ್ರವೇಶಿಸಲು ಕೇವಲ ಸಿದ್ಧತೆ, ಸಹಾಯ ಮಾತ್ರ.

೯೭. ಸಾಧನೆ, ಭಜನೆ, ಜಪ, ಧ್ಯಾನಾದಿಗಳಿಗೆ ತೊಡಗಿರುವವ ರಿಗೆ ಆರಂಭದಲ್ಲಿ ಅವರು ತಮ್ಮ ಇಷ್ಟದೇವತೆಯಮೇಲೆ ಮನಸ್ಸನ್ನು ಕೇಂದ್ರೀಕರಿಸಲು ಯತ್ನಿಸಿದಷ್ಟೂ ಅಷ್ಟೇ ಉಗ್ರವಾಗಿ ಮನಸ್ಸು ದಂಗೆ ಎದ್ದು ನಿಷ್ಪ್ರಯೋಜಕ ವಸ್ತುಗಳ ಕಡೆಗೆ ಓಡುವುದು ನಮಗೆ ಆಶ್ಚರ್ಯ ವಾಗುತ್ತದೆ. "ನನಗೆ ಈ ತೊಂದರೆಗಳು ಮೊದಲೇಕೆ ಇರಲಿಲ್ಲ? ನನ್ನ ಕೆಲ ಸಗಳನ್ನು ಸ್ಥಿರಮನಸ್ಸಿನಿಂದ ಮಾಡುತ್ತಿದ್ದೆ. ನನಗೆ ಏಕೆ ಈಗ ಹಾಗೆ ಮಾಡಲು ಆಗುತ್ತಿಲ್ಲ?" ಇದಕ್ಕೆ ಕಾರಣವೇನೆಂದರೆ ಮನಸ್ಸು ಸ್ವಾಭಾವಿಕ ವಾಗಿ ವಿಷಯ ವಸ್ತುಗಳ ಕಡೆ ಮೋಹಗೊಳ್ಳುತ್ತಿತ್ತು. ಬಾಹ್ಯ ವಸ್ತು ಗಳನ್ನು ಹುಡುಕುತ್ತಾ ಇವುಗಳಲ್ಲಿ ಮುಳಗಿತ್ತು. ಆದ್ದರಿಂದ ಅಲ್ಲಿ ಮನೋ ಯುದ್ಧಕ್ಕೆ ಕಾರಣವೇ ಇರುತ್ತಿರಲಿಲ್ಲ. ಯಾವಾಗ ಮನಸ್ಸನ್ನು ಹಿಡಿತ ದಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತೇವೆಯೋ, ಅಶಾಶ್ವತ ವಸ್ತುಗಳಿಂದ ಎಳೆದು ಬಾಹ್ಯ ವಸ್ತುಗಳಿಂದ ಬೇರ್ಪಡಿಸಿ, ಸತ್ಯ ಅಸತ್ಯ ವಸ್ತುವಿವೇಕ ದಿಂದ ನಮ್ಮೊಳಗೇ ನೋಡಲೆತ್ನಿಸುವೆವೋ ಆಗ ಅದು ದಂಗೆ ಏಳುವುದು. ನದಿಯ ಒತ್ತಡ ಅದಕ್ಕೆ ಕಟ್ಟೆ ಹಾಕಲೆತ್ನಿಸಿದಾಗ ನೂರರಷ್ಟು ಹೆಚ್ಚುತ್ತದೆ. ಆಗ ಆ ಮಹತ್ತರ ಒತ್ತಡವನ್ನು ಉಪಯೋಗಕರವಾದ ಮತ್ತು ಒಳ್ಳೆಯ ಉದ್ದೇಶಕ್ಕೆ ತಿರುಗಿಸಿದರೆ ಒಂದು ಪ್ರಬಲ, ದೊಡ್ಡ ಶಕ್ತಿ ನಮ್ಮ ವಶವಾಗಿ ಅದಕ್ಕೆ ಸಾವಿರದಷ್ಟು ಫಲ ಸಿಗುತ್ತದೆ.

೯೮. ಯಾವ ವಿಷಯದಲ್ಲೇ ಆಗಲಿ ಸತತ ಪರಿಶ್ರಮ ಮತ್ತು ಕಾರ್ಯಾಸಕ್ತಿಯಿಂದ ಜಯ ಲಭಿಸುತ್ತದೆ. ನೀನು ಪರಾಜಯ ಹೊಂದಿ ದರೂ ಮರಳಿ ಮರಳಿ ಯತ್ನಿಸು. ನೀನು ದಕ್ಷತೆಯಿಂದ ಪ್ರಯತ್ನಿಸಿದ ಮೇಲೂ ನಿನಗೆ ಯಶಸ್ಸು ಸಿಗದಿದ್ದರೆ ನೀನು ಸಾಕಷ್ಟು ಪ್ರಯತ್ನ ಪಟ್ಟಿಲ್ಲ ವೆಂದು ತಿಳಿ. ನೀನು ನಿಜವಾಗಿ ಪುನಃ ಪುನಃ ಪ್ರಯತ್ನಪಟ್ಟು ಎಂದಿಗೂ ಬಿಡದಿದ್ದರೆ ಪ್ರತಿಯೊಂದನ್ನೂ ಸರಳವಾಗಿಯೂ, ಸುಲಭವಾಗಿಯೂ ಸಾಧಿ ಸಲು ಸಾಧ್ಯ. ಕ್ರಮೇಣ ಇದು ಅಭ್ಯಾಸವಾಗಿ ಕಡೆಗೆ ನಿನ್ನ ಸ್ವಭಾವದ ಒಂದು ಭಾಗವಾಗುತ್ತದೆ.

೯೯. ದೇವರು ನಿಜವಾಗಿಯೂ ನಮಗೆ ಬೇಕಾದುವೆಲ್ಲವನ್ನೂ ಕೊಟ್ಟಿರುವನು. ಕೊರತೆ ಇರುವುದು ಮನಸ್ಸಿನಲ್ಲಿ ಮಾತ್ರ. ಸುಖ ದುಃಖಗಳು ಕೇವಲ ನಮ್ಮ ಮನಸ್ಸಿನಲ್ಲಿವೆ. ಬಾಹ್ಯ ಜಗತ್ತಿನಲ್ಲಿಲ್ಲ. "ಭಾವವಿದ್ದಂತೆ ಲಾಭ"

೧೦೦. ಸ್ವಾತಂತ್ರ್ಯವೇ ಪರಮಾನಂದ. ಪರಾಧೀನತೆಯೇ ದಾರುಣ ದುಃಖ. ಆದರೆ ದೇವರಲ್ಲಿ ಆಶ್ರಯ ಪಡೆದವನು ನಿಜವಾದ ಸ್ವತಂತ್ರಿ. ದೇವರ ಸೇವಕ, ಸೃಷ್ಟಿಯ ಒಡೆಯ. ಅರಿಷಡ್ವರ್ಗಗಳನ್ನು ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವುಗಳ ದಾಸ್ಯವನ್ನು ತ್ಯಜಿಸಿದ ಹೊರತು ಯಾರೊಬ್ಬನೂ ದೇವರ ಸೇವಕನಾಗಲಾರ.

೧೦೧. ಒಬ್ಬ ಮನುಷ್ಯನ ಬಂಧನ ಮತ್ತು ಮೋಕ್ಷ ಎರಡೂ ಆತನ ಕೈಯಲ್ಲೇ ಇದೆ. ಆದರೂ ಇದು ತಿಳಿದಿದ್ದರೂ, ಇದರಲ್ಲಿ ಎಚ್ಚರದಿಂದಿರಬೇಕೆಂದು ಗೊತ್ತಿದ್ದರೂ ನಾವು ಕೇವಲ ನಮ್ಮ ಅವಿವೇಕದಿಂದ ಅಥವಾ ಭ್ರಮೆಯಿಂದ ನಾವೇ ನಿರ್ಮಿಸಿಕೊಂಡ ದಾಸ್ಯದಲ್ಲಿ ಬಿದ್ದು ದಾರುಣ ವ್ಯಥೆಗೀಡಾಗುತ್ತೇವೆ. ಈ ಪ್ರಪಂಚಕ್ಕೆ ಬಂಧಿಸಲ್ಪಟ್ಟ ಆತ್ಮನ ಅವಸ್ಥೆ ಹೇಗಿದೆ ಎಂದರೆ, ಒಬ್ಬ ಮನುಷ್ಯ ಒಂದು ಕಂಬದ ಸುತ್ತ ತನ್ನ ಕೈಗಳನ್ನು ಸುತ್ತಿಕೊಂಡು ತನ್ನ ಜೋಡಿಸಿದ ಎರಡು ಕೈಗಳಲ್ಲೂ ಹಿಡಿದಿರುವ ಅರಳನ್ನು ತಿನ್ನಲು ವ್ಯರ್ಥವಾಗಿ ಪ್ರಯತ್ನಿಸಿದಂತಾಗುತ್ತದೆ. ಅವನು ಅದನ್ನು ತಿನ್ನಲೂ ಆರ. ಅದು ಹಾರಿ ಹೋಗಬಹುದೆಂದು ತನ್ನ ಕೈಗಳನ್ನು ಸಡಿಲಿಸಲೂ ಆರ.

೧೦೨. ತಂತ್ರ ಶಾಸ್ತ್ರ ಹೀಗೆ ಹೇಳುವುದು: "ಯಾರು ಗುರುವನ್ನು ಕೇವಲ ನರಮನುಷ್ಯನೆಂದೂ, ತನ್ನ ಇಷ್ಟದೈವದ ಮಂತ್ರವನ್ನು ಕೇವಲ ಬರಿಯ ಪದವೆಂದೂ ಅಥವಾ ದೇವ ದೇವತೆಗಳ ವಿಗ್ರಹವನ್ನು ಬರೀ ಮಣ್ಣು ಅಥವಾ ಕಲ್ಲೆಂದೂ ನೋಡುವನೋ ಅಂಥಹವನು ನರಕಕ್ಕೆ ಹೋಗುತ್ತಾನೆ." ಇದರ ಅರ್ಥವೇನೆಂದರೆ ಶ್ರದ್ಧಾಭಕ್ತಿ ಇಲ್ಲದ ಮನುಷ್ಯರು ಶಾಸ್ತ್ರಕ್ಕೆ ವಿರೋಧವಾದ ಕುಟಿಲವಾದ ಪ್ರಾಪಂಚಿಕ ಅಭಿಪ್ರಾಯಗಳಿಗೆ ಮನಸ್ಸುಕೊಡುತ್ತಾರೆ. ಅಂತಹವನು ತನ್ನ ಆಧ್ಯಾತ್ಮಿಕ ಪ್ರಗತಿಗೆ ಆತಂಕವನ್ನು ತಂದುಕೊಳ್ಳುವುದಲ್ಲದೆ ತನ್ನ ನಾಶಕ್ಕೆ ತಾನೇ ಕಾರಣನಾಗುವನು.

೧೦೩. ಯಾರು ದೇವರನ್ನೇ ಸ್ಮರಣೆಮಾಡುತ್ತಾ, ಆತನ ವಿಷಯವನ್ನೇ ಕುರಿತು ಆಲೋಚನೆಮಾಡುತ್ತಾ ತನ್ನ ಕೆಲಸಕಾರ್ಯಗಳ ಮಧ್ಯದಲ್ಲಿಯೂ ನಾಮಪುನಶ್ಚರಣೆಯನ್ನು ಮಾಡುತ್ತಾ ಕೇವಲ ಭಗವಂತನೇ ತನ್ನ ಆಧಾರ ಮತ್ತು ಆಶ್ರಯವೆಂದು ತಿಳಿಯುತ್ತಾರೋ ಅಂತಹವರು ತಮಗೆ ಯಾವ ಅಪಾಯ, ವಿಪತ್ತು ಕಾಡಿದರೂ, ಭಗವಂತನನ್ನೆಂದೂ

ಮರೆಯುವುದಿಲ್ಲ. ಕಡೆಯ ಗಳಿಗೆಯಲ್ಲಿ ಕೂಡ ದೇವರ ಯೋಚನೆ ಅವರನ್ನು ಸಾವಿನ ವೇದನೆಯನ್ನು ಮರೆಯುವಂತೆ ಮಾಡುತ್ತದೆ; ಐಶ್ವರ್ಯ ಮತ್ತು ಬಂಧು ಮಿತ್ರರ ಮಮತೆಯಿಂದ ಪಾರುಮಾಡುವುದು. ಅವರ ಮನಸ್ಸು ಸಂಪೂರ್ಣವಾಗಿ ಭಗವಂತನಲ್ಲೇ ನೆಟ್ಟು ಅವರು ಆತನ ಸಾಮೀಪ್ಯದಲ್ಲಿ ಆನಂದಿಸುತ್ತಾರೆ. ಅಂತಹ ಸಂಪೂರ್ಣತೆಯು ಕೇವಲ ಯಾರು ಪುನಃ ಪುನಃ ಈ ಪ್ರಪಂಚದಲ್ಲಿ ಹುಟ್ಟಿ ಸಾಯಬೇಕಾಗಿಲ್ಲವೊ ಅಂತಹವರಿಗೆ ಮಾತ್ರ ಪ್ರಾಪ್ತವಾಗುತ್ತದೆ. ಆತನ ಸಾನ್ನಿಧ್ಯಕ್ಕಾಗಿ ಬಯಸಿ ಪುನಃ ಪುನಃ ಅವನನ್ನೇ ಸ್ಮರಿಸುತ್ತಿದ್ದರೆ ಅದು ಅವರ ಸ್ವಭಾವದ ಒಂದು ಭಾಗವಾಗಿ ಮಾರ್ಪಡುತ್ತದೆ.

೧೦೪. ನಾವು ನಾಮಿ ಎರಡೂ ಒಂದೆ. ಈ ಭಾವನೆಯನ್ನು ಮಾನಸ್ಸಿನಲ್ಲಿ ದೃಢಪಡಿಸಿದಷ್ಟೂ ಅವನ ಆವಿರ್ಭಾವವನ್ನು, ಆತನ ಸಾನ್ನಿಧ್ಯ ವನ್ನು, ನಿನ್ನ ಹೃದಯಾಂತರಾಳದಲ್ಲಿ ಹೆಚ್ಚು ಹೆಚ್ಚು ಅನುಭವಿಸುವೆ.

೧೦೫. ಈ ಪ್ರಪಂಚದಲ್ಲಿ ಯಾರೂ ತನ್ನವರಲ್ಲ. ತಾನು ಕೂಡ ತನಗೆ ಸೇರಿಲ್ಲ. ಈ ನಮ್ಮ ಇಹಲೋಕದ ಬದುಕು ಎಷ್ಟು ಕ್ಷಣ ಭಂಗುರ!

೧೦೬. ಯಾರು ತನಗೆ ತಾನೇ ಸ್ನೇಹಿತನಾಗಿರುವನೋ ಅವನು ವಿಶ್ವದ ಗೆಳೆಯ, ವಿಶ್ವದ ಜನರೆಲ್ಲರೂ ಆತನ ಗೆಳೆಯರು. ಶ್ರೀ ಕೃಷ್ಣನು ಗೀತೆಯಲ್ಲಿ ಹೇಳುವಂತೆ, "ಆತ್ಮನಿಗೆ ಆತ್ಮನೆ ಬಂಧು. ಆತ್ಮನಿಗೆ ಆತ್ಮನೇ ರಿಪು."

ಶುದ್ಧವಾದ ಮನಸ್ಸು ಮೋಕ್ಷಕ್ಕೆ ಕಾರಣ. ಅಶುದ್ಧ ಮನಸ್ಸು ಬಂಧನಕ್ಕೆ ಕಾರಣ.

೧೦೭. ನಿರಂತರ ಬದಲಾವಣೆ ಹೊಂದುತ್ತಿರುವ ಈ ಕ್ಷಣಿಕ ಪ್ರಪಂಚದಲ್ಲಿ ಐಕ್ಯತೆ ವಿಯೋಗ, ಲಾಭ ನಷ್ಟ, ಸುಖ ದುಃಖ, ಅದೃಷ್ಟ ದುರದೃಷ್ಟ, ಭೋಗ ಮತ್ತು ರೋಗ, ಐಶ್ವರ್ಯ ಮತ್ತು, ಮನಸ್ತಾಪ ಏಕ ಕಾಲದಲ್ಲಿರುತ್ತವೆ. ಪ್ರತಿಯೊಂದೂ ಮತ್ತೊಂದರ ನೆರಳಿನಂತೆ ಹಿಂಬಾಲಿ ಸುತ್ತದೆ. ಇದನ್ನು ತಿಳಿದು ಅನುಭವಿಸಿಯೂ ಏಕೆ ಮನುಷ್ಯರು ಮೋಹ ಜಾಲದಲ್ಲಿ ಸಿಲುಕಿ ಈ ಪ್ರಪಂಚದಲ್ಲಿ ಇನ್ನೂ ವ್ಯಥೆಪಡುತ್ತಿದ್ದಾರೆ? ವಿಷಯ ಸುಖ ಭೋಗದಿಂದ ದೊರಕಿದ ಆನಂದ, ಮನುಷ್ಯನನ್ನು ಹಾಳು ಮಾಡು ವುದು. ತೋರಿಕೆಯ ಸುಖದ ಒಂದು ಬಿಂದು, ಒಂದು ಲಕ್ಷಬಾರಿ ಹಿಂದೆ

ಅನುಭವಿಸಿದ ದಾರುಣ ಯಾತನೆಯನ್ನೂ ಮರೆಯುವಂತೆ ಮಾಡುವುದು.

೧೦೮. ತಾನು ಮಾಡಿದ ಕಾರ್ಯಗಳು ಅಂತ್ಯದಲ್ಲಿ ಯಾವ ಪರಿಣಾಮವನ್ನುಂಟುಮಾಡುತ್ತವೆಂಬುದನ್ನು ಯಾವಾಗಲೂ ಯೋಚಿಸುತ್ತಿದ್ದರೆ ಈ ದುಃಖಪಾಶದಿಂದ ಬಿಡುಗಡೆ ಹೊಂದಬಹುದು. ಪದೇ ಪದೇ ಅನುಭವಿಸಿದರೂ ಅದರಿಂದ ಬುದ್ಧಿಗಲಿಯದವನು ಹೇಗೆ ತಾನೆ ದುಃಖದಿಂದ ಪಾರಾಗಬಲ್ಲ! ಯಾರು ನಿದ್ದೆಯನ್ನು ನಟಿಸುತ್ತಿರುವರೋ ಅವರನ್ನು ಯಾರು ಎಬ್ಬಿಸಬಲ್ಲರು? ಪುನಃ ಪುನಃ ಜನ್ಮವೆತ್ತಿ ಅಂತ್ಯವಿಲ್ಲದ ವ್ಯಥೆಯಿಂದ ಪಾರಾಗುವ ಮಾರ್ಗವನ್ನು ಹುಡುಕುವುದೇ ಮಾನವ ಜನ್ಮದ ಗುರಿ.

೧೦೯. ವಿಧಿ ಅಥವಾ ಅದೃಷ್ಟವನ್ನೇ ಕಾಯುತ್ತಾ ಸೋಮಾರಿಯಾಗಿ ಕುಳಿತುಕೊಂಡರೆ ಯಾವ ಕೆಲಸವೂ ಆಗುವುದಿಲ್ಲ. ಯಾವುದನ್ನೂ ಯಶಸ್ವಿಯಾಗಿ ನೆರವೇರಿಸಲು ಸಾಧ್ಯವಿಲ್ಲ. ಅದೂ ಅಲ್ಲದೆ ಇಂತಹ ಮನೋಭಾವನೆ ಮನುಷ್ಯನನ್ನು ಹೇಡಿಯನ್ನಾಗಿ ಮಾಡುವುದಲ್ಲದೆ ತಾಮಸ ಪ್ರವೃತ್ತಿಯ ದಾಸನನ್ನಾಗಿ ಮಾಡಿ ಅವನನ್ನು ಹಾಳುಮಾಡುವುದು. ಜನರು ಕೇವಲ ತಮ್ಮ ನ್ಯೂನತೆಯಿಂದ ಅನೇಕ ತಪ್ಪುಗಳನ್ನು ಮಾಡುತ್ತಾರೆ. ಆ ದೋಷವನ್ನೆಲ್ಲಾ ವಿಧಿಯ ಮೇಲೆ, ಅದೃಷ್ಟದ ಮೇಲೆ ಅಥವಾ ಗ್ರಹ ನಕ್ಷತ್ರದ ಮೇಲೆ ಆರೋಪಿಸುತ್ತಾರೆ. ಒಬ್ಬನು ಅಜಾಗರೂಕತೆಯಿಂದ ಕಾಲು ಜಾರಿ ಬಿದ್ದು ಅದಕ್ಕಾಗಿ ನೆಲವನ್ನು ದೂರಿದನಂತೆ. ಎಲ್ಲಾ ಮಹತ್ಕಾರ್ಯಗಳೂ ಸಾಮಾನ್ಯವಾಗಿ ಕೇವಲ ನಮ್ಮ ಪರಿಶ್ರಮದ ಮೇಲೆ ಅವಲಂಬಿಸಿದೆ. ನಮ್ಮ ಜೀವನದ ಗುರಿಯ ಸಾಕ್ಷಾತ್ಕಾರಕ್ಕೆ ವಿಘ್ನ ತರುವುದು ವಿಧಿ ಎಂಬುದು ಇದ್ದರೆ, ಅದನ್ನು ನಮ್ಮ ಸ್ವಂತ ಪರಿಶ್ರಮದಿಂದ ಪ್ರತಿಯೊಬ್ಬರಲ್ಲಿಯೂ ಹುದುಗಿರುವ ಅಂತರ್ ಶಕ್ತಿಯನ್ನು ಜಾಗ್ರತಗೊಳಿಸುವುದರಿಂದ, ಜಯಿಸಬಹುದು. ಇದಾದ ಮೇಲೆ ಮಾತ್ರ ನೀನೊಬ್ಬ ಮನುಷ್ಯನಾಗುವೆ. ನೀನು ಇದನ್ನು ಮಾಡಿದರೆ ವಿಧಿಯೂ ಕೂಡ ನಿನಗೆ ಅನುಕೂಲವಾಗುತ್ತದೆಂಬುದನ್ನು ನೀನೇ ನೋಡುವೆ. ವಿಧಿಯೇ ಸರ್ವ ಶಕ್ತಿಯುಳ್ಳದ್ದಾಗಿದ್ದರೆ ನ್ಯಾಯ ಅನ್ಯಾಯಗಳು, ಸುಗುಣ ದುರ್ಗುಣಗಳು, ಆತ್ಮಶಕ್ತಿ ಇವುಗಳ ಮಾತೇ ಇರುತ್ತಿರಲಿಲ್ಲ. ಮನುಷ್ಯರು ಕೇವಲ ಕಲ್ಲು ಕೊರಡುಗಳಲ್ಲ. "ವಿಧಿಯೇ ನಾನಾರೀತಿ ಮಾಡುತ್ತಿರುವುದಕ್ಕೆ ಕಾರಣ. ನನ್ನ ಕೆಲಸಗಳಿಗೆ ನಾನು ಜವಾಬ್ದಾರನಲ್ಲ. ನಾನು ಅಸಹಾಯನಾಗಿ ಅದರಿಂದ ಮುಂದೂಡಲ್ಪಡುತ್ತಿದ್ದೇನೆ." ಈ ವಿಧದ ಮನೋ

ಭಾವವಿದ್ದರೆ ಯಾವ ಮನುಷ್ಯನಿಗೂ ಏಳ್ಗೆ ಇಲ್ಲ, ಮೋಕ್ಷ ದೊರಕುವ ಆಸೆಯೂ ಇಲ್ಲ. ತಾನು ದುರ್ಬಲನೆಂದೂ ಅಗೋಚರವಾದ ಶಕ್ತಿಗಳ ಕರುಣೆಯಲ್ಲಿ ತಾನಿರುವೆನೆಂದೂ ತಿಳಿಯುವುದು ಮನುಷ್ಯನ ಅಧೋಸ್ಥಿತಿ ಅಲ್ಲದೆ ಮತ್ತೇನೂ ಅಲ್ಲವೆಂಬುದನ್ನು ನೆನಪಿನಲ್ಲಿಡು. ಅದು ಆತನನ್ನು ಹೆಚ್ಚು ಹೆಚ್ಚಾಗಿ ಅಜ್ಞಾನ ಕೂಪಕ್ಕೆ ತಳ್ಳುವುದು.

೧೧೦. ಯಾರು ದೈವೇಚ್ಛೆಯಲ್ಲಿ ತನ್ನ ಚಿತ್ತವನ್ನೆಲ್ಲಾ ತಲ್ಲೀನ ಮಾಡುವುದರಲ್ಲಿ ಜಯಶೀಲನಾಗಿರುವನೋ ಅಂತಹವನಿಗೆ ಮಾತ್ರ, "ನಾನು ಈಗ ಮಾಡುತ್ತಿರುವುದು ನನ್ನ ಕೈಯಲ್ಲಿಲ್ಲ. ಇದನ್ನೆಲ್ಲಾ ನಾನು ಎದುರಿಸಲಾಗದ ಪ್ರೇರಣೆಯಿಂದ ಮಾಡುತ್ತಿದ್ದೇನೆ. ನಾನು ಕೇವಲ ಒಂದು ಯಂತ್ರ, ದೇವರೇ ಯಾಂತ್ರಿಕ" ಎಂದು ಹೇಳಲು ಹಕ್ಕಿದೆ. ಅತ್ಯುತ್ತಮ ಮಟ್ಟದಲ್ಲಿರುವ ದೈವಭಕ್ತ ಮಾತ್ರ, ಯಾರಿಗೆ ದೇವರು ಹೊರತು ಮತ್ತಾವುದೂ ಗೊತ್ತಿಲ್ಲವೊ ಅಂತಹವನು ಮಾತ್ರ, ಈ ರೀತಿ ಮಾಡಬಲ್ಲ. ಅವನು ತಿಳಿಯದೆ ಕೂಡ ಎಂದೂ ಒಂದು ಹೆಜ್ಜೆಯನ್ನೂ ತಪ್ಪು ಇಡಲಾರ. ಯಾವ ಕೆಟ್ಟ ಕೆಲಸವೂ ಅವನಿಂದ ಎಂದೂ ಸಾಧ್ಯವಿಲ್ಲ. ಅವನ ಹೃದಯ ಅದಮ್ಯ ಶಕ್ತಿ ಮತ್ತು ಸ್ಫೂರ್ತಿಯಿಂದ ಯಾವಾಗಲೂ ತುಂಬಿರುವುದು. ನಿರಾಶೆ ಅಥವಾ ಖಿನ್ನತೆಯಿಂದ ಅವನೆಂದೂ ಕುಗ್ಗಲಾರನು. ಸುಖ ದುಃಖಗಳು ಆತನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಾರವು. ಆತನಿಗೆ ಯಾವಾಗಲೂ "ನಾನಲ್ಲ, ನಾನಲ್ಲ, ಕೇವಲ ನೀನು, ನೀನು ದೇವರೇ" ಎಂಬ ಭಾವನೆ ಇರುವುದು. ಲಾಭ ನಷ್ಟ, ಜಯ ಪರಾಜಯ, ಕೀರ್ತಿ ಅಪಕೀರ್ತಿ ಎಲ್ಲವೂ ಅವನಿಗೆ ಒಂದೇ.

೧೧೧. ನೀನು ಯಾವುದಾದರೂ ಕೆಲಸವನ್ನು ಮಾಡಬೇಕೆಂದರೆ ಸಂಪೂರ್ಣ ಉತ್ಸಾಹದಿಂದ ತ್ರಿಕರಣ ಪೂರ್ವಕ ಆ ಕೆಲಸಕ್ಕೆ ತೊಡಗಬೇಕು. ಅಡ್ಡಿ ಆತಂಕಗಳೇನು ಬಂದರೂ, ಅವೆಷ್ಟೇ ದುಸ್ಸಾಧ್ಯವಾಗಿದ್ದರೂ ಕೊಂಚವೂ ಅದಕ್ಕೆ ಗಮನಿಸಬೇಡ. ಆ ಅಡ್ಡಿ ಆತಂಕಗಳೇ ಮುಂದೆ ನಿನಗೆ ಸಹಾಯವಾಗಿ ಬಂದೊದಗುವುದನ್ನು ನೀನೇ ನೋಡುವೆ. ಎಂದೂ ನಮ್ಮಿಚ್ಛೆಯಂತೆಯೇ ಎಲ್ಲಾ ಅನುಕೂಲಗಳೂ ಆಗಬೇಕೆಂದರೆ ಅದು ಹೇಗೆ ಸಾಧ್ಯ? ಯಾರು ತಮ್ಮ ಕರ್ತವ್ಯ ತೀರಿದ ಮೇಲೆ, ತನ್ನ ಸಂಸಾರ ತಾಪತ್ರಯಗಳನ್ನೆಲ್ಲಾ ತೃಪ್ತಿಕರವಾಗಿ ಬಗೆಹರಿಸಿ ನಂತರ ಯಾವ ಚಿಂತೆಯೂ ಇಲ್ಲದೆ ಸಂಪೂರ್ಣ ದೇವರ ಕಡೆ ಗಮನ ಕೊಡುವೆ ಎನ್ನುವರೊ,

ಅವರು ಸಮುದ್ರಕ್ಕೆ ಸ್ನಾನ ಮಾಡಲು ಹೋಗಿ ಅದರ ಭಯಂಕರ ಅಲೆಗಳಿಂದ ಭಯಗೊಂಡು, ಯಾವಾಗ ಅಲೆಗಳೆಲ್ಲಾ ನಿಂತು ಸಮುದ್ರ ಶಾಂತವಾಗುವುದೋ ಆಗ ಮಾತ್ರ ತಾನು ನೀರಿನೊಳಗಿಳಿಯುವೆನೆಂದು ಯೋಚಿಸಿದಂತಾಗುವುದು. ಅವನು ಆಜೀವಪರ್ಯಂತ ದಡದ ಮೇಲೆ ಕುಳಿತರೂ ಆ ಸ್ಥಿತಿ ಎಂದಿಗೂ ಬರುವುದಿಲ್ಲ. ಸಮುದ್ರದಲ್ಲಿ ಯಾವಾಗಲೂ ಅಲೆಗಳಿದ್ದೇ ಇರುತ್ತವೆ. ಧೈರ್ಯದಿಂದ ಸಮುದ್ರಕ್ಕೆ ಧುಮುಕಿ ಅಲೆಗಳೊಡನೆ ಹೋರಾಡಿ ಸ್ನಾನಮಾಡಿ ಜಯಶೀಲನಾಗಬೇಕು. ಅದರಂತೆಯೇ ಈ ವಿಶ್ವದ ಕಡಲಿನಲ್ಲಿ ನಾವು ದೇವರ ದರ್ಶನಕ್ಕಾಗಿ ಪ್ರಯತ್ನಿಸಬೇಕು. ಅಲೆಗಳೊಡನೆ ಹೋರಾಡುತ್ತಾ ಅದರ ಜೊತೆಯಲ್ಲೇ ಸಾಧನೆ ಭಜನೆ ಮಾಡಬೇಕು. ಅದಿಲ್ಲದೆ ಅಂಜಿಕೆಯಿಂದ ಕೈಕಾಲುಗೆಟ್ಟು ಕುಳಿತುಕೊಂಡಿದ್ದರೆ ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ಅಪೇಕ್ಷೆ ಎಂದಿಗೂ ಪೂರ್ಣವಾಗುವುದಿಲ್ಲ.

೧೧೨. ಎಷ್ಟೋ ಮಂದಿ ಪ್ರಾಪಂಚಿಕ ಜವಾಬ್ದಾರಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಅಥವಾ ಸರಿಯಾಗಿ ಕೆಲಸ ಸಿಗದೆ ಹೋದಾಗ ಅಥವಾ ಕಡುಬಡತನ, ದಾರಿದ್ರ್ಯ ಎಲ್ಲಾ ಬಗೆಯ ಕಷ್ಟ ಸಂಕಟಗಳೊದಗಿದಾಗ, ತಾವು ಯಾವುದನ್ನು ತೆಗೆದುಕೊಂಡರೂ ಪ್ರತಿ ಹೆಜ್ಜೆಗೂ ಆಶಾಭಂಗವಾದಾಗ, ತಾವು ರಾಮಕೃಷ್ಣಾಶ್ರಮದ ಸನ್ಯಾಸಿಗಳಾಗುವುದಕ್ಕೆ ಆತುರರಾಗಿದ್ದೇವೆಂದು ಹೇಳುವರು. ಈಗಿನ ಕಾಲದಲ್ಲಿ ಸನ್ಯಾಸಿಯಾಗಿಬಿಡುವುದೊಂದು ಸಂಪ್ರದಾಯವಾಗಿ ಪರಿಣಮಿಸಿದೆ. ನಿಜವಾದ ಸನ್ಯಾಸಿ, ತ್ಯಾಗಿ, ಆಗುವುದು ಸುಲಭವೇ? ಆಧ್ಯಾತ್ಮಿಕ ನಿಯಮಗಳಿಂದ ಪಳಗಿ ಈ ಪ್ರಪಂಚದಲ್ಲಿರುವಾಗಲೇ ನಿಸ್ವಾರ್ಥತೆ, ವಸ್ತುಗಳ ಮೇಲೆ ನಿರ್ವ್ಯಾಮೋಹವನ್ನು ಅಭ್ಯಾಸಮಾಡಿ ಇಂತಹ ಜೀವನಕ್ಕೆ ಅರ್ಹತೆ ಪಡೆಯಲು ಸಿದ್ಧನಾಗಿರಬೇಕು. ಇಲ್ಲದಿದ್ದರೆ ಹೊಸಪ್ರೇಮ ಪ್ರಕಾಶ ತಾಳಿಗಿಡದ ಎಲೆಯಿಂದ ಹೊತ್ತಿಸಿದ ಬೆಂಕಿಯಂತೆ ಒಮ್ಮೆ ಕಣ್ಣು ಕುಕ್ಕಿ ಪ್ರಕಾಶಿಸಿ ನಂತರ ಮಾಯವಾಗುವುದು. ಮನಸ್ಸು ಸೋಮಾರಿಯಾಗಿ ಸುಖಜೀವನ, ಅನುಕೂಲ, ಹೆಸರು ಕೀರ್ತಿ ಇವುಗಳ ಬಲೆಗೆ ಬೀಳುವುದು. ಆಗ ಅಂತಹವನು ಒಂದೆರಡು ಗಂಟೆಗಳ ಕಾಲ ಕಷ್ಟದ ಕೆಲಸದಂತೆ ಅಥವಾ ಮೇಲೆ ಬಿದ್ದಿರುವ ಹೊರೆಯಂತೆ ಜಪ, ಧ್ಯಾನವನ್ನು ಮುಗಿಸುತ್ತಾನೆ. "ನನಗಿಂದು ಮೈಸರಿಯಿಲ್ಲ" "ನೆನ್ನೆ ನನಗೆ ಇತರ ಕೆಲಸಗಳಿಂದ ಹೊತ್ತು

ಸಿಗಲಿಲ್ಲ" ಎಂಬ ಯಾವುದಾದರೊಂದು ನೆವ ತಲೆಹಾಕುತ್ತದೆ. ಅನೇಕ ವೇಳೆ ಈ ಪ್ರಾಪಂಚಿಕ ವ್ಯಥೆ ಆತಂಕಗಳಿಂದ ಬಿಡುಗಡೆಯಾದ ಮೇಲೆ ತ್ಯಾಗ ಜೀವನವನ್ನು ಸರಳವಾಗಿ ತೃಪ್ತಿಯಿಂದ ನಡೆಸುತ್ತಿರುವಾಗ, "ನನಗೆ ಈಗ ಬೇಕಾದುದೆಲ್ಲ ಸಿಕ್ಕಿದೆ. ಈಗ ಅವಸರಪಡಬೇಕಾದ ಪ್ರಮೇಯ ವೇನೂ ಇಲ್ಲ. ನನಗೆ ಬಿಡುವು ಸಿಕ್ಕಿದಾಗ, ಅನುಕೂಲವಾದಾಗ ದೇವರ ದರ್ಶನ ತೆಗೆದುಕೊಂಡರೆ ಸಾಕು" ಎಂದು ಯೋಚಿಸುತ್ತಾನೆ. ಹಿಂದಿನ ಸ್ಫೂರ್ತಿ ಮತ್ತು ಉತ್ಸಾಹ ಮಾಯವಾಗಿ ಮನಸ್ಸು ಕ್ರಮೇಣ ಹೀನ ಸ್ಥಿತಿಗೆ ಬರುವುದು.

೧೧೩. ಬೇಲೂರುಮಠವನ್ನು ಹೊರಗಡೆಯಿಂದ ನೋಡಿ ಜನರು "ಈ ಸನ್ಯಾಸಿಗಳು ಎಷ್ಟು ಸುಖಜೀವನ ನಡೆಸುತ್ತಿದ್ದಾರೆ! ಗಂಗಾನದಿಯ ದಡದಲ್ಲಿ ಎಂತಹ ಸುಂದರ ಸ್ಥಳ! ಎಂತಹ ದಿವ್ಯ ಕಟ್ಟಡಗಳು ಮತ್ತು ದೇವಾಲಯ! ಸ್ವಲ್ಪವೂ ಹಣದ ತಾಪತ್ರಯವಿಲ್ಲ, ವ್ಯಾಕುಲತೆ, ತೊಂದರೆ ಏನೊಂದೂ ಇಲ್ಲ. ಈ ಸಾಧುಗಳ ಜೀವನ ಹಬ್ಬ ಹರಿದಿನ ಗಳಿಂದ ತುಂಬಿದೆ. ಅವರು ಕೆಲವು ಗೊತ್ತಾದ ವೇಳೆಯಲ್ಲಿ ಸ್ವಲ್ಪ ಗುರು ಮಹಾರಾಜರ ಕೆಲಸ ಮಾಡುತ್ತಾರೆ. ತಮ್ಮಿಚ್ಛೆಬಂದಂತೆ ಸ್ವಲ್ಪ ಹೊತ್ತು ಜಪಧ್ಯಾನ ಮಾಡುತ್ತಾರೆ. ಉಳಿದ ಸಮಯವನ್ನು ತಮಗಿಷ್ಟ ಬಂದ ರೀತಿ ಕಳೆಯುತ್ತಾರೆ. ಎಂತಹ ಸ್ವಾತಂತ್ರ್ಯ! ಆನಂದ ಜೀವನ!" ಎಂದು ಯೋಚಿಸುತ್ತಾರೆ. ಈ ವಿಮರ್ಶಕಾರರು ಆಶ್ರಮದ ಸನ್ಯಾಸಿಗಳು ಹಗಲು ರಾತ್ರಿ ಎಷ್ಟೊಂದು ಕೆಲಸಮಾಡಬೇಕೆಂದು ಸ್ವಲ್ಪವೂ ಅರಿಯರು. ಎಷ್ಟೊಂದು ಕಠಿನವಾದ ಕಟ್ಟು ನಿಯಮಗಳನ್ನು ಅವರು ಅನುಸರಿಸಬೇಕು, ಎಷ್ಟೊಂದು ಬಗೆಯ ಅಸಾಧ್ಯ ಕೆಲಸಗಳನ್ನು ಅವರು ನಿರಂತರ ಮಾಡು ತ್ತಲೇ ಇರಬೇಕು; ಅವರು ತಮ್ಮ ಆರೋಗ್ಯವನ್ನು ಲೆಕ್ಕಿಸದೆ ಪ್ರಾಣದ ಆಸೆಯನ್ನು ತುಚ್ಛೀಕರಿಸಿ ಯಾವಾಗಲೂ ಜರೂರು ಕೆಲಸಕ್ಕೆ ಸಿದ್ಧವಾಗಿರ ಬೇಕು. 'ದೀನದುಃಖಿಗಳ ಉದ್ಧಾರಕ್ಕಾಗಿ ಅನೇಕ ಅಪಾಯಕರವಾದ ಕೆಲಸಗಳನ್ನು ಕೈಕೊಂಡು ಅವರು ಸಾವನ್ನು ಕೂಡ ಹಸನ್ಮುಖರಾಗಿ ಎದು ರಿಸಬೇಕೆಂಬುದು ಈ ಜನರಿಗೇನು ಗೊತ್ತು! ತಮ್ಮ ಭಕ್ತಿ ಮುಕ್ತಿಗಳನ್ನು ಮರೆತು ಮನುಷ್ಯನನ್ನೇ ಜೀವಂತ ದೇವರೆಂದು ಭಾವಿಸಿ ವಿಶ್ವಸೇವೆ ಗಾಗಿ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ. ಆಶ್ರಮಕ್ಕೆ ಸೇರಿರುವ ಯಾರೇ ಆಗಲಿ ಆಶ್ರಮದ ನಿಯಮದಂತೆ ನಡೆಯದೆ ಅಥವಾ

ನೆವವನ್ನು ಮುಂದೂಡಿ ಅದರಿಂದ ತಪ್ಪಿಸಿಕೊಳ್ಳಲು ಯತ್ನಿಸುತ್ತಾರೋ ಯಾರು ಸ್ವೇಚ್ಛೆಯಾಗಿ ಜೀವಿಸುತ್ತಾರೋ ಅಂತಹ ದಾರಿ ತಪ್ಪಿದ ಜನರು ತಮ್ಮ ಚಿತ್ತಭ್ರಮೆಯಲ್ಲೇ ಮುಳುಗಿ ಹೋಗುತ್ತಾರೆ. ಇದರಿಂದ ಅವರ ಪ್ರಗತಿಮಾರ್ಗಕ್ಕೆ ಅಡ್ಡಿಯಾಗಿ ಅವರು ಕ್ರಮೇಣ ತಮ್ಮ ಗುರಿಯಿಂದ ಚ್ಯುತಿಹೊಂದುತ್ತಾರೆ.

೧೧೪. ಶ್ರದ್ಧಾಸಕ್ತಿಗಳಿಂದ ಕೂಡಿ ಹೆಚ್ಚು ಸಾಧನೆಮಾಡಲು ಅಶಕ್ತನಾಗಿದ್ದರೂ ಅಂತಹ ಗೃಹಸ್ಥ ಭಕ್ತನು ಭ್ರಷ್ಟ ಸನ್ಯಾಸಿ ಗಿಂತ ಸಾವಿರಪಾಲು ಮೇಲು. ಗೃಹಸ್ಥ ಅತಿಯಾಗಿ ತನ್ನ ಶಕ್ತಿ ಯಿದ್ದಷ್ಟೂ ಆಧ್ಯಾತ್ಮಿಕ ಪ್ರಗತಿಗಾಗಿ ಹೋರಾಡುತ್ತಿದ್ದಾನೆ. ಮತ್ತು ದೇವರಲ್ಲಿ ಈ ಸಹಿಸಲಶಕ್ಯವಾದ ದಾಸ್ಯ ಶೃಂಖಲೆಗಳಿಂದ ಬಿಡುಗಡೆ ಮಾಡೆಂದು ವ್ಯಾಕುಲತೆಯಿಂದ ಮೊರೆಯಿಡುತ್ತಾನೆ. ತನ್ನ ಐಹಿಕ ಜೀವನದಲ್ಲಿ ಪದೇ ಪದೇ ಎದುರಿಸಬೇಕಾಗಿರುವ ಕರ್ತವ್ಯದ ವಿವಿಧ ಬಂಧನ ಅಡ್ಡಿ ಆತಂಕಗಳೊಂದಿಗೆ ಹೋರಾಡುತ್ತಿದ್ದಷ್ಟೂ ಆತನ ಹೃದಯದಲ್ಲಿ ತ್ಯಾಗದ ತೀವ್ರ ಆಕಾಂಕ್ಷೆ ವೃದ್ಧಿಯಾಗುವುದು. ಆತನ ಹೃದಯ ಭಗ ವಂತನ ದರ್ಶನಕ್ಕಾಗಿ ತಪಿಸಿ ಸೊರಗುವುದು. ಈ ಬಂಧನಗಳನ್ನು ತ್ಯಜಿಸಿ ಆತನ ದಿವ್ಯ ಸಾಕ್ಷಾತ್ಕಾರ ಪಡೆಯಬೇಕೆಂಬ ಹಂಬಲಿಕೆ ಏಕ ಪ್ರಕಾರವಾಗಿ ವೃದ್ಧಿಯಾಗುವುದು. ಈ ಹಂಬಲ ನಮ್ಮೊಳಗಿರುವ ಆತ್ಮಶಕ್ತಿಯ ಬಲ ವನ್ನು ಪ್ರಜ್ವಲಗೊಳಿಸುವುದು. ದೇವರು ಆತನ ಸಹಾಯಕ್ಕೆ ಬರುತ್ತಾನೆ. ಆತನೇ ನಮ್ಮ ಅಂತರ್ಯದ ಮಾರ್ಗದರ್ಶಕ. ತನ್ನ ಭಕ್ತನ ದುರವಸ್ಥೆ ಯನ್ನು ತಿಳಿದು, ಅವನ ಮೋಕ್ಷಕಂಟಕವಾಗಿರುವ ವಿಘ್ನಗಳನ್ನೆಲ್ಲಾ ದೂರಮಾಡುತ್ತಾನೆ. ನಿಜಾಂಶವೇನೆಂದರೆ ನಮ್ಮ ಅಂತಃಕರಣದೊಳಗಿಂದ ತ್ಯಾಗದ ಆಕಾಂಕ್ಷೆ ಬಂದ ಹೊರತು ಪ್ರೇಮವಾಗಲಿ, ಮುಕ್ತಿಯಾಗಲಿ, ಜ್ಞಾನವಾಗಲಿ ಯಾವುದೂ ದೊರಕುವುದಿಲ್ಲ.

೧೧೫. ಅನೇಕರು, "ಕರ್ಮ ಅಥವಾ ಸೇವೆಯಿಂದ ಏನು ಪ್ರಯೋ ಜನ? ಇದಕ್ಕಿಂತ ಭಗವತ್ಸಾಕ್ಷಾತ್ಕಾರಕ್ಕಾಗಿ ಹಗಲೂರಾತ್ರೆ ಸಾಧನ ಭಜನೆ ಮೊದಲು ಮಾಡೋಣ" ಎಂದು ಯೋಚಿಸುವರು. ಇದು ಸಾಧ್ಯವೆ? ನೀನು ಕೆಲವು ತಿಂಗಳು ಪ್ರಯತ್ನಪಟ್ಟನಂತರ ಈ ಮಾರ್ಗವನ್ನು ಅನುಷ್ಠಾನಮಾಡುವುದು ಸಾಧ್ಯವಿಲ್ಲವೆಂದು ನಿನಗೇ ತಿಳಿಯುವುದು. ನೀನು ಮತ್ತೊಬ್ಬರ ಹಿತಕ್ಕಾಗಿ ದುಡಿಯದಿದ್ದರೆ ನಿನ್ನ ಮನಸ್ಸು ಹೇಗೆ ಪರಿಶುದ್ಧ

ವಾಗುವುದು? ಪರಿಶುದ್ಧತೆ ಇಲ್ಲದಿದ್ದಲ್ಲಿ ಮನಸ್ಸು ಹೇಗೆ ತಾನೆ ಶಾಂತಿ ಸಮಾಧಾನವನ್ನು ಪಡೆದೀತು? ಯಾವಾಗ ಮನಸ್ಸು ಸ್ಥಿರವಾಗಿಲ್ಲವೋ ಆಗ ನಿನ್ನ ಇಷ್ಟದೇವತೆಯ ಮೇಲೆ ಧ್ಯಾನಮಾಡಲು, ಮನಸ್ಸನ್ನು ಕೇಂದ್ರೀಕರಿಸಲು ಸುಲಭವೆ? ಕೇವಲ ಕರ್ಮದ ಮೂಲಕವೇ ಒಬ್ಬನು ತನ್ನ ನಿಜವಾದ ಪರಿಮಿತಿಯನ್ನು, ನಿಜಸ್ಥಿತಿಯನ್ನು ಅಳಿಯಬೇಕು. ಆಗ ಮಾತ್ರ ನಮ್ಮ ಶಕ್ತಿ ಮತ್ತು ಬಲದ ಮಿತಿ ಗೊತ್ತಾಗುವುದು. ನಮ್ಮ ಮನಸ್ಸಿನ ದುರ್ಬಲತೆಯೆಷ್ಟು? ಅದರ ನ್ಯೂನತೆಗಳೆಷ್ಟು? ಅವು ಯಾವುವು? ಪ್ರಾಪಂಚಿಕ ವಸ್ತುಗಳ ಮೇಲಿನ ಮೋಹ, ಆಕರ್ಷಣೆ ಎಷ್ಟು ತೀವ್ರವಾಗಿವೆ, ಎಷ್ಟೊಂದು ಸ್ವಾರ್ಥತೆ ಮತ್ತು ಅಹಂಭಾವವಿದೆ, ಎಷ್ಟರಮಟ್ಟಿಗೆ ಸಹನೆ ಸ್ಥೈರಣೆಗಳಿವೆ, ಇವುಗಳೇನಾದರೂ ಹೆಚ್ಚುತ್ತಿರುವುವೋ ಅಥವಾ ಕಡಿಮೆಯಾಗುತ್ತಿರುವುವೋ?– ಇವೆಲ್ಲವೂ ಕೇವಲ ಕರ್ಮದ ಮೂಲಕ ನಮಗೆ ತಿಳಿಯುತ್ತದೆ. ಈ ನ್ಯೂನತೆಗೆ ಸುಲಭ ಚಿಕಿತ್ಸೆಯೇ ಕರ್ಮ. ಕರ್ಮದ ಮೂಲಕ ಕಲ್ಮಶ ಕಡಿಮೆಯಾಗುವುದು. ಸತ್ ಅಸತ್ ವಿಚಾರ ಅಂತರ್‌ದೃಷ್ಟಿ ಮತ್ತು ಆತ್ಮಪರೀಕ್ಷೆ ಇದ್ದರೆ ಮನಸ್ಸು ಕ್ರಮೇಣ ನಿರ್ಮಲವಾಗಿ ನಿಷ್ಕಾಮವಾಗುವುದು. ಅಹಂಭಾವ ನಾಶವಾಗಿ ಹೃದಯ ಭಗವತ್ಪ್ರೇಮದಿಂದ ತುಂಬಿ ತುಳುಕಾಡುವುದು. ಆಗ ನಾವು ಕರ್ಮವನ್ನು ಕರ್ಮವೆಂದು ನೋಡುವುದಿಲ್ಲ. ಕರ್ಮ ಬಂಧನವಾಗುವ ಬದಲು ಅದು ಬಿಡುಗಡೆಯ ಹಾದಿಯಾಗಿ ಪರಿಣಮಿಸುವುದು. ಎಂದರೆ ಆಗ ಕರ್ಮವೂ ಪವಿತ್ರವಾಗಿ ಮಾರ್ಪಡುವುದು. ದೇವರ ಪೂಜೆಗೂ ಮತ್ತು ಕರ್ಮಕ್ಕೂ, ಮನುಷ್ಯನೇ ದೇವರೆಂದು ಮಾಡುವ ಸೇವೆಗೂ, ಭಗವಂತನ ಮೇಲಿನ ಭಕ್ತಿಗೂ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಅದೇ ನಿಜವಾದ ಭಕ್ತಿ ಮತ್ತು ಭಗವತ್ಪ್ರೇಮ. ಅದನ್ನು ಹೊಂದುವುದಕ್ಕೆ ಅತ್ಯಂತ ಸಹಜವಾದ ಮಾರ್ಗವೆಂದರೆ ಕರ್ಮಯೋಗ ಅಥವಾ ಫಲಾಪೇಕ್ಷೆ ಇಲ್ಲದೆ ಕರ್ಮ ಮಾರ್ಗವನ್ನು ಅನುಸರಿಸುವುದು.

೧೧೬. ಜ್ಞಾನಾರ್ಜನೆ ಇಲ್ಲದೆ ಪರಾಭಕ್ತಿ ದೊರಕದು. ಪರಮೇಶ್ವರ ಎಲ್ಲಾ ಪ್ರಾಣಿಗಳಲ್ಲಿಯೂ ಮತ್ತು ವ್ಯಕ್ತಿಗಳಲ್ಲಿಯೂ ಇದ್ದಾನೆ. ಜೀವ ಜಗತ್ ಆತನಿಂದ ಬೇರಲ್ಲ. ಈ ಜ್ಞಾನವನ್ನು ಪಡೆಯದೆ ಸರ್ವೋತ್ಕೃಷ್ಟ ಭಗವತ್ಪ್ರೇಮವನ್ನು ಹೊಂದಲಾಗುವುದಿಲ್ಲ. ಪರಮಾತ್ಮ, ಜೀವ, ಜಗತ್ ಒಂದೇ, ಏಕರೂಪ, ಎಂಬ ಭಾವನೆಯೇ ಪರಾಭಕ್ತಿ ಮತ್ತು ಪರಮ

ಜ್ಞಾನ. ಆದರೆ ಈ ಎರಡು ಮಾರ್ಗಗಳೂ ಮತ್ತು ಅವುಗಳಿಗೆ ಸಂಬಂಧ ಪಟ್ಟ ಆಧ್ಯಾತ್ಮಿಕ ಸಾಧನೆಯ ರೀತಿಯೂ ಆಯಾಯ ಸಾಧಕರ ಚಿತ್ತ ಮತ್ತು ಗುಣಗಳಿಗೆ ತಕ್ಕಂತೆ ಭಿನ್ನವಾಗಿರುತ್ತವೆ. ಸಂಪೂರ್ಣ ಜ್ಞಾನ ಮಾರ್ಗವನ್ನನುಸರಿಸಲು ಯೋಗ್ಯರಾದವರು ಈ ಪ್ರಪಂಚದಲ್ಲಿ ವಿರಳ. ಆ ದಾರಿಯೂ ಕೂಡ ಅತ್ಯಂತ ಕಠಿಣ. ಆದಕ್ಕೇ ಜ್ಞಾನ ಮಿಶ್ರ ಭಕ್ತಿಯೇ ಉತ್ತಮ.

೧೧೭. ಜ್ಞಾನಮಾರ್ಗದಲ್ಲಿ ಪ್ರತಿಯೊಂದು ವಸ್ತುವನ್ನೂ "ನೇತಿ, ನೇತಿ" ಎಂದು ಮೊದಲಿಂದಲೇ ತ್ಯಜಿಸಬೇಕು. "ನಾನು ಇದಲ್ಲ ಅದೂ ಅಲ್ಲ, ನಾನು ನೋಡುವ, ಕೇಳುವ, ತಿಳಿಯುವ ಯಾವುದೊಂದೂ ಅಲ್ಲ. ನಾನು ಶರೀರವಲ್ಲ, ಮನಸ್ಸಲ್ಲ, ಇಂದ್ರಿಯಗಳೂ ಅಲ್ಲ. ರೋಗ, ದುಃಖ, ಸಂತೋಷ ಅಥವಾ ವ್ಯಥೆ, ಶೀತೋಷ್ಣ, ಇವುಗಳನ್ನು ಅನುಭವಿಸುವವನು ನಾನಲ್ಲ. ಈ ಕಣ್ಣಿಗೆ ಕಾಣುವ ಭೂಮಂಡಲ ಇಲ್ಲವೇ ಇಲ್ಲ. ಅಂದರೆ ಭೂತ, ವರ್ತಮಾನ, ಭವಿಷ್ಯತ್ ಈ ಮೂರು ಭಾಗಗಳಲ್ಲಿಯೂ ಕೂಡ ಅದು ಅಸ್ಥಿರ. ಆದ್ದರಿಂದ ಅದು ಅಸತ್ಯ. ನಾನು ಅಖಂಡ ಸತ್–ಚಿತ್–ಆನಂದ, ಪರಬ್ರಹ್ಮ, ಪರಮಾತ್ಮ, ಎರಡಿಲ್ಲದ ಒಂದು. ದೇಹ, ಅಹಂ ಭಾವ ಇವುಗಳಿಂದ ಕೂಡಿದ ಮನುಷ್ಯನಿಗೆ ಇಂತಹ ಕಠೋರ ನಿಯಮ ವನ್ನಾಚರಿಸಲು ಎಂದಿಗಾದರೂ ಸಾಧ್ಯವೆ? ಮುಳ್ಳೊಂದು ನಮ್ಮ ದೇಹಕ್ಕೆ ಚುಚ್ಚುತ್ತದೆ. ಆದರೂ ನೋವಿನ ಅರಿವಿಲ್ಲ! ವಿಷಯ ವಸ್ತುಗಳ ಮೋಹ ದಿಂದ ಸಂಪೂರ್ಣ ಬಿಡುಗಡೆಯಾಗಿರುವ ಮನುಷ್ಯನ ಸ್ಥಿತಿ ಇದು. ಇದು ನಿರ್ವಿಕಲ್ಪ ಸಮಾಧಿಯಲ್ಲಿ ಬರುವ ಅನುಭವ, ಮನೋ ಬದಲಾವಣೆಗೆ ಅತೀತವಾದ ಅತ್ಯಂತ ಕಟ್ಟಕಡೆಯ ಬ್ರಹ್ಮಜ್ಞಾನದ ಸ್ಥಿತಿ, ಸಾಕ್ಷಾ ತ್ಕಾರದ ಪರಮಾವಧಿ. ಗುರು ಮಹಾರಾಜರು ಈ ಸ್ಥಿತಿ ಪ್ರಾಪ್ತವಾದ ಇಪ್ಪತ್ತೊಂದು ದಿನಗಳ ಮೇಲೆ ಶರೀರ ಬದುಕುವುದಿಲ್ಲವೆಂದು ಹೇಳು ತ್ತಿದ್ದರು.

೧೧೮. ಭಕ್ತಿಮಾರ್ಗ ಅಥವಾ ಭಕ್ತಿಯೋಗ ಎಲ್ಲಾ ಮಾರ್ಗಗಳಿ ಗಿಂತ ಸುಲಭ. ಏಕೆಂದರೆ ಇದರಲ್ಲಿ ನಮ್ಮ ಸ್ವಾಭಾವಿಕ ಪ್ರೇರೇಪಣೆ ಆಸೆ ಆಕಾಂಕ್ಷೆ ಇವುಗಳನ್ನು ನಿರ್ಮೂಲ ಮಾಡಬೇಕಾದ ಪ್ರಮೇಯವಿಲ್ಲ. ಅದನ್ನು ಒಂದು ಹೊಸಮಾರ್ಗಕ್ಕೆ ತಿರುಗಿಸಬೇಕು ಅಷ್ಟೆ. ಅವರ ಪ್ರವೃತ್ತಿ ಗಳು, ಮನಸ್ಸಿನ ಓಟ ಮತ್ತು ಶಕ್ತಿ ಹೊಸ ಪಾತ್ರದಲ್ಲಿ ಹರಿಯುವಂತೆ

ಮಾಡಬೇಕು. ಹೆಚ್ಚು ಪ್ರತಿಭಟನೆ ಇಲ್ಲದೆ ಇದನ್ನು ಮಾಡಬಹುದು. ವಿಷಯ ವಸ್ತುಗಳಿಂದ ಮನಸ್ಸನ್ನು ನಿಧಾನವಾಗಿ ಸೆಳೆದುಕೊಂಡು ಭಗವಂತನ ಕಡೆಗೆ ತಿರುಗಿಸಬೇಕು. ಇದನ್ನು ಮಾಡಬೇಕಾದರೆ ವಿಮರ್ಶೆ ಮತ್ತು ವಿವೇಕ ಇವುಗಳ ಸಹಾಯದಿಂದ ಕೊನೆಯಿಲ್ಲದ ವ್ಯಥೆ ಬಂಧನಗಳಿಗೆ ಗುರಿಮಾಡುವ ಕೆಟ್ಟ ಗುಣಗಳಾದ ಕಾಮ, ಕ್ರೋಧ, ಲೋಭ, ಮೋಹಗಳನ್ನು ಪೂರ್ತಿ ತೊಡೆಯಬೇಕು. ಈ ಮನೋವಿಕಾರಗಳನ್ನು ಜಯಿಸಿದ ಹೊರತು ಮನುಷ್ಯರು ಬಾರಿಬಾರಿಗೂ ಈ ಪ್ರಪಂಚದಲ್ಲಿ ಹುಟ್ಟಿ ಸಾಯಬೇಕೆಂಬುದನ್ನೂ, ಅವರ ದುಃಖ ಎಂದಿಗೂ ಕೊನೆಗಾಣುವುದಿಲ್ಲವೆಂಬುದನ್ನೂ ಖಂಡಿತ ತಿಳಿಯಬೇಕು. ಹೀಗೆ ಮಾಡುವುದರಿಂದ ದುರಾಶಾ ಪ್ರವೃತ್ತಿ ದುರ್ಬಲವಾಗಿ ನಮ್ಮನ್ನು ಅಧೋಗತಿಗೆ ಎಳೆಯುತ್ತಿರುವ ಕೀಳು ಪ್ರವೃತ್ತಿಗಳೂ ಕ್ರಮೇಣ ರೂಪಾಂತರವಾಗಿ ಒಳ್ಳೆಯತನದ ಪ್ರಚಂಡ ಶಕ್ತಿಗಳಾಗಿ ಮಾರ್ಪಟ್ಟು ಜೀವನವನ್ನು ಪರಮಾನಂದದ ನಿರಂತರ ಅನುಭವದಿಂದ ತುಂಬುತ್ತದೆ. ನಿನಗೆ ಸಂತೋಷಬೇಕೆಂದು ಹಂಬಲಿಸುತ್ತಿದ್ದರೆ ಪ್ರೇಮಮಯನಾದ, ಆ ಭಗವಂತನ ಸಾನ್ನಿಧ್ಯದ ತನ್ಮಯಾವಸ್ಥೆಗಾಗಿ ಹಂಬಲಿಸು. ನೀನು ದುರಾಶೆಯುಳ್ಳವನಾಗಿದ್ದರೆ ಎಂದೂ ಚ್ಯುತಿ ಇಲ್ಲದ ಅನರ್ಘ್ಯ ರತ್ನವಾದ ಆ ಭಗವಂತನನ್ನು ಪಡೆಯಲು ಯತ್ನಿಸು! ನೀನು ಸೌಂದರ್ಯಕ್ಕೆ ಮಾರುಹೋಗಿದ್ದರೆ ಸೌಂದರ್ಯ ನಿಧಿಯಾದ ಆ ಭಗವಂತನಲ್ಲಿ ಮೋಹಗೊಳ್ಳು. ನೀನು ಕೋಪಿಸಿಕೊಳ್ಳಬೇಕಾಗಿದ್ದರೆ ಇನ್ನೂ ಕಾಣಿಸಿಕೊಳ್ಳದಿರುವ ದೇವನ ಮೇಲೆ ಕೋಪಗೊಳ್ಳು. ಇದೇ ರೀತಿ ಈ ಜೀವನದ ಕ್ಷಣಿಕ ವಸ್ತುಗಳಿಗೆ ನಿನ್ನನ್ನು ಸೆಳೆಯುವ ಮದ ಮತ್ತು ಮಾತ್ಸರ್ಯಗಳ ವಿಷಯದಲ್ಲಿಯೂ ವರ್ತಿಸು.

೧೧೯. ಪ್ರಾರಂಭದಲ್ಲಿ ನಾವು ಕರ್ಮ ಮತ್ತು ಸಾಧನೆ ಭಜನೆ ಎರಡನ್ನೂ ಅವಲಂಬಿಸಬೇಕು. ಇವೆರಡೂ ಆವಶ್ಯಕ. ಒಂದನ್ನು ಮತ್ತೊಂದರ ಜೊತೆಯಲ್ಲಿ ಯಾವ ಘರ್ಷಣೆಯೂ ಇಲ್ಲದೆ ಮಾಡಬೇಕು. ಇವೆರಡರ ಗುರಿಯೂ ಭಗವಂತನ ಸಾಕ್ಷಾತ್ಕಾರ ಎಂಬುದನ್ನು- ದೃಢವಾಗಿ ನಂಬು. ಕೆಲಸಮಾಡುತ್ತಿರುವಾಗ ಮನದಲ್ಲಿ ಇಷ್ಟದೇವರ ಆಕಾರವನ್ನು ಸ್ಥಿರವಾಗಿ ಇಟ್ಟುಕೊಳ್ಳಲಾಗದಿದ್ದಲ್ಲಿ ಅನೇಕ ಬಗೆಯ ಆಕರ್ಷಣೆಗಳು, ಮನೋ ಚಂಚಲತೆ ಇವು ವೈದೋರಿ ಕೆಲಸದ ತೊಡಕಿನಲ್ಲೇ ಸಂಪೂರ್ಣ ನಮ್ಮನ್ನು ಮರೆತುಬಿಡುತ್ತೇವೆ. ಮನಸ್ಸಿನ ಸಮತ್ವಕ್ಕೆ ಭಂಗ ಬಾರದಂತೆ

ನೋಡಿಕೊಳ್ಳಬೇಕು. ಜೀವನದ ಇತರ ಗುರಿಯ ವಿಷಯದಲ್ಲಿಯೂ ಹೀಗೆಯೇ ನಾವು ಎಚ್ಚರವಾಗಿ ಜಾಗರೂಕತೆಯಿಂದಿರಬೇಕು. ನಿತ್ಯ ಅನಿತ್ಯ ವಸ್ತು ವಿಮರ್ಶೆ ಇರಬೇಕು. ಪ್ರಾರ್ಥನೆ ಮಾಡುವ ಅಭ್ಯಾಸವಿರಬೇಕು. ಇದನ್ನು ಮಾಡಿದರೆ ದೇವರ ಕೃಪೆಯಿಂದ ಕರ್ಮಕ್ಕೂ ಸಾಧನ ಭಜನೆಗೂ ಯಾವ ವ್ಯತ್ಯಾಸವೂ ಕಂಡುಬರದ ಒಂದು ಕಾಲ ಪ್ರಾಪ್ತವಾಗುವುದು. ಏನನ್ನು ಮಾಡಿದರೂ ಸಾಧನೆಯಾಗಿ ಪರಿಣಮಿಸುವುದು. ಕರ್ಮ ಮಾಡುವವನು ವೈರಾಗ್ಯ ಭಾವವನ್ನು ಅವಲಂಬಿಸಿ ತೀರ್ಥ ಭ್ರಮಣ, ಏಕಾಂತದಲ್ಲಿ ಸಾಧನೆ ಭಜನೆ ತಪಸ್ಸನ್ನು ಒಂದೆರಡು ವರುಷ ಮಾಡುವುದು ಆವಶ್ಯಕ. ಇದು ದೇಹ ಮನಸ್ಸನ್ನು ತೇಜಸ್ಸಿನಿಂದ ತುಂಬುವುದು, ಪ್ರಫುಲ್ಲ ಮಾಡುವುದು. ಆತ್ಮ ಪ್ರತ್ಯಯ ಮತ್ತು ಈಶ್ವರನ ಮೇಲೆ ನಿರ್ಭರತೆ ಹುಟ್ಟುವುದು. ಶಕ್ತಿ ಸಂಚಯವಾಗಿ ಚಾರಿತ್ರ ದೃಢವಾಗುವುದು.

೧೨೦. ದೀಕ್ಷೆಹೊಂದಿದ ಯಾರು ಬೇಕಾದರೂ ತನ್ನ ಇಷ್ಟದೇವತೆಯನ್ನು ಪೂಜಿಸಬಹುದು. ದೀಕ್ಷೆ ದೇಹವನ್ನು ಶುದ್ಧಿಮಾಡುವುದು. ಭಗವಂತನನ್ನು ಕೇವಲ ನಿನ್ನವನೆಂದು ತಿಳಿದು ಆತನಲ್ಲಿ ಸಂಪೂರ್ಣ ಶ್ರದ್ಧೆಯನ್ನಿಟ್ಟು ಅನನ್ಯ ಭಕ್ತಿಯಿಂದ ಆತನನ್ನು ಪೂಜಿಸು. ನಿನ್ನ ಮನಬಂದಂತೆ ಹೂ, ಗಂಧ, ಹಾರ ಮತ್ತು ನೈವೇದ್ಯವನ್ನು ಅರ್ಪಿಸು. ಮನಸ್ಸು ಪೂಜೆಯಲ್ಲೇ ತಲ್ಲೀನವಾದರೆ ತಾನಾಗಿ ಶಾಂತವಾಗಿ ಧ್ಯಾನ ಗಾಢವಾಗುವುದು. ಹೆಚ್ಚು ಆನಂದ ದೊರಕುವುದು. ಪ್ರೇಮದಿಂದ ಮಾಡುವ ಪೂಜೆಯಲ್ಲಿ ಇದನ್ನೇ ಮಾಡಬೇಕು ಅಥವಾ ಮಾಡಬಾರದು ಎಂಬ ನಿಯಮವೇನೂ ಇಲ್ಲ. ಶಾಸ್ತ್ರ, ಸ್ತೋತ್ರ, ಚಿತ್ರ, ಪ್ರಾರ್ಥನೆ, ಅಂಗಕರನ್ಯಾಸಾದಿಗಳು ಅನವಶ್ಯಕ. ಶ್ರದ್ಧೆ, ಭಕ್ತಿ, ಪ್ರೇಮ ಇವು ಮಾತ್ರ ಮುಖ್ಯ. ನೀನು ಪೂಜಿಸುತ್ತಿರುವ ಕಾಲದಲ್ಲಿ ನಿನ್ನ ಇಷ್ಟ ದೇವತೆಯು ನೀನು ಅರ್ಪಿಸುತ್ತಿರುವ ಫಲಪುಷ್ಪ ನೈವೇದ್ಯಾದಿಗಳನ್ನು ಅವೆಷ್ಟೇ ಅಲ್ಪವಾಗಿರಲಿ ಪ್ರೇಮದಿಂದ ಸ್ವೀಕರಿಸುತ್ತಿರುವನು ಎಂದು ಭಾವಿಸು. ಪ್ರೇಮ ಮತ್ತು ಭಕ್ತಿಯಿಂದ ಅರ್ಪಿಸಲ್ಪಟ್ಟ ಆಹಾರ ಆತನಿಗೆ ಪರಮ ಇಷ್ಟ, ಅತಿ ರುಚಿ. ಅವನು ದುರ್ಯೋಧನ ಮಹಾರಾಜನ ಆಮಂತ್ರಣವನ್ನೂ ನಿರಾಕರಿಸಿ ಭಕ್ತನಾದ ಬಡ ವಿದುರನ ಸರಳ ಆಹಾರವನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸಿದನು. ನೀನೇನನ್ನು ತಿನ್ನುತ್ತೀಯೋ ಅದನ್ನು ಆತನಿಗೆ ಮಾನಸಿಕವಾಗಿ ಅರ್ಪಿಸಿ ತಿನ್ನು. ಪವಿತ್ರವಾದ ಆಹಾರ ಆತನ ಪ್ರಸಾದವೆಂದು ತಿಳಿ. ಇದರಿಂದ ಆ ಆಹಾರವಲ್ಲಿ

ಏನಾದರೂ ಆಧ್ಯಾತ್ಮಿಕ ಜೀವನಕ್ಕೆ ಹಾನಿಕರವಾದ ಗುಣವಿದ್ದರೆ ಅದು ನಾಶವಾಗುವುದು.

೧೨೧. ಸೇವೆ, ಸ್ವಾಧ್ಯಾಯ, ಸಾಧನ, ಸತ್ಯ, ಸಂಯಮ (ನಿಗ್ರಹ) —ಈ ಐದು 'ಸ' ಕಾರಗಳೂ ಸಾಕ್ಷಾತ್ಕಾರಕ್ಕೆ ಶ್ರೇಷ್ಠ ಉಪಾಯ. ಯಾವಾಗಲೂ ಅವುಗಳನ್ನು ಆಸಕ್ತಿಯಿಂದ ನಿನ್ನ ಕೈಲಾದಷ್ಟೂ ಅನುಷ್ಠಾನ ಮಾಡು.

೧೨೨. ಪೂಜೆ, ಸ್ವಾಧ್ಯಾಯ, ಸೇವೆ, ಜಪ, ಮತ್ತು ಧ್ಯಾನ ಇವೇ ಮುಂತಾದ ನಿತ್ಯವಿಧಿಗಳನ್ನು ನಿಶ್ಚಲವಾಗಿ ಕ್ರಮವಾಗಿ ಸಾಧನೆ ಮಾಡಿದರೆ ಈ ಜನ್ಮದ ಮತ್ತು ಹಿಂದಿನ ಜನ್ಮದ ಕೆಟ್ಟ ಪ್ರವೃತ್ತಿಗಳು ನಾಶವಾಗಿ, ಒಳ್ಳೆಯಪ್ರವೃತ್ತಿಗಳು ಆವಿರ್ಭವಿಸಿ ದೃಢವಾಗುತ್ತವೆ. ಇದರ ಪರಿಣಾಮವಾಗಿ ಸಾಧನೆಯನ್ನು ಕ್ರಮೇಣ ಮುಂದುವರಿಸಲು ಸುಲಭ ವಾಗುವುದು. ಮನಸ್ಸು ಪವಿತ್ರವಾಗಿ ಸ್ಥಿರವಾಗಿ ದೇವರ ಯೋಚನೆ ಯಲ್ಲೇ ತಲ್ಲೀನವಾಗಿ ತತ್ತ್ವಜ್ಞಾನವನ್ನು ಪಡೆಯುತ್ತದೆ.

೧೨೩. ಹಿಂದಿನ ಜನ್ಮಗಳಲ್ಲಿ ಮಾಡಿದ್ದ ಒಳ್ಳೆಯ ಸಂಸ್ಕಾರಗಳು ಅಥವಾ ಒಳ್ಳೆಯ ಕೆಲಸಗಳಿಂದ ಉದ್ಭವಿಸಿದ ಅಂತರ್ಜನಿತ ಪ್ರೇರೇಪಣೆ ಯಿಂದಲ್ಲದೆ ಧರ್ಮದಲ್ಲಿ ಅಥವಾ ಭಗವಂತನಲ್ಲಿ ಶ್ರದ್ಧೆ ಹುಟ್ಟುವುದಿಲ್ಲ. ಆದರಲ್ಲಿ ಅಭಿರುಚಿಯೂ ಇರುವುದಿಲ್ಲ. ಎಲ್ಲೋ ಸ್ವಲ್ಪ ಅಸಾಧಾರಣ ವಾದೊಂದು ಧಾರ್ಮಿಕಕರ್ಮ ಮಾಡಿದುದರ ಫಲವಾಗಿ ಅಂತಹ ಶ್ರದ್ಧೆ ಅಥವಾ ಅಭಿರುಚಿ ಒಂದು ವೇಳೆ ಇದ್ದರೂ ಅನೇಕ ಬಗೆಯ ಅಡ್ಡಿ ಆತಂಕಗಳು ಅವರ ದಾರಿಯಲ್ಲಿ ಮೈದೋರುತ್ತದೆ. ಅಂತಹವರು ಆಧ್ಯಾತ್ಮಿಕ ಮಾರ್ಗದಲ್ಲಿ ಹೆಚ್ಚು ಮುಂದುವರಿಯಲು ಬಹಳ ಕಷ್ಟವಾಗು ವುದು. ಆದರೆ ಈ ಕಾರಣದಿಂದ ನಿರಾಶನಾದರೆ ಏನೂ ಪ್ರಯೋಜನವಿಲ್ಲ. ನೀನು ಅವುಗಳನ್ನು ಮೀರಿಹೋಗಲು ಸ್ಥಿರವಾಗಿ ಪ್ರಯತ್ನಪಟ್ಟಷ್ಟೂ ಅವು ನಿನ್ನ ಹಾದಿಯಿಂದ ದೂರ ಓಡಿ ಹೋಗುವುವು. ಇಷ್ಟೇ ಅಲ್ಲ, ಮುಂದೆ ಆ ಅಡ್ಡಿ ಆತಂಕಗಳೇ ತಮ್ಮ ದ್ವೇಷಭಾವನೆಯನ್ನು ಬಿಟ್ಟು ನಿನಗೆ ಸ್ನೇಹ ದಾಯಕವಾಗಿ, ಸಹಾಯಕವಾಗಿ ಪರಿಣಮಿಸಬಹುದು. ನೀನು ಆ ಅಡ್ಡಿ ಆತಂಕಗಳಿಗೆ ಹೆದರಿದಷ್ಟೂ ಅವು ನಿನ್ನನ್ನು ಹೆಚ್ಚು ಹೆಚ್ಚು ಹೆದರಿಸುತ್ತವೆ. ಅವನ್ನು ಮೀರಲು ಅಸಾಧ್ಯವಾಗಿ ಪರಿಣಮಿಸುತ್ತದೆ.

೧೨೪. ಪೂರ್ವಜನ್ಮದ ಶುಭ ಸಂಸ್ಕಾರಗಳಿಲ್ಲದೆ ಶಾಸ್ತ್ರ ಮತ್ತು

ಗುರುವಿನ ಉಪದೇಶವನ್ನು ಸರಿಯಾಗಿ ಗ್ರಹಿಸಲಾಗುವುದಿಲ್ಲ. ಒಬ್ಬನು ಅತ್ಯಂತ ಬುದ್ಧಿಶಾಲಿಯಾಗಿರಬಹುದು. ಆತನಿಗೆ ತುಂಬಾ ವಿದ್ವತ್ತಿರಬಹುದು ಅಥವಾ ಮತ್ತಾವುದರಲ್ಲೋ ಆತನು ಅತಿ ಬುದ್ಧಿವಂತನಾಗಿರಬಹುದು. ಒಬ್ಬನಿಗೆ ಸಮಾಜದಲ್ಲಿ ಅತ್ಯಂತ ದೊಡ್ಡ ಪದವಿ, ಹೆಸರು, ಕೀರ್ತಿ, ಗೌರವಗಳೆಲ್ಲಾ ಇರಬಹುದು. ಒಬ್ಬನಿಗೆ ವ್ಯಾಪಾರದಲ್ಲಿ ತೀಕ್ಷ್ಣ ಬುದ್ಧಿ ಇದ್ದು ಅವನು ಲಕ್ಷಾಧೀಶ್ವರನಾಗಬಹುದು. ಆದರೆ ಸೂಕ್ಷ್ಮ ಪರಮಾರ್ಥತತ್ತ್ವ ವಿಷಯದಲ್ಲಿ ಅವನು ಒಂದು ಚಿಕ್ಕ ಮಗುವಿನಷ್ಟೇ ಅಜ್ಞಾನಿಯಾಗಿರಬಹುದು. ಧರ್ಮದ ಅತ್ಯಂತ ಸರಳವಾದ ವಿಷಯಗಳನ್ನು ಕೂಡ ಅರ್ಥಮಾಡಿಕೊಳ್ಳಲಾಗದಿರಬಹುದು. ಆದರೆ ಒಬ್ಬನು ಸತ್ಯ ನಿಷ್ಠನಾಗಿದ್ದರೆ ಶ್ರದ್ಧೆ, ಸರಳತೆ, ಪ್ರೇಮವನ್ನು ಹೊಂದಿದ್ದರೆ, ದೀನದಳಿತರಿಗೆ ವ್ಯಥಿತನಾದರೆ ಆತನು ದೇವರ ಕೃಪೆಯಿಂದ ಸಾಧು ಸಂತರಸಂಗ, ಸದ್ಗುರುವನ್ನು ಹೊಂದಿ ಅವರ ಅನುಗ್ರಹವನ್ನು ಪಡೆಯಬಹುದು. ಇದರ ಪರಿಣಾಮವಾಗಿ ಒಬ್ಬನು ಧರ್ಮದ ಗೂಢ ಸತ್ಯಗಳನ್ನು ಗ್ರಹಿಸಲು ಸಮರ್ಥನಾಗುವನು.

೧೫೫. ಪೂರ್ವಜನ್ಮದ ಒಳ್ಳೆಯ ಸಂಸ್ಕಾರಗಳು ಹೆಚ್ಚಾಗಿಲ್ಲದಿದ್ದರೂ ನಿರಂತರ ಪರಿಶ್ರಮ, ಆಸಕ್ತಿ ಮತ್ತು ಸಾಧನೆ ಇವುಗಳಿಂದಲೂ ಅನುಕೂಲವಾದವುಗಳನ್ನು ನಿರ್ಮಿಸಬಹುದು. ಸಾಧನೆಯಲ್ಲಿ ಪ್ರಚಂಡ ಶಕ್ತಿ ಇದೆ. ಶ್ರದ್ಧಾಸಕ್ತಿಯಿಂದ ಬಹಳಕಾಲ ನಿರರ್ಗಳವಾಗಿ ಸಾಧನೆ ಮಾಡಿದರೆ ಅದು ಸ್ಥಿರವಾಗಿ ಶಾಶ್ವತವಾಗುತ್ತದೆ. ನೀನೇನನ್ನು ಸಾಧನೆಮಾಡುವೆಯೋ ಅವೆಲ್ಲಾ ಕಾಲಕ್ರಮೇಣ ನಿನ್ನ ಎರಡನೆಯ ಸ್ವಭಾವವಾಗಿ ಮಾರ್ಪಡುತ್ತವೆ. ಆಗ ನಿನ್ನಿಚ್ಛೆಯನ್ನೀಡೇರಿಸಿಕೊಳ್ಳಲು ನೀನು ಹೆಚ್ಚು ಪರಿಶ್ರಮಪಡಬೇಕಾದ ಆವಶ್ಯಕತೆ ಇಲ್ಲ. ಅದು ತನಗೆ ತಾನೆ ನೆರವೇರುವುದು. ದೇವರ ಸ್ಮರಣೆ, ಪ್ರಾರ್ಥನೆ, ಜಪ ಮತ್ತು ಧ್ಯಾನ, ಇವನ್ನು ಬಿಡದೆ ಸಾಧನೆ ಮಾಡುತ್ತಾ ಬಂದರೆ ಅವು ನೀನು ಇತರ ಕೆಲಸಗಳಲ್ಲಿ ಮಗ್ನನಾಗಿದ್ದರೂ ಕೂಡ ಏನೊಂದೂ ಪ್ರಯತ್ನವಿಲ್ಲದೆ ಅಂತರಾಳದಿಂದ ಬರುತ್ತವೆ. ಉತ್ತರಮುಖಿಯ ಸೂಜಿಯಂತೆ ಮನಸ್ಸು ಏಕ ಮುಖವಾಗಿರುತ್ತದೆ. ಪ್ರಾಪಂಚಿಕವಸ್ತುಗಳ ಮೇಲಿನ ಮಮತೆ ಮಾಯವಾಗಿ ಅಪಾಯ, ಅನರ್ಥಗಳು ಸಂಭವಿಸಿದಾಗ ಮನಸ್ಸು ಅವುಗಳಿಂದ ಸ್ವಲ್ಪವೂ ಘಾಸಿಗೊಳ್ಳುವುದಿಲ್ಲ. ಮರಣ ಕಾಲದಲ್ಲಿ ಕೂಡ ಮನಸ್ಸು ಶಾಂತಿಯಿಂದ

ಕೂಡಿ ಭಗವಂತನಲ್ಲಿ ತನ್ಮಯವಾಗಿರುತ್ತದೆ. ಅಂತಹ ಮನುಷ್ಯನು ಪುನಃ ಪುನಃ ಹುಟ್ಟಿ ಸಾಯಬೇಕಾಗಿಲ್ಲ. ಅವನು ಪರಮಪದದಲ್ಲಿ ತಲ್ಲೀನ ನಾಗುವನು.

೧೨೬. ವಿವೇಕ ವೈರಾಗ್ಯ ಅನುರಾಗದ ಮೂಲಕ ಅನನ್ಯ ಭಾವ ದಿಂದ ಯಾರು ಭಗವಂತನನ್ನು ಹೃದಯಾಂತರಾಳದಲ್ಲಿ ಪ್ರತಿಷ್ಠಿಸುವನೋ ಅವನು ಭಗವಂತನನ್ನು ಒಳಗೆ, ಹೊರಗೆ, ಸರ್ವತ್ರ ಸಕಲ ವಸ್ತುವಿ ನಲ್ಲಿಯೂ ಕಾಣುತ್ತಾನೆ. ಅವನನ್ನು ಹೊಂದುತ್ತಾನೆ. ಅಂತಹ ಮನು ಷ್ಯನಿಗೆ ಈ ಭೂಮಂಡಲದಲ್ಲಿ ಪ್ರಾಪ್ತವಾಗಬೇಕಾಗಿರುವುದು, ಹಂಬಲಿಸು ವಂತಹುದು ಯಾವುದೂ ಇಲ್ಲ. ಆತನ ಜೀವನ ಆನಂದದಲ್ಲಿ ಮುಳಗಿರು ವುದು. ಇದೇ ಮಾನವ ಜೀವನದ ಗುರಿ. ಉಳಿದುದೆಲ್ಲಾ ಮನೋಭ್ರಾಂತಿ ಯಲ್ಲದೆ ಬೇರಲ್ಲ.

೧೨೭. ನಿನ್ನ ಕೈಲಾದಷ್ಟೂ ಜಪ ಮತ್ತು ಸಾಧನೆ ಮಾಡು. ಆದರೆ ನಿನ್ನ ಹೃದಯದಲ್ಲಿ ದೇವರನ್ನು ಕೇವಲ ಆತನ ಕೃಪೆಯಿಂದ ಮಾತ್ರ ಸಾಕ್ಷಾತ್ಕಾರ ಮಾಡಿಕೊಂಡು ಪಡೆಯಲು ಸಾಧ್ಯವೆಂಬುದನ್ನು ದೃಢ ವಾಗಿ ನಂಬು. ಸರಿಯಾಗಿ ಹೇಳುವುದಾದರೆ ಈ ಆಧ್ಯಾತ್ಮಿಕ ಸಾಧನೆ ಗಳೆಲ್ಲಾ ಕೇವಲ ನಿನ ರೆಕ್ಕೆಗಳ ಶಕ್ತಿಗುಂದಿಸುವುದಕ್ಕಾಗಿ. ಹಕ್ಕಿ ತನ್ನ ರೆಕ್ಕೆಗಳು ಸೋತುಹೋದಮೇಲೆ ವಿಶ್ರಾಂತಿಯನ್ನು ಆಶಿಸುತ್ತದೆ. ಸಮುದ್ರದಲ್ಲಿ ಬಹುದೂರ ಹಾರಿದ ನಂತರ ಹಕ್ಕಿಗೆ ಮತ್ತಾವ ವಿಶ್ರಾಂತಿ ಸ್ಥಳವೂ ಇಲ್ಲವೆಂದು ಗೊತ್ತಾಗಿ ಹಡಗಿನ ಪಟಸ್ತಂಭದಮೇಲೆ ಕುಳಿತು ಕೊಳ್ಳುತ್ತದೆ. ದೇವರೊಬ್ಬನೇ ಆಶ್ರಯದಾತನೆಂಬ ಅಚಲ ನಂಬಿಕೆ ಬೆಳೆಯುವವರೆಗೂ ಯಾರೂ ಆತನಲ್ಲಿ ಸಂಪೂರ್ಣ ಶರಣಾಗತರಾಗಲಾರರು. ಆತನೇ ಸರ್ವಸ್ವವೂ ಎಂದು ತಿಳಿಯಲಾರರು.

೧೨೮. ನಿಜವಾದ ಭಕ್ತನು ದೇವರ ವಿಷಯದಲ್ಲಿ ಎಂದಿಗೂ ವರ್ತ ಕನಂತೆ ವರ್ತಿಸುವುದಿಲ್ಲ. ಭಕ್ತಿ ಮತ್ತು ಮುಕ್ತಿಗಾಗಿ ಆತನೊಡನೆ ವ್ಯಾಪಾರ ಮಾಡುವ ಭಾವನೆ ಆತನ ಮನಸ್ಸಿಗೆಂದಿಗೂ ಹೊಳೆಯುವುದಿಲ್ಲ. ಆತನಿಗೆ ಭಗವಂತ ಅಹೇತುಕ ಕೃಪಾಸಿಂಧುಃ. ಸ್ವಭಾವತಃ, ಅವನು ತನ್ನ ಕೃಪಾ ದೃಷ್ಟಿಯನ್ನು ನಮ್ಮ ಮೇಲೆ ಬೀರುವನೆಂಬುದು ಗೊತ್ತು. ಹೇಗಾದರೂ ಪ್ರತಿಯೊಬ್ಬರೂ, ಕೊನೆಗೆ ಆ ಭಗವಂತನ ಕೃಪೆ ಇಲ್ಲದಿದ್ದಲ್ಲಿ ಎಷ್ಟೊಂದು ಸಾಧನೆ ಮಾಡಿದರೂ ನಿಷ್ಫಲ ಎಂಬ ಅನಿವಾರ್ಯ ನಿರ್ಣಯಕ್ಕೆ ಬರಬೇಕಾದರೆ

ನಮ್ಮ ಶಕ್ತಿ ಮೀರಿ ಕೈಲಾದಷ್ಟು ಸಾಧನೆ ಮಾಡಬೇಕು. ಅದಕ್ಕೆ ಭಕ್ತ ನೊಬ್ಬನು ಈ ರೀತಿ ಹಾಡಿದ್ದಾನೆ: "ತಾಯಿ, ನಿನ್ನ ಪ್ರಕೃತಿಯಿಂದಲೇ ನನ್ನನ್ನು ರಕ್ಷಿಸಬೇಕೆಂದು ನಿನ್ನ ಇಚ್ಛೆಯಿದ್ದಲ್ಲಿ ನನ್ನ ಮೇಲೆ ನಿನ್ನ ಕೃಪಾ ಕಟಾಕ್ಷವನ್ನು ಬೀರು. ಇಲ್ಲದೆ ಇದ್ದರೆ ಕೇವಲ ಜಪ ಸಾಧನೆಯಿಂದ ನಿನ್ನನ್ನು ನೋಡುವೆನೆಂಬ ಮಾತು ಪಿಶಾಚಿಯ ಸಂಗ ಮಾಡಿದಂತಾ ಗುತ್ತದೆ" ಸಂಗ ಎಂದರೆ ಮದುವೆ. ಪಿಶಾಚಿಗಳಿಗೆ ಎಂತಹ ಮದುವೆ? ಅದು ಅಸಂಬದ್ಧ. ಯಾರೂ ಯಾವಾಗಲೂ ಕೇವಲ ಸಾಧನೆಯಿಂದಲೇ ದೇವರನ್ನು ಪಡೆದಿಲ್ಲ, ಪಡೆಯುವುದೂ ಇಲ್ಲ. ತಿಳುವಳಿಕೆಯುಳ್ಳ ಮನು ಷ್ಯನು ಸಾಧನೆಯಿಂದ ಆತನನ್ನು ಪಡೆಯುತ್ತೇನೆಂಬ ಆಸೆಯಿಟ್ಟುಕೊಳ್ಳು ವುದು, "ಸಮುದ್ರವನ್ನು ಈಜಿ ಹಾಯುತ್ತೇನೆ" ಎಂಬಂತೆ!

೧೨೯. ಹಾಗಾದರೆ ಭಗವತ್ಕೃಪೆ ತಾನಾಗಿ ಇಳಿದು ಬರುವವರೆಗೂ ಸಾಧನೆ ಮಾಡದೆ ಆತನನ್ನು ನೋಡುವ ಆಸೆಯಿಂದ ಸುಮ್ಮನೆ ಇರಬೇಕೆ? ದೇವರಿಗಾಗಿ ಬಾಯಾರಿಕೆಯಿಂದ ಪೀಡಿತನಾಗಿ ಹಂಬಲಿಸುತ್ತಿರುವನು ಸುಮ್ಮನೆ ಕೈಜೋಡಿಸಿಕೊಂಡು ಜೀವವನ್ನು ಹಿಡಿದುಕೊಂಡು ಸಹನೆಯಿಂದ ಅನವರತವೂ ಕುಳಿತುಕೊಳ್ಳಬೇಕೆ? ಆತನ ಅವಸ್ಥೆ ನಿಜವಾಗಿ ಒಬ್ಬ ಸಾಧಕನು ಹಾಡಿರುವಂತೆ· "ನನ್ನ ಮನಸ್ಸು ಅರ್ಥಮಾಡಿಕೊಳ್ಳುತ್ತದೆ. ಆದರೆ ಹೃದಯ ಅರ್ಥಮಾಡಿಕೊಳ್ಳುತ್ತಿಲ್ಲ. ಒಬ್ಬ ಕುಳ್ಳ ಚಂದ್ರನನ್ನು ಹಿಡಿದುಕೊಳ್ಳುವುದಕ್ಕಾಗಿ ಯತ್ನಿಸಿದಂತೆ ಇದೆ." ಸಾಧಕನಿಗೆ "ಅಸಾಧ್ಯ" ಎಂಬ ಮಾತು ಇಲ್ಲ. ದೇವರು ಯಾವುದು ಅಸಾಧ್ಯವೊ ಅದನ್ನು ಸಾಧ್ಯ ಮಾಡಬಲ್ಲ. ಆತನಿಚ್ಛೆಪಟ್ಟರೆ ಒಂದು ಸೂಜಿಯ ಕಣ್ಣಿನ ಮೂಲಕ ಒಂಟೆ ಯನ್ನು ತೂರಿಸಬಲ್ಲನೆಂದು ಭಕ್ತನಿಗೆ ಗೊತ್ತು.

೧೩೦. ನಿಜವಾದ ಭಕ್ತನ, ನಿಜವಾದ ಸಾಧಕನ ಸ್ಫೂರ್ತಿ ಹೀಗಿದೆ: "ನನಗೆ ಜಪ ಮತ್ತು ಧ್ಯಾನವನ್ನು ಮಾಡುವುದರಿಂದ ಆನಂದ ಸಿಗುತ್ತದೆ. ಅವುಗಳನ್ನು ಮಾಡದೆ ಬಿಡಲಾರೆ. ನನ್ನ ಹೃದಯವನ್ನು ಸಮಾಧಾನ ಪಡಿಸಲು ಮತ್ತಾವ ಹಾದಿಯೂ ಇಲ್ಲದುದರಿಂದ ನಾನು ಸಾಧನೆ ಮಾಡುತ್ತೇನೆ. ಜಪ ಮತ್ತು ಧ್ಯಾನ ನನ್ನ ಜೀವದ ಉಸಿರಾಗಿರು ವುದರಿಂದ ನಾನು ಅವುಗಳನ್ನು ಮಾಡುತ್ತೇನೆ. ಅದಿಲ್ಲದೆ ನಾನು ಜೀವಿಸ ಲಾರೆ. ದೇವರೇ ನನ್ನ ಜೀವದ ಜೀವ, ಆತ್ಮದ ಆತ್ಮ. ಆತನನ್ನು ಹೇಗಾ ದರೂ ಸಾಕ್ಷಾತ್ಕರಿಸಿಕೊಳ್ಳಬೇಕು. ಆತನನ್ನು ನಾನು ಕಾಣಲಾರದೆ

ಹೋದರೆ ನಾನು ಹುಚ್ಚನಾಗುವೆನು, ಸಾಯುವೆನು. ಈ ಜನ್ಮ ನಿರರ್ಥಕ.''
ಇಂತಹ ವ್ಯಾಕುಲ, ದೃಢಸಂಕಲ್ಪ ಇದ್ದರೆ ದೇವರು ಖಂಡಿತ ಭಕ್ತನನ್ನು ಅನುಗ್ರಹಿಸುವನು. ಏಕೆಂದರೆ ಅವನು ಅನಂತ ಕೃಪಾಸಾಗರ. ಯಾರು ನಿಷ್ಕಾಪಟ್ಯದಿಂದ, ಉತ್ಕಂಠಿತರಾಗಿ ತನ್ನ ದರ್ಶನಕ್ಕೆ ಆತುರರಾಗಿದ್ದಾರೊ, ಯಾರು ತನಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ್ದಾರೋ, ಕೇವಲ ಆತನನ್ನೇ ಮರೆಹೊಕ್ಕಿರುವರೊ ಅಂತಹವರಿಗೆ ತಪ್ಪದೆ ಆತ ದರ್ಶನವೀಯುವನು.

೧೩೧. ಆದರೆ ಆ ದಾರುಣ ವ್ಯಾಕುಲತೆ, ಆತನೊಬ್ಬನೇ ನಮ್ಮ ಆಶ್ರಯದಾತನೆಂಬ ಭಾವನೆ, ಸುಲಭವಾಗಿ ಬರುವುದೆ? ಯಾರು ಅನೇಕ ಜನ್ಮಾಂತರಗಳಿಂದಲೂ ಈ ಧ್ಯೇಯ ಪ್ರಾಪ್ತಿಗಾಗಿ ಸಾಧನೆಯಲ್ಲೇ ನಿರತ ನಾಗಿ ಈಗ ಕಡೆಯಜನ್ಮ ತಾಳಿರುವನೋ ಅಂತಹವನಿಗೆ ಮಾತ್ರ ಈ ಭಾವನೆ ಬರುತ್ತದೆ. ಶ್ರೀ ರಾಮಕೃಷ್ಣರ ಪ್ರಖ್ಯಾತ ಗೃಹಸ್ಥಭಕ್ತರಾದ ನಾಗ ಮಹಾಶಯರ ಜೀವನದಲ್ಲಿ ಈ ಅಪೂರ್ವಲಕ್ಷಣ ಅಖಂಡ ಕಾಂತಿ ಯಿಂದ ಪ್ರಕಾಶಿಸಿತು. ಅನವರತವೂ ದೇಹಭಾವನೆಯಿಲ್ಲದ ಎಂತಹ ದೈವೋನ್ಮಾದ ಆತನನ್ನು ಸಂಪೂರ್ಣವಾಗಿ ಆವರಿಸಿತ್ತು! ದೈವಸೃಷ್ಟಿಯ ಜೀವಿಗಳಲ್ಲೆಲ್ಲಾ ತಾನೇ ಅತ್ಯಂತ ಕೆಳಗಿನವನೆಂಬ ಎಂತಹ ನಮ್ರತೆ! ದೇವರ ದರ್ಶನಕ್ಕಾಗಿ ಎಂತಹ ತೀವ್ರ ಹಂಬಲಿಕೆ ಆತನ ಆತ್ಮವನ್ನು ಸುಡು ತ್ತಿತ್ತು; ಆ ಪಂಚಭೌತಿಕ ದೇಹದಲ್ಲಿ ಹೇಗೆ ಉರಿಯುತ್ತಿತ್ತು! ಯಾರು ಆತನನ್ನು ಸಂದರ್ಶಿಸಿಲ್ಲವೋ ಅವರಿಗೆ ಆತನ ಅಪೂರ್ವ ವ್ಯಕ್ತಿತ್ವವನ್ನು ಊಹಿಸಲೂ ಅಸಾಧ್ಯ. ಅದ್ಭುತ ಜೀವನ! ಅದ್ಭುತ ನಿದರ್ಶನ!

೧೩೨. ಮನಸ್ಸು ಶುದ್ಧವಾಗಿ, ಸ್ಥಿರವಾಗಿ, ಕಲಂಕರಹಿತವಾಗುವ ವರೆಗೂ ದೇವರನ್ನು ನೋಡಲಾಗುವುದಿಲ್ಲ. ಸರೋವರದ ನೀರು ಸ್ಥಿರವಾಗಿ ಸ್ತಬ್ಧವಾದ ಹೊರತು ಅದು ಯಾವುದನ್ನೂ ಪ್ರತಿಬಿಂಬಿಸುವುದಿಲ್ಲ. ಅಥವಾ ಮಬ್ಬಾಗಿ ಪ್ರತಿಬಿಂಬಿಸಬಹುದು. ಕನ್ನಡಿ ಧೂಳಿನಿಂದ ಕೂಡಿದ್ದರೆ ಯಾವುದನ್ನೂ ಪ್ರತಿಬಿಂಬಿಸುವುದಿಲ್ಲ ಅಥವಾ ಅಸ್ಪಷ್ಟವಾಗಿ ಪ್ರತಿಬಿಂಬಿಸು ವುದು. ಆದಕಾರಣ ಮನಸ್ಸಿನ ಪವಿತ್ರತೆಗೆ ಪುನಃಪುನಃ ಸಾಧನೆ, ತ್ಯಾಗವೇ ಸರಿಯಾದ ಮಾರ್ಗ. ಯಾವುದನ್ನು ಅತಿಕಷ್ಟ ಅಸಾಧ್ಯ ವೆಂದುಕೊಂಡಿದ್ದರೊ ಅದು ಸತತ ಸಾಧನೆಯಿಂದ ಸುಲಭಸಾಧ್ಯವಾಗಿ ಪರಿಣಮಿಸುವುದು. ಯಾವುದನ್ನು ಕ್ರಮವಾಗಿ ಸಾಧನೆ ಮಾಡುವೆವೋ ಅದು ಕ್ರಮೇಣ ನಮ್ಮ ಸ್ವಭಾವದ ಒಂದು ಭಾಗವಾಗಿ ಪರಿಣಮಿಸುವುದು.

ಇದರೊಡನೆಯೇ ತ್ಯಾಗ ಸ್ವಭಾವವನ್ನೂ ಅಭ್ಯಾಸಮಾಡಬೇಕು. "ಪ್ರತಿಯೊಂದೂ ಅಸ್ಥಿರ, ಮಿಥ್ಯೆ, ದೇವರೊಬ್ಬನೇ ಸತ್ಯ ಮತ್ತು ಶಾಶ್ವತ"— ಇದನ್ನು ಅರಿತು ಯಾರು ತ್ರಿಕರಣಪೂರ್ವಕ ಆತನಿಗೆ ಶರಣಾಗುವರೋ ಅಂತಹವರ ಹೃದಯದಲ್ಲಿ ಪವಿತ್ರ ಪ್ರೇಮ ಉದ್ಭವಿಸುವುದು. ಅದೊಂದು ಪ್ರಾಪ್ತವಾದಮೇಲೆ ಹುಡುಕಲು ಅಥವಾ ಸ್ವಾಧೀನಪಡಿಸಿಕೊಳ್ಳಲು ಮತ್ತೇನಿದೆ? "ದೇವರು ಅನಿರ್ವಚನೀಯ ಪ್ರೇಮ ಸ್ವರೂಪ." ಮನೋವಾಕ್ಕಾಯಗಳಿಗೆ ಮೀರಿದ ಆ ಪ್ರೇಮ ಘನೀಭೂತವಾಗಿ ಎಂದು ಹೃದಯದಲ್ಲಿ ಆವಿರ್ಭವಿಸುವುದೋ ಆಗ ಅದು ಪ್ರೇಮ ಮಯ, ಪ್ರೇಮಘನ ಭಗವಂತನ ಸ್ವರೂಪವಾಗಿ ಮಾರ್ಪಟ್ಟು ಪ್ರಕಾಶಿಸುವುದು.

೧೩೩. ನಿನ್ನ ವರಮಾನ ಎಷ್ಟೇ ಇರಲಿ, ಪ್ರತಿತಿಂಗಳೂ ಅದರಲ್ಲಿ ಸ್ವಲ್ಪ ಭಾಗವನ್ನು ಸಂಗ್ರಹಿಸಲು ಯತ್ನಿಸು. ಪರಮಹಂಸರು ಗೃಹಸ್ಥರಾದವರು ಸಂಗ್ರಹಿಸುವುದು ಆವಶ್ಯಕವೆಂದು ಹೇಳುತ್ತಿದ್ದರು. ಮುಂದೆ ಅದು ಬಹಳ ಉಪಯೋಗಕ್ಕೆ ಬರುತ್ತದೆ. ಏಕೆಂದರೆ ಆರೋಗ್ಯ, ಕೆಲಸ, ವ್ಯಾಪಾರ, ಐಶ್ವರ್ಯ, ಬಂಧು, ಬಳಗ ಯಾವುದೂ ಶಾಶ್ವತವಲ್ಲ. ಯೌವನದಲ್ಲಾಗಲಿ, ಮಧ್ಯವಯಸ್ಸಿನಲ್ಲಾಗಲಿ ವಿಷಯಸುಖದ ಆಸೆಯಿಂದ ಭ್ರಾಂತನಾದ ಮನುಷ್ಯನು ಕೆಟ್ಟ ಸಹವಾಸ ಅಥವಾ ಕೆಟ್ಟ ಪ್ರವೃತ್ತಿಗಳಿಗೆ ವಶನಾಗಿ ಮುಂದಿನ ಯೋಚನೆಯಿಲ್ಲದೆ ತಾನು ಸಂಪಾದಿಸಿದಷ್ಟನ್ನು ಅಥವಾ ಅದಕ್ಕಿಂತ ಹೆಚ್ಚಾಗಿ ಖರ್ಚುಮಾಡಿದರೆ ಆತನು ಕೊನೆಮೊದಲಿಲ್ಲದ ತಾಪತ್ರಯಕ್ಕೆ ಖಂಡಿತವಾಗಿ ಗುರಿಯಾಗುತ್ತಾನೆ. ಅಪಾಯ ಕೋಟಲೆಗಳು, ರೋಗ ರುಜಿನ, ಚಿಂತೆ ವ್ಯಾಕುಲಗಳು ಯಾವಾಗಲೂ ಈ ಪ್ರಪಂಚದಲ್ಲಿ ಇದ್ದೇ ಇರುತ್ತವೆ. ಮುದುಕರಾದಾಗ ಖಾಯಿಲೆ, ಮುಪ್ಪಿಗೆ ತುತ್ತಾಗಿ ಕೆಲಸಮಾಡುವ ಸಾಮರ್ಥ್ಯವನ್ನು ಬಹುಬೇಗ ಕಳೆದುಕೊಳ್ಳುತ್ತೇವೆ. ಸ್ವಲ್ಪ ಉಳಿಸಿದ್ದರೆ ಅಂಥವನು ಕಷ್ಟಗಳಿಗೆ ಕುಸಿಯಬೇಕಾಗಿಲ್ಲ; ನರಳಿ ಗೋಳಾಡಬೇಕಾಗಿಲ್ಲ. ತನ್ನ ಉಳಿದ ದಿನಗಳನ್ನು ಸ್ವತಂತ್ರನಾಗಿ ಶಾಂತಿಯಿಂದ ಭಗವದ್ಧ್ಯಾನದಲ್ಲಿ ಕಳೆಯಬಹುದು.

೧೩೪. ಒಬ್ಬ ಸಾಧಕ "ಓ! ತಾಯಿ, ನೀನು ನನ್ನನ್ನು ಯಾವ ಸ್ಥಿತಿಯಲ್ಲಿ ಬೇಕಾದರೂ ಇಡು. ನಾನು ನಿನ್ನನ್ನು ಮರೆಯದಿದ್ದಲ್ಲಿ ಅದೇ ನನಗೆ ನಿಜವಾದ ಆಶೀರ್ವಾದ" ಎಂದು ಹಾಡಿದನು. ಅವನು ಮಂಗಳಮಯ, ಸರ್ವಾಂತರ್ಯಾಮಿ. ಆತನಿಗೆ ಯಾರಿಗೆ ಯಾವುದು ಒಳ್ಳೆಯ

ದೆಂಬುದು ಗೊತ್ತಿದೆ. ಅಂತೆಯೇ ಆತನು ಎಲ್ಲರಿಗೂ ಒಳ್ಳೆಯದಾಗುವ ರೀತಿಯಲ್ಲಿ ವಿಭಾಗಿಸುತ್ತಾನೆ. ಏಕೆಂದರೆ ಅವನು ಈ ಭೂಮಂಡಲ ವನ್ನೆಲ್ಲಾ ನೋಡಿಕೊಳ್ಳಬೇಕು. ಆತನು ಒಬ್ಬನಿಗೆ ಕೇಡನ್ನು ಮಾಡಿ ಅದರಿಂದ ಮತ್ತೊಬ್ಬನಿಗೆ ಒಳ್ಳೆಯದನ್ನು ಮಾಡುವುದಿಲ್ಲವೆಂಬುದನ್ನು ಎಲ್ಲರೂ ಖಚಿತವಾಗಿ ತಿಳಿದುಕೊಳ್ಳಬೇಕು. ನಾವು ಕೇವಲ "ನಾವು, ನಮ್ಮದು" ಎಂಬ ಚಿಂತೆಯಲ್ಲೇ ತೊಡಗಿ ಕಿರಿಯಕೋಣೆಯಲ್ಲಿ ಬಂಧಿತ ರಾಗಿ ಕೇವಲ ನಾವು, ನಮ್ಮ ಬಂಧುಮಿತ್ರರೂ ಮಾತ್ರ ಸುಖವಾಗಿರ ಬೇಕೆಂದು ಇಚ್ಛಿಸುತ್ತೇವೆ. ಮತ್ತೊಬ್ಬರಿಗೆ ಹಾನಿಯುಂಟಾದರೂ ಅದನ್ನು ಹೊಂದಲು ನಾವು ಯತ್ನಿಸುತ್ತೇವೆ. ದುಃಖವಿಲ್ಲದ ಬರೀ ಸುಖ ಈ ಪ್ರಪಂಚದಲ್ಲಿಲ್ಲವೇ ಇಲ್ಲ. ಎರಡೂ ಒಂದರೊಳಗೊಂದು ಮಿಳಿತ ವಾಗಿವೆ. ನಿನಗೆ ಒಂದು ಬೇಕಾದರೆ ಮತ್ತೊಂದು ತನಗೆ ತಾನೇ ಬರು ವುದು. ಆದ್ದರಿಂದ ನಾವು ಇಚ್ಛೆಪಟ್ಟದ್ದನ್ನು ಹೊಂದಬೇಕೆಂದು ಆಸೆ ಪಡುವುದರಿಂದ ಇನ್ನೂ ಅವ್ಯವಸ್ಥೆಗೊಳಿಸುತ್ತೇವೆ. ಭಗವಂತನಿಗೆ ನಮಗಿಂತ ಹೆಚ್ಚಾಗಿ ನಮಗೆ ಯಾವುದು ಒಳ್ಳೆಯದೆಂಬುದು ಗೊತ್ತಿದೆ. ಆತನು ಸರ್ವಜ್ಞ ನಲ್ಲವೆ? ಯಾರು ದೇವರು ತನಗೇನು ಕೊಟ್ಟದ್ದಾನೊ ಅದರಲ್ಲಿ ತೃಪ್ತಿ ಹೊಂದಿ, ಕೇವಲ ಆತನಲ್ಲಿ ಮರೆಹೊಕ್ಕು, ಆತನಲ್ಲೇ ಪೂರ್ಣಬರವಸೆ ಯಿಟ್ಟು ಈ ಪ್ರಪಂಚದಲ್ಲಿ ಬಾಳುತ್ತಾನೊ, ಅಂತಹವನ ಮನಃಶಾಂತಿಯು ಸುಖದುಃಖಗಳಿಂದ ಕ್ಷೋಭೆಗೊಳ್ಳುವುದಿಲ್ಲ.

೧೩೫. "ವನೆ ಅಪಿದೋಷಾಃ ಪ್ರಭವನ್ತಿ ರಾಗಿಣಾಂ,
ಗೃಹೇ ಅಪಿ ಪಂಚೇಂದ್ರಿಯ ನಿಗ್ರಹಸ್ತಪಃ ।
ಅಕುತ್ಸಿತೇ ಕರ್ಮಣಿ ಯಃ ಪ್ರವರ್ತತೆ,
ನಿವೃತ್ತಿರಾಗಸ್ಯ ಗೃಹಂ ತಪೋವನಂ ॥

(ಹಿತೋಪದೇಶ, ಚತುರ್ಥ ಅಧ್ಯಾಯ.)

"ಪ್ರಾಪಂಚಿಕನ ಮನಸ್ಸು ಕಾಡಿನಲ್ಲಿಯೂ ವಿಕಾರಕ್ಕೆ ಒಳಗಾಗು ವುದು. ಆದರೆ ಯಾರು ಪಂಚೇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಂಡು ಒಳ್ಳೆಯ ಕೆಲಸದಲ್ಲಿ ತೊಡಗಿರುವನೋ ಅವನು ತನ್ನ ಮನೆಯಲ್ಲೇ ಇದ್ದರೂ ಅದೇ ತಪಸ್ಸಾಗಿ ಪರಿಣಮಿಸುವುದು. ನಿಸ್ಸಂಗಿಗೆ, ಮನೆ ತಪೋ ವನ ಎರಡೂ ಒಂದೇ" ಎಂದು ಹಿತೋಪದೇಶ ಹೇಳುವುದು. ಚಿತ್ತ ಸ್ವಾಧೀನವಿಲ್ಲದೆ ಎಲ್ಲಿಗೆ ಹೋದರೂ ಏನನ್ನು ಮಾಡಿದರೂ ಅನಿವಾರ್ಯವಾಗಿ

ನೀನು ಸಂಕಟಪಟ್ಟೇತೀರಬೇಕು. ಅದರಿಂದ ಬಿಡುಗಡೆಇಲ್ಲ. ಅದೂ ಅಲ್ಲದೆ ನೀನು ಒಮ್ಮೆಯೂ ಯೋಚಿಸದ ಹೊಸ ಹೊಸ ಬಂಧನಗಳ ಬಲೆಗೂ ಬೀಳುವೆ. ಆದರೆ ಯಾರು ಸಾಧನೆಯಿಂದ ತಮ್ಮ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಬಲ್ಲರೋ ಯಾರು ಪ್ರಪಂಚದಲ್ಲಿದ್ದರೂ ವಸ್ತುಗಳ ಮೋಹದಿಂದ ಬಿಡುಗಡೆ ಹೊಂದಿದ್ದಾರೊ ಅಂತಹವರಿಗೆ ಮನೆಯಾಗಲಿ, ಅರಣ್ಯವಾಗಲಿ ಎಲ್ಲಾ ಒಂದೇ. ಅಂತಹವನು ಎಲ್ಲಿ ವಾಸಿಸಿದರೂ, ಏನನ್ನು ಮಾಡಿದರೂ ಅವನು ನಿತ್ಯಮುಕ್ತ, ನಿತ್ಯಾನಂದದಲ್ಲಿ ತಲ್ಲೀನನಾಗಿರುವನು.

೧೩೬. ಸಾಧಾರಣಮನುಷ್ಯ ಒಂದು ಗಳಿಗೆಯೂ ಮಾತನಾಡದೆ ಇರಲಾರ. ಆತನಿಗೆ ಮಾತನಾಡಲು ಯಾರೂ ಸಿಗದಿದ್ದಲ್ಲಿ ತನ್ನೊಳಗೆ ತಾನು ಮಾತನಾಡಿಕೊಳ್ಳುವುದು ನಿಶ್ಚಯ. ಯೋಚನೆ ಎಂದರೆ ಮತ್ತೇನು? ಅದು ನಮ್ಮೊಳಗೆ ಮಾತನಾಡಿಕೊಳ್ಳುವುದೇ ಆಗಿದೆ. ವಸ್ತುಸ್ಥಿತಿ ಹೀಗಿದ್ದಮೇಲೆ ವ್ಯರ್ಥವಾಗಿ ಮೂರ್ಖನಂತೆ ಕಾಡುಹರಟೆಯಲ್ಲಿ ತೊಡಗುವುದಕ್ಕಿಂತ ದೇವರ ಸ್ಮರಣೆಮಾಡಿ ಆದಷ್ಟು ಅವನ ವಿಷಯವನ್ನೇ ಕುರಿತು ಆಲೋಚಿಸುವುದು ಒಳ್ಳೆಯದಲ್ಲವೆ? ಕೆಲಸ ಅಥವಾ ವ್ಯಾಪಾರ ಮಾಡುತ್ತಿರುವಾಗ ಅನೇಕ ವಿಧ ಮಾತುಕಥೆಗಳಲ್ಲಿ ತೊಡಗಬೇಕಾಗುವುದು ಅನಿವಾರ್ಯ. ಆದರೆ ನೀನೊಬ್ಬನೇ ಇದ್ದಾಗ ಅಥವಾ ಏನೂ ಕೆಲಸವಿಲ್ಲದೆ ಇದ್ದಾಗ ಕೆಲಸಕ್ಕೆ ಬಾರದ ಇತರ ಯೋಚನೆ ಮಾಡುವುದಕ್ಕಿಂತ, ದೇವರನ್ನು ನೆನೆದು ಆತನ ಚಿಂತನೆಯಲ್ಲಿ ತೊಡಗುವುದನ್ನು ಅಭ್ಯಾಸಮಾಡುವುದು ನಿಜವಾಗಿಯೂ ಒಳ್ಳೆಯದು. ಸದಾಕಾಲ ಜಪಮಾಡಿ ಉಳಿದೆಲ್ಲಾ ಯೋಚನೆಗಳನ್ನೂ ಹೊರದೂಡುವುದು ಆವಶ್ಯಕ. ಜಪವೇ ನಿರಂತರ ನಿರರ್ಗಳ ಭಗವನ್ನಾಮೋಚ್ಚಾರಣೆ.

೧೩೭. ಜಪವನ್ನು ಮಾಡುತ್ತಿರುವಾಗ ದೇವರನ್ನು ಮಾತ್ರ ಆಲೋಚಿಸಬೇಕು. ಆತನ ನಾಮ ಮತ್ತು ಅದು ಸೂಚಿಸುವ ಆಕಾರ ಎರಡೂ ಒಂದೇ ಎಂದು ಆಲೋಚಿಸು. ನಾಮವೂ, ನಾಮದಿಂದ ಸೂಚಿಸಲ್ಪಟ್ಟ ವಸ್ತುವೂ ಒಂದೇ ಆಗಿದೆ. ಅಂದರೆ ನೀನು ನಾಮವನ್ನು ಉಚ್ಚರಿಸಿದಾಗ ತಕ್ಷಣ ಅದು ಯಾರ ಹೆಸರೋ ಆ ವ್ಯಕ್ತಿಯನ್ನು ಯೋಚಿಸಿದ ಹಾಗಾಗುತ್ತದೆ. ನೀನು ಯಾರನ್ನಾದರೂ ಹೆಸರುಹಿಡಿದು ಕೂಗಿದರೆ ನಿನ್ನ ಮನಸ್ಸಿಗೆ ಆತನ ರೂಪು ಅದೇ ಕಾಲದಲ್ಲೇ ವ್ಯಕ್ತವಾಗುವುದು. ಆತನು ನಿನ್ನ ಕರೆಗೆ ಉತ್ತರ ಕೊಡುವನು ಅಥವಾ ಹತ್ತಿರ ಬರುವನು.

ಮನಸ್ಸು ಭಗವಂತನಲ್ಲೇ ನೆಟ್ಟಿದ್ದರೆ ಜಪಕೂಡ ಹೀಗೆಯೇ! ಆ ಕರೆ ಅವನಿಗೆ ಕೇಳಿಸುವುದು, ಅವನು ಅದನ್ನು ಗಮನಿಸುವನು ಎಂಬುದರಲ್ಲಿ ಮಾತ್ರ ದೃಢ ನಂಬಿಕೆ ಇರಲಿ. ನಿಷ್ಕಪಟ ಉತ್ಕಂಠಿತ ಪ್ರಾರ್ಥನೆ ಕೂಡ ಹೀಗೆಯೆ. ಜಪವನ್ನು ಪದೇ ಪದೆ ಮಾಡುವ ಅಭ್ಯಾಸವನ್ನಿಟ್ಟದ್ದರೆ ಈ ಬಗೆಯ ನಿಶ್ಚಲತೆ ಮತ್ತು ದೇವರ ಸಾಮಿಪ್ಯ ಮನೋಭಾವ ದೃಢವಾಗಿ ಸ್ಥಾಪಿತವಾಗಿ, ಮನಸ್ಸು ಆತನಲ್ಲೇ ತಲ್ಲೀನವಾಗಿ ಆತನ ಸಾನ್ನಿಧ್ಯ ಸ್ಪಷ್ಟವಾಗಿ ಅರಿವಾಗುವುದು. ಆದ್ದರಿಂದಲೇ "ಜಪಾತ್ ಸಿದ್ಧಿಃ" ಎಂದು ಶಾಸ್ತ್ರ ಸಾರುವುದು.

೧೩೮. ಯೋಗಿಗಳು ಮನುಷ್ಯದೇಹದಲ್ಲಿ ಏಳು ಪದ್ಮಗಳು ಅಥವಾ ಸ್ನಾಯು ಕೇಂದ್ರಗಳು ಇವೆ ಎನ್ನುತ್ತಾರೆ. ಕೆಳಭಾಗದಲ್ಲಿ ಆಸನದ ಹತ್ತಿರ ಇರುವುದು, ನಾಲ್ಕು ದಳ ಪದ್ಮದ ಮೂಲಾಧಾರ. ಆರು ದಳದ ಪದ್ಮ ಸ್ವಾಧಿಷ್ಠಾನ, ಜನನೇಂದ್ರಿಯುಗಳ ಮೂಲದಲ್ಲಿದೆ. ಹತ್ತು ದಳದ ಪದ್ಮ ಮಣಿಪುರ ನಾಭಿಯ ಹಿಂಭಾಗದಲ್ಲೂ, ಹನ್ನೆರಡು ದಳದ ಅನಾಹತ ಹೃದಯದಲ್ಲೂ, ಹದಿನಾರು ದಳದ ವಿಶುದ್ಧ ಕೊರಳಿನ ಹಿಂದೆಯೂ, ಎರಡು ದಳದ ಆಜ್ಞಾ ಭ್ರೂಮಧ್ಯದಲ್ಲೂ, ಸಹಸ್ರದಳದ ಪದ್ಮ ಸಹಸ್ರಾರ ಮೆದುಳಿನ ಕೊನೆಯಲ್ಲೂ ಇದೆ. ಇದಲ್ಲದೆ ಬೆನ್ನುಮೂಳೆಯ ಎಡಗಡೆ, ಬಲಗಡೆ ಮತ್ತು ಮಧ್ಯದಲ್ಲಿ ಸರಿಯಾಗಿ ಇಡ, ಪಿಂಗಳ ಮತ್ತು ಸುಷುಮ್ನಾ ಎಂಬ ಹೆಸರಿನ ನರಗಳಿವೆ. ಸುಷುಮ್ನಾ ಶಕ್ತಿ ಈ ಆರು ಪದ್ಮಗಳ ಕೇಂದ್ರಗಳನ್ನೂ ಒಂದಾದ ಮೇಲೆ ಒಂದರಂತೆ ಹಾದು ಸಹಸ್ರಾರದಲ್ಲಿ ಬ್ರಹ್ಮನ ಸ್ಥಾನದಲ್ಲಿ ಮುಕ್ತಾಯವಾಗುತ್ತದೆ. ಆದರೆ ಸುಷುಮ್ನಾ ಕಾಲುವೆಯು ಕುಲಕುಂಡಲಿನಿ ಜಾಗ್ರತವಾಗಿರುವವರೆಗೂ ಮುಚ್ಚಿಹೋಗಿರುವುದು. ಆತ್ಮಜ್ಞಾನಸಾರ ಕುಲಕುಂಡಲಿನಿ. ಅದೇ ಚೇತನಾಸಾರ, ಬ್ರಹ್ಮ ಸ್ವರೂಪ. ಎಲ್ಲಾ ಮನುಷ್ಯರಲ್ಲೂ ಈ ಕುಲಕುಂಡಲಿನಿ ಅಚೇತನವಾಗಿ, ಅವ್ಯಕ್ತವಾಗಿ, ನಿದ್ರಿಸುತ್ತಿರುವ ಸರ್ಪದಂತೆ ಸುತ್ತಿಕೊಂಡು ಮೂಲಾಧಾರದಲ್ಲಿ ಪದ್ಮದಲ್ಲಿ ಮಲಗಿರುವುದು. ಯಾವಾಗ ಮೂಲಾಧಾರದಲ್ಲಿರುವ ಈ ಶಕ್ತಿ, ಯೋಗ, ಧ್ಯಾನ ಸಾಧನೆಯಿಂದ ಜಾಗ್ರತವಾಗಿ ಸುಷುಮ್ನಾ ಕಾಲುವೆಯ ಮೂಲಕ ಹರಿದು ಕ್ರಮೇಣ ಮೂಲಾಧಾರ, ಸ್ವಾಧಿಷ್ಠಾನ, ಮಣಿಪುರ, ಅನಾಹತ, ವಿಶುದ್ಧ, ಆಜ್ಞಾ ಕೇಂದ್ರಗಳನ್ನೆಲ್ಲಾ ಭೇದಿಸಿಕೊಂಡು ಮುಂದೆ ಹೋಗಿ ಕೊನೆಗೆ ಪರಶಿವ ಅಥವಾ

ಪರಮಾತ್ಮನಲ್ಲಿ ಐಕ್ಯವಾಗುವುದೊ ಆಗ ಇದರ ಐಕ್ಯತೆಯಿಂದ ಇಂದ್ರಿಯಾತೀತ ಆನಂದಾಮೃತ ಹರಿಯುವುದು. ಅದನ್ನು ಪಾನಮಾಡಿದ ಮಾನವನು ಸಮಾಧಿಯಲ್ಲಿ ತಲ್ಲೀನನಾಗುವನು. ಆಗಲೇ ಜೀವಾತ್ಮನಿಗೆ ಪರಮಾತ್ಮನ ಜ್ಞಾನ ಪ್ರಾಪ್ತವಾಗಿ ಮುಕ್ತಿಯನ್ನು ಪಡೆಯುತ್ತಾನೆ. ಜತೆಗೆ ಸರ್ವವ್ಯಾಪಿಯಾದ ಸ್ವಯಂಪ್ರಕಾಶಮಾನವಾದ ಜ್ಯೋತಿ ಅಥವಾ ಇಷ್ಟದೇವತೆಯ ತೇಜೋಮಯ ದರ್ಶನಗಳೂ ಅನೇಕ ಅದ್ಭುತವಾದ ಆಧ್ಯಾತ್ಮಿಕ ಅನುಭವಗಳೂ ಪ್ರಾಪ್ತವಾಗಬಹುದು. ಅನೇಕವೇಳೆ ಈ ಕುಲಕುಂಡಲಿನಿ ಶಕ್ತಿ, ಗುರು ಮತ್ತು ಭಗವಂತನ ಕೃಪೆಯಿಂದ ಕಳೆದ ಜನ್ಮದ ಸತ್ಕರ್ಮದ ಫಲವಾಗಿ, ಸಾಧನೆಯ ಫಲವಾಗಿ, ನಿರಾಯಾಸವಾಗಿ ಜಾಗ್ರತಗೊಳ್ಳಬಹುದು. ಪರಮಹಂಸರು, "ನಿರ್ವಿಕಲ್ಪ ಸಮಾಧಿಯಲ್ಲಿ ಜೀವಾತ್ಮ ಪರಮಾತ್ಮನಲ್ಲಿ ಲೀನನಾಗುತ್ತಾನೆ. ಈ ಸ್ಥಿತಿಯಲ್ಲಿ ದೇಹ ಇಪ್ಪತ್ತೊಂದು ದಿನಗಳ ಮೇಲೆ ಸಾಧಾರಣ ನಿಲ್ಲುವುದಿಲ್ಲ" ವೆಂದುಹೇಳುತ್ತಿದ್ದರು. ಸ್ವಲ್ಪದರಲ್ಲಿ ಹೇಳುವುದಾದರೆ ಇದೇ ಷಟ್-ಚಕ್ರ-ಭೇದ.

೧೩೯. ಯಾರು ಜಗದಕಲ್ಯಾಣಕ್ಕಾಗಿ ಅಥವಾ ಒಂದು ವಿಶಿಷ್ಟವಾದ ಈಶ್ವರ ಕಾರ್ಯಸಾಧನೆಗಾಗಿ ಈ ಮಾನವ ಜನ್ಮಧಾರಣೆ ಮಾಡಿರುವರೊ ಅಂತಹ ಜಗದ್ಗುರುಗಳು, ಆಚಾರ್ಯ ಕೋಟಿಗಳು, ಈಶ್ವರ ಕೋಟಿಗಳು, ಇಂತಹವರು ಕುಂಡಲಿನಿ ಶಕ್ತಿಯನ್ನು ಸಹಸ್ರಾರದಿಂದ ಅನಾಹತಕ್ಕೆ ತಂದು ಬ್ರಹ್ಮಾನಂದವನ್ನು ಕೂಡ ತಿರಸ್ಕರಿಸಿ ಭಾವಮುಖದಲ್ಲಿರುವರು. ಅವರು ಸರದಿಯಂತೆ ಒಮ್ಮೆ ಅವ್ಯಕ್ತ, ಮತ್ತೊಮ್ಮೆ ವ್ಯಕ್ತಸ್ಥಿತಿಯಲ್ಲಿರುವರು. ಕೆಲವುವೇಳೆ ಸಮಾಧಿಯಲ್ಲಿ ಅಥವಾ ಬ್ರಹ್ಮಜ್ಞಾನದಲ್ಲಿ ಮಗ್ನರಾಗಿರುವರು. ಕೆಲವುವೇಳೆ ಅಜ್ಞಾನದಲ್ಲಿ ನರಳುವ ಜೀವಿಗಳನ್ನು ಉದ್ಧರಿಸುವುದಕ್ಕೆ ಈ ಮಾನವ ಕ್ಷೇತ್ರಕ್ಕೆ ಕರುಣೆಯಿಂದ ಇಳಿದು ಬರುವರು.

೧೪೦. ಸ್ವಾಮಿ ವಿವೇಕಾನಂದರು ಯಥಾರೀತಿ ಶಾಸ್ತ್ರೀಯ ವಿಧಾನ, ಕ್ರಮ, ಸಾಧನೆ ಇಲ್ಲದೆ ಕಂಡಲಿನಿಶಕ್ತಿ ತನಗೆ ತಾನೆ ಒಬ್ಬ ಮಹಾತ್ಮನಲ್ಲಿ ಚೇತನಗೊಳ್ಳುವುದು ತುಂಬಾ ಅಪೂರ್ವವೆಂದು ಹೇಳಿದ್ದಾರೆ. ಅದು ಆಕಸ್ಮಿಕವಾಗಿ ಒಂದು ಅನಿರೀಕ್ಷಿತವಾದ ಸತ್ಯವನ್ನು ಕಂಡುಹಿಡಿದಂತೆ. ಒಬ್ಬ ಮನುಷ್ಯನು ದಾರಿಯಲ್ಲಿ ನಡೆಯುತ್ತಿರುವಾಗ ಮುಗ್ಗರಿಸಿ ಆಕಸ್ಮಾತ್ ಅದರಿಂದ ಉರುಳಿದ ಒಂದು ಕಲ್ಲಿನ ಕೆಳಗಡೆ ಏನೋ ಹೊಳೆಯುತ್ತಿದ್ದುದನ್ನು ನೋಡಿದಂತೆ. ಆ ಕಲ್ಲನ್ನು ಎತ್ತಿದಾಗ ಅದರಡಿಯಲ್ಲಿ

ಚಿನ್ನದ ನಾಣ್ಯಗಳಿದ್ದ ಕೊಪ್ಪರಿಗೆಯನ್ನು ಕಂಡುಹಿಡಿಯುತ್ತಾನೆ. ಇದೂ ಅದರಂತೆ. ಆದರೆ ಯಾರು ಈ ರೀತಿ ಆಕಸ್ಮಿಕವಾಗಿ ಒಂದು ಸಿದ್ಧಿಯನ್ನು ಹೊಂದುತ್ತಾರೊ ಅವರು ತಮ್ಮ ಅಂಧ ಶ್ರದ್ಧೆಯಿಂದ ಮತ್ತು ಸಂಕುಚಿತ ಮನೋಭಾವದಿಂದ ಈ ಪ್ರಪಂಚಕ್ಕೆ ಒಳ್ಳೆಯದರಷ್ಟೇ ಕೆಡುಕನ್ನೂ ಉಂಟುಮಾಡಬಹುದು. ಸಾಮೂಹಿಕವಾಗಿ ಭಜನೆಮಾಡುವಾಗ ಆಕಸ್ಮಿಕವಾಗಿ ಉದ್ರೇಕವಾದ ಭಕ್ತಿಭಾವದಿಂದ ದೇಹವನ್ನು ಮರೆತು ಅನೇಕರು ಅಳುತ್ತಾರೆ, ಕಿರುಚುತ್ತಾರೆ, ಕುಣಿಯುತ್ತಾರೆ. ಅವರ ಕುಂಡಲಿನಿ ಕೆಲವು ಕಾಲದವರೆಗೆ ಜಾಗ್ರತವಾಗುವುದೇನೊ ನಿಜ. ಆದರೆ ಇದರ ಪ್ರತಿಕ್ರಿಯೆ ಅಪಾಯಕರ. ಅವರಲ್ಲಿ ದುರಭ್ಯಾಸಗಳಲ್ಲಿ ಆಸಕ್ತಿ ಅಥವಾ ದೊಡ್ಡ ಭಕ್ತರು ಮತ್ತು ಆಧ್ಯಾತ್ಮಿಕ ಪಾರಂಗತರು ಎಂದು ಸಾರ್ವಜನಿಕರ ಮುಂದೆ ನಟಿಸಿ ಗೌರವ ಕೀರ್ತಿಗಳಿಸುವ ಪ್ರಬಲ ಆಕಾಂಕ್ಷೆ ಸಾಧಾರಣವಾಗಿ ಕಂಡುಬರುವುದು. ಕೊನೆಗೆ ಅವರು ಕಪಟಿಗಳೂ, ನೀಚರೂ ಆಗಿ ನಾಶವಾಗುವರು.

೧೪೧. ಜನರು ದೀಪವನ್ನು ಹೊತ್ತಿಸದೆ ಸೂರ್ಯನನ್ನು ಆತನ ಬೆಳಕಿನ ಸಹಾಯದಿಂದಲೇ ನೋಡುವಂತೆ ದೇವರನ್ನು ಕೂಡ ಕೇವಲ ಆತನ ಕೃಪೆಯಿಂದ ನೋಡಬೇಕಲ್ಲದೆ ಮಿತಿಯಿಂದ ಕೂಡಿರುವ ಮಾನವ ಶಕ್ತಿಯಿಂದಲ್ಲ. ಆದರೆ ಮೋಡಗಳು ಬಂದು ಸೂರ್ಯನನ್ನು ಆವರಿಸಿದಾಗ ಆತನನ್ನು ನೋಡಲಾಗುವುದಿಲ್ಲ. ಅದರಂತೆಯೇ ಅವಿದ್ಯೆ (ಅಜ್ಞಾನ) ಅಥವಾ ಮಾಯೆ ಭಗವಂತನನ್ನು ಮರೆಮಾಡುವುದು. ಸಾಧನೆ ಭಜನೆ ಆ ಮೋಡಗಳನ್ನು ಚದುರಿಸುತ್ತವೆ. ದೇವರು ತಾನೇ ದರ್ಶನ ಕೊಡುತ್ತಾನೆ. ಸಾಧನೆ ಭಜನೆ ಭಗವತ್ಸಾಕ್ಷಾತ್ಕಾರಕ್ಕೆ ಕಾರಣಗಳಲ್ಲ. ಏಕೆಂದರೆ ಅವನು ಸ್ವಯಂಪ್ರಕಾಶನು, ಅವು ಕೇವಲ ಆತನ ಮೇಲಿರುವ ತೆರೆಯನ್ನು ಮತ್ತು ಅಡ್ಡಿಗಳನ್ನು ಕಿತ್ತೊಗೆಯುತ್ತವೆ.

೧೪೨. ಜ್ಞಾನ, ಭಕ್ತಿ, ಚಿತ್ತಶುದ್ಧಿ, ತ್ಯಾಗ, ದೇವರಿಗಾಗಿ ವ್ಯಾಕುಲತೆ ಇವೆಲ್ಲಾ ದೈವೀಗುಣಗಳು. ಇವೇ ಆತನ ಮುಖ್ಯ ಲಕ್ಷಣ. ಯಾರಿಗೆ ತಾನು ಅನುಗ್ರಹಿಸಬೇಕೆಂದು ಅಥವಾ ಪ್ರತ್ಯಕ್ಷನಾಗಬೇಕೆಂದಿರುವನೋ ಅಂತಹವರಿಗೆ ಇವನ್ನು ಮುಂಚಿತವಾಗಿಯೆ ಕೊಟ್ಟಿರುವನು. ಈ ಸುಗುಣಗಳು ಯಾರಲ್ಲಿ ಇವೆಯೋ ಆಗ ಮಾಯೆಯು ತೊಲಗುತ್ತಿದೆ ಎಂಬುದೂ, ಭವ್ಯ ಅರುಣೋದಯವು ಹೆಚ್ಚು ಸಾವಕಾಶವಿಲ್ಲದೆ ಪ್ರಾಪ್ತವಾಗಲಿದೆ

ಎಂಬುದೂ ನಿಶ್ಚಯ. ಮುಂದೆ ಬರುವ ಶ್ರೀರಾಮಕೃಷ್ಣ ಪರಮಹಂಸರ ಮಾತುಗಳು ನಿನಗೆ ಗೊತ್ತೆ? ಒಬ್ಬ ಜಮೀನ್ದಾರನು ತನ್ನ ರೈತನ ಮನೆಗೆ ಭೇಟಿಕೊಟ್ಟು ಆತಿಥ್ಯ ಸ್ವೀಕರಿಸಲಿಕ್ಕೂ ಒಪ್ಪಿದ್ದಲ್ಲದೆ ಆ ರೈತನ ಮನೆಗೆ ಅನೇಕ ಆವಶ್ಯಕವಾದ ಪದಾರ್ಥಗಳನ್ನೂ ಕಳುಹಿಸಿದನು. ಏಕೆಂದರೆ ಅವನಿಗೆ ಆ ರೈತನು ಬಡವನೆಂದೂ ಆ ಬೆಲೆಬಾಳುವ ವಸ್ತುಗಳನ್ನು ದೊರಕಿಸಲು ಅಶಕ್ತನೆಂದೂ ಗೊತ್ತಿತ್ತು. ದೇವರು ಯಾರು ತನಗಾಗಿ ಸರ್ವಸ್ವವನ್ನೂ ತ್ಯಾಗಮಾಡಿ ವ್ಯಾಕುಲ ಹೃದಯದಿಂದ ಆತನಿಗಾಗಿ ಹಂಬಲಿಸುತ್ತಾರೋ ಅಂತಹವರನ್ನು ಮಾತ್ರ ಅನುಗ್ರಹಿಸುತ್ತಾನೆ.

೧೪೩. ಹಾಗಾದರೆ ದೇವರಿಗೂ ಕೂಡ ಕೆಲವರು ಪ್ರಿಯರು ಕೆಲವರು ಅಪ್ರಿಯರಿರುವರೆ? ಯಾರು ಈ ಪ್ರಪಂಚದಲ್ಲಿ ಅವನನ್ನು ಸಂಪೂರ್ಣ ಮರೆತು ಕೇವಲ ಹೆಂಡತಿ, ಮಕ್ಕಳು, ಸಂಸಾರ, ಆಸ್ತಿಯಲ್ಲಿಯೇ ಮಗ್ನರಾಗಿರುವರೋ ಅವರ ಮೇಲೆ ದೇವರಿಗೆ ಪ್ರೀತಿ ಇಲ್ಲವೆ? ಇದು ಹೇಗೆ ಸಾಧ್ಯ? ಪ್ರತಿಯೊಬ್ಬರೂ ಆಸ್ತಿಕರಾಗಲಿ, ನಾಸ್ತಿಕರಾಗಲಿ, ಗೃಹಸ್ಥರಾಗಲಿ ಎಲ್ಲರೂ ಅವನ ಮಕ್ಕಳೇ. ತಾಯಿಗೆ ತನ್ನ ಮಗುವಿನ ಮೇಲೆ ಒಂದೇ ಸಮನಾದ ಪ್ರೇಮಾದರಗಳಿವೆ. ಮಗು ಆಟದಲ್ಲಿ ಪೂರ್ತಿ ಮುಳುಗಿ ತಾಯಿಯನ್ನು ಮರೆತರೂ ಅದು ಅವಳಿಗಾಗಿ ಆಟದ ಸಾಮಾನನ್ನು ಬಿಸುಟು ಅತ್ತರೆ ಆಕೆ ತನ್ನ ಕೆಲಸವನ್ನೆಲ್ಲಾ ಬಿಟ್ಟು ತನ್ನ ತೊಡೆಯ ಮೇಲೆತ್ತಿ ಸಮಾಧಾನಪಡಿಸುತ್ತಾಳೆ. ಮಗು ಆಟದಲ್ಲಿ ಮೈಮರೆತು ಸಂತೋಷದಿಂದಿರುವವರೆಗೂ ಅದನ್ನು ಏತಕ್ಕೆ ಎಬ್ಬಿಸಬೇಕೆಂದು ಸುಮ್ಮನಿರುವಳು. ಅದು ಆಟ ಆಡಿಕೊಂಡೇ ಇರಲಿ! ಯಾವಾಗ ಆಟ ಬೇಜಾರಾಯಿತೋ ಆಗ ಅದು ಅದನ್ನು ಬಿಟ್ಟು ಅಥವಾ ಆಟದ ಸಾಮಾನುಗಳನ್ನು ಬಿಸುಟು ತಾಯಿಯು ಬೇಕೆಂದು ಬಯಸುತ್ತದೆ. ಮತ್ತಾವುದರಿಂದಲೂ ಅದಕ್ಕೆ ಸಮಾಧಾನ ದೊರಕುವುದಿಲ್ಲ. ಆಗ ಮಾತ್ರ ತಾಯಿ ಬಂದು ಮಗುವನ್ನೆತ್ತಿಕೊಳ್ಳುವಳು.

೧೪೪. ಎಷ್ಟೇ ಗುಡುಗು ಬರಲಿ, ಬಿರುಗಾಳಿ ಬೀಸಲಿ. ಭೋರ್ಗರೆದು ಮಳೆ ಸುರಿಯಲಿ, ಕೋರೈಸಿ ಮಿಂಚಲಿ, ಸಿಡಿಲುಗಳು ಬಡಿಯಲಿ, ಚಾತಕ ಪಕ್ಷಿ ಸ್ವಲ್ಪವೂ ಭಯಗೆಡದೆ ಆಕಾಶದ ಕಡೆಗೆ ತನ್ನ ದೃಷ್ಟಿಯನ್ನು ತಿರುಗಿಸಿ ತನ್ನ ಹೊಟ್ಟೆ ತುಂಬುವಷ್ಟು ಮಳೆ ನೀರನ್ನು ಕುಡಿದು ತನ್ನ ದಾಹವನ್ನು ತಣಿಸಿಕೊಳ್ಳುತ್ತದೆ. ಅದು ಎಂದೂ,

ಬಾಯಾರಿಕೆಯಿಂದ ಸಾಯುತ್ತಿದ್ದರೂ, ನೆಲದಮೇಲೆ ಇರುವ ಕಟ್ಟೆಯ ನೀರನ್ನು ಕುಡಿಯುವುದಿಲ್ಲವೆಂಬ ಹೇಳಿಕೆ ಇದೆ. ಅದರಂತೆಯೇ ಯಾರು ಭಗವಂತನ ನಿಜವಾದ ಭಕ್ತನೋ ಅವನು ಸುಡುತ್ತಿರುವ ತನ್ನ ಆತ್ಮ ತೃಷೆಯನ್ನು ತಣಿಸಲು ಕೇವಲ ದೇವರ ಕಡೆಗೆ ನೋಡುವನು. ಕೇವಲ ದೇವರ ಹೊರತು ಮತ್ತಾವುದರಿಂದಲೂ ಅವನು ಏನನ್ನೂ ಬಯಸುವುದಿಲ್ಲ. ಯಾವುದು ನಡೆದರೂ ಅದು ಕೇವಲ ಭಗವಂತನ ಕೃಪೆಯಿಂದ ಎಂದು ಆತನಿಗೆ ಚೆನ್ನಾಗಿ ತಿಳಿದಿದೆ. ಅವನಿಗೆ ಏನೇ ಬರಲಿ, ನಿಶ್ಚಿಂತನಾಗಿರುತ್ತಾನೆ. ಭಗವಂತನ ಮೊಗದಾವರೆ ಎಷ್ಟೇ ಕಠೋರವಾಗಿರಲಿ, ಈ ಪ್ರಪಂಚದಲ್ಲಿ ಯಾವ ದುಃಖ ಬೇನೆಗಳೇ ಬರಲಿ, ಎಂತಹ ಬಡತನ, ದಾರಿದ್ರ್ಯ, ಕೋಟಲೆ, ಸಂಕಟ ಆತನಿಗೆ ಒದಗಲಿ, ಆತನು ಎಲ್ಲದರಲ್ಲಿಯೂ ಕೇವಲ ಭಗವಂತನ ಮೊಗದಾವರೆಯನ್ನು ನೋಡುವನು. ದೇವರು ಏನೇ ಮಾಡಲಿ ಅದು ತನ್ನ ಮತ್ತು ಇತರರ ಒಳ್ಳೆಯದಕ್ಕಾಗಿಯೇ ಎಂದು ಚೆನ್ನಾಗಿ ಅರಿತಿದ್ದಾನೆ. ಯಾರು ಅತೃಪ್ತರಾಗುತ್ತಾರೋ ಅವರು ದೇವರಲ್ಲಿ ತಪ್ಪನ್ನು ಕಂಡುಹಿಡಿದಂತೆ. ಆತನಲ್ಲಿ, ಆತನ ಆಜ್ಞೆಯಲ್ಲಿ, ದೋಷಾರೋಪಣೆ ಮಾಡಿದಂತೆ. ನಿಜವಾದ ಈಶ್ವರಪ್ರೇಮಿ ತನ್ನ ಪ್ರಾಣ ಹೋದರೂ ಅದನ್ನು ಮಾಡಲಾರ.

೧೪೫. ತಾಪತ್ರಯ ಜ್ವಾಲೆಯಲ್ಲಿ ಸಿಕ್ಕಿ ಬೇಯುತ್ತಿರುವ ಜೀವಿಯನ್ನು ಶಾಂತಿದಾಯಕ ಭಗವಂತನೆಡೆಗೆ ಕರೆದುಕೊಂಡು ಹೋಗುವವನೆ ಗುರು. ಗುರು ಶಿಷ್ಯರ ಸಂಬಂಧ ಒಬ್ಬ ಆಧ್ಯಾತ್ಮಿಕ ತಂದೆ ಮಕ್ಕಳ ಸಂಬಂಧದಂತೆ. ಪ್ರಾಪಂಚಿಕ ತಂದೆ ಮಗನಿಗೆ ಕಾರಣ. ಗುರು ಶಿಷ್ಯನಿಗೆ ಪರಮಸತ್ಯವನ್ನು ತೋರಿಸಿ ಅವನನ್ನು ಜನನ ಮರಣದಿಂದ ಪಾರು ಮಾಡುತ್ತಾನೆ. ದೈಹಿಕ ತಂದೆಯ ಸಾಲವನ್ನು ವಂಶವನ್ನು ಮುಂದುವರಿಸುವುದರಿಂದ ಮತ್ತು ಶ್ರಾದ್ಧ ಮಾಡುವುದರಿಂದ ತೀರಿಸಬಹುದು. ಆದರೆ ಗುರುವಿನ ಸಾಲ ತನ್ನ ಸರ್ವಸ್ವವನ್ನು ಅರ್ಪಿಸಿದರೂ ತೀರುವುದಿಲ್ಲ. ಏಕೆಂದರೆ ಗುರು ಶಿಷ್ಯನನ್ನು ಅವಿದ್ಯೆಯಿಂದ ಪಾರುಮಾಡುತ್ತಾನೆ. ಪೂರ್ವೀಕರ ಒಂದೆರಡು ಸದ್ಗುಣಗಳನ್ನು ಅವರ ಮಕ್ಕಳೂ ಮೊಮ್ಮಕ್ಕಳೂ ಅವರವರ ಅಂತಸ್ಥಿಗನುಗುಣವಾಗಿ ಹೊಂದಿರುವಂತೆ ಆಧ್ಯಾತ್ಮಿಕತೆಯೂ ಗುರು ಪರಂಪರೆಯಲ್ಲಿ ಶಿಷ್ಯರಿಗೆ ಮತ್ತು ಶಿಷ್ಯರ ಶಿಷ್ಯರಿಗೂ ಬರುತ್ತವೆ.

೧೪೬. ವ್ಯಸ್ತನಾದರೆ ವಸ್ತುಲಾಭ ದೊರಕದು. ಪರಮಾತ್ಮ

ನೊಬ್ಬನೆ ಏಕಮಾತ್ರ ವಸ್ತು, ಸಾರ, ಸತ್ಯ. ಉಳಿದುವೆಲ್ಲ– ಸಂಸಾರ ಪ್ರಪಂಚ, ಅವಸ್ತು; ಅಸಾರ, ತೋರಿ ಮಾಯವಾಗುವುದು. ಅವೆಲ್ಲ ತ್ಯಾಜ್ಯಯೋಗ್ಯ. ಈ ಜ್ಞಾನ ಪರಿಪಕ್ವವಾಗಬೇಕು.

೧೪೭. ಎಂದು "ನಾನು" ಎಂಬುದು ಇಲ್ಲವೋ ಆಗ "ನೀನು" ಎಂಬ ಸತ್ಯವಿರುವುದು. ಎಂದು "ನಾನು" ಎಂಬುದು ನಾಶವಾಗುವುದೋ ಆಗ ಯಥಾರ್ಥ ಜೀವನ ಪ್ರಾರಂಭವಾದಂತೆ. "ನಾನೆಂಬುದು ನಾಶ ವಾದಾಗ ಜಗದ ಜಂಜಡ ಅಳಿವುದು."

೧೪೮. ಈ ಪ್ರಪಂಚದ ಮೇಲೆ ನಮ್ಮ ಹುಟ್ಟುಸಾವುಗಳು ಅವ ಲಂಬಿಸಿವೆ ಎಂದು ನಾವು ತಿಳಿದಿದ್ದೇವೆ. ಕೇವಲ ನಮ್ಮ "ಹಕ್ಕು ಮತ್ತು ಹಿತಗಳು" ಇವುಗಳನ್ನು ಕಾಪಾಡಿಕೊಳ್ಳುವುದಕ್ಕಾಗಿ ಇಲ್ಲದ ಅನೇಕ ತೊಂದರೆ ಮತ್ತು ಕೋಟಲೆಗಳನ್ನು ನಾವಾಗಿ ಉಂಟುಮಾಡಿಕೊಳ್ಳುತ್ತೇವೆ. ನಾವು ದುಃಖಿಗಳಾಗುವುದಲ್ಲದೆ ಮತ್ತೊಬ್ಬರಿಗೂ ದುಃಖ ಅಥವಾ ನಾಶ ವನ್ನುಂಟುಮಾಡುವುದಕ್ಕೆ ಸ್ವಲ್ಪವೂ ಹಿಂದೆ ಮುಂದೆ ನೋಡುವುದಿಲ್ಲ. ಹಗಲೂ ರಾತ್ರೆ ನಮ್ಮ ಇಷ್ಟಾರ್ಥ ಸಿದ್ಧಿಗಾಗಿ ಜೀವನವನ್ನೇ ಒತ್ತೆಯಿಟ್ಟು ಹೋರಾಡಿ ಒಬ್ಬರ ಪ್ರಾಣಕ್ಕೆ ಮತ್ತೊಬ್ಬರು ಹಾತೊರೆದು ನಾವು ಪೂರ್ತಿ ಶಕ್ತಿಹೀನರಾಗುತ್ತೇವೆ. ಜನರು ಹೇಳುವಂತೆ "ಓ! ನನಗೆ ಸಾಯಲಿಕ್ಕೂ ಪುರಸತ್ತಿಲ್ಲ!"— ಜಗದ್ಭ್ರಮಣಕಾರಿಯಾದ ಮಹಾ ಮಾಯಾ ಶಕ್ತಿ ಇದು! ಜಗನ್ಮಾತೆ ಕುಳಿತು ಈ ಆಟವನ್ನು ನೋಡಿ ನಗುತ್ತಾಳೆ. ಇದು ಬೆಕ್ಕು ಅಥವಾ ನಾಯಿಮರಿಗಳು ಚೆಲ್ಲಾಟವಾಡುತ್ತಾ ಆಗಿಂದಾಗ್ಗೆ ಒಂದನ್ನೊಂದು ಕಚ್ಚಾಡುವಂತೆ ಇದೆ! ನಾವು ಅವಕ್ಕೆ ಅತಿಶಯವಾಗಿ ಮಹತ್ವಕೊಡುತ್ತೇವೆ. ಅದರಲ್ಲೇ ಎಷ್ಟು ತಲ್ಲೀನವಾಗಿರು ತ್ತೇವೆಂದರೆ ನಮಗೆ ಅದರ ಪರಿಣಾಮದ ಅರಿವೇ ಇರುವುದಿಲ್ಲ. ಆ ಕದನ ದಲ್ಲಿ ನಮಗೆ ಸಾವುಂಟಾದರೂ ಅದನ್ನು ಲೆಕ್ಕಿಸುವುದಿಲ್ಲ. ನಾವು ನಾಟಕ ವನ್ನು ನೋಡುವಾಗ ನಟ ಮತ್ತು ನಟಿಯರು ತಮ್ಮ ಭಾಗಗಳನ್ನು ಸಂಪೂರ್ಣ ತಲ್ಲೀನರಾಗಿ ಅಭಿನಯಿಸಿದಾಗ, ಹೇಗೆ ಆ ನಾಟಕ ಸತ್ಯವೆಂದು ನಮಗೆ ಭಾಸವಾಗುತ್ತದೊ ಹಾಗೆಯೇ ಆಟ ಮನಸ್ಸನ್ನು ಸೆಳೆದುಕೊಳ್ಳು ವುದರಲ್ಲಿ ಸಂದೇಹವಿಲ್ಲ.

೧೪೯. ಯಾವಾಗ ನಮಗೆ ಈ ಭೂಮಂಡಲ, ಈ ಜೀವನ, ಎಲ್ಲವೂ ಕೇವಲ ಒಂದು ಆಟವೆಂದು ಭಾಸವಾಗುವುದೋ ಆಗ ಈ ಆಟ ಕೊನೆ

ಗಾಣುವುದು. ನಮಗೆ ಕೆಟ್ಟ ಸ್ವಪ್ನವಾದಾಗ ನಾವು ಒಬ್ಬ ಹುಚ್ಚ ಮನುಷ್ಯ ನಂತೆ ಎಷ್ಟೋಬಾರಿ ಅಳುತ್ತೇವೆ, ನಗುತ್ತೇವೆ. ಕೆಲವುವೇಳೆ ನಮ್ಮನ್ನು ಯಾರೋ ಭಯಂಕರವಾದ ಕಡಲಿನಲ್ಲಿ ಎತ್ತಿಕೊಂಡು ಹೋಗುತ್ತಿರುವು ದಾಗಿಯೂ ನಾವು ಕೇವಲ ಅಶಕ್ತರಾಗಿರುವೆವೆಂದು ಗೊತ್ತಾಗಿ ಹೆದರಿಕೆ ಯಿಂದ ಕಾತರಿಸಿ ನೋವಿನಿಂದ ಅರಚುತ್ತೇವೆ; ಆ ದಿಗಿಲಿಗೆ ಕೊನೆಯೇ ಇಲ್ಲದಂತೆ ತೋರುವುದು. ಅಲ್ಲಿ ಯುಕ್ತಿ ವಿಮರ್ಶನಾಶಕ್ತಿ ಮಾಯವಾಗಿ ಅತ್ಯಂತ ಅಸಂಗತವಾದುವುಗಳು ಕೂಡ ಸತ್ಯದಂತೆ ಕಾಣಿಸಿಕೊಳ್ಳುವುವು. ಆದರೆ ಯಾವಾಗ ನಮಗೆ ಅದರಿಂದ ಎಚ್ಚರವಾಗಿ ಅದು ಕೇವಲ ಸ್ವಪ್ನ ವೆಂದು ಗೊತ್ತಾಗುವುದೊ ಆಗ ಕನಸು ಮಾಯವಾಗುತ್ತದೆ. ನಾವು ಸಹಜ ಸ್ಥಿತಿಗೆ ಹಿಂದಿರುಗಿದಾಗ ಸದ್ಯಕ್ಕೆ ಪಾರಾದೆ ಎಂದು ಯೋಚಿಸುತ್ತೇವೆ. ಅಥವಾ ನಮಗೆ ಒಳ್ಳೆಯ ಕನಸೇ ಬೀಳಬಹುದು.— ಉದಾಹರಣೆಗೆ ನಮಗೆ ಲಾಟರಿಯಲ್ಲಿ ಎರಡು ಲಕ್ಷರೂಪಾಯಿಗಳು ಬಂದಿವೆ. ನಾವು ಸಂತೋಷಸಾಗರದಲ್ಲಿ ಮುಳುಗಿದ್ದೇವೆ, ಯಾವಾಗ ಥಟ್ಟನೆ ಕನಸಿನಿಂದ ಎಚ್ಚರವಾಗುವುದೋ ಆಗ ನಾವು ಬಹಳ ಖಿನ್ನರಾಗುತ್ತೇವೆ. ನಮ್ಮ ಜೀವ ಮಾನವೆಲ್ಲವೂ ಅಂತಹುದೊಂದು ಅನೇಕ ದಿನಗಳಿಂದ ಕೂಡಿದ ನಿರಂತರ ಸ್ವಪ್ನಮಾತ್ರ. ಕೆಟ್ಟ ಮತ್ತು ಒಳ್ಳೆಯ ಕನಸು, ಆಸೆ ನಿರಾಶೆ, ಸುಖ ದುಃಖಗಳು ಹಾಸುಹೊಕ್ಕಾಗಿವೆ. ಎಲ್ಲಿಯುವರೆಗೆ ಈ ಕನಸಿನಲ್ಲಿರುವೆವೋ ಅಲ್ಲಿಯವರೆಗೆ ಎಲ್ಲಾ ಸತ್ಯ. ಯಾವಾಗ ಕನಸೊಡೆಯುವುದೊ ಆಗ ಜಗತ್ಸಂಸಾರವೆಲ್ಲ ಶೂನ್ಯವಾಗಿ ಪರಿಣಮಿಸುವುದು. ಆಗ ನಿತ್ಯ ಸತ್ಯ ವೊಂದೇ ತೋರುವುದು.

೧೫೦. ಭಗವಂತನಿಗೇಕೆ ಮತ್ತೊಬ್ಬರ ಮೇಲೆ ಕೋಪ? ನಾವು ತೀವ್ರವಾಗಿ ಇಚ್ಛಿಸಿದ ವಸ್ತುವಿನ ಹಾದಿಗಡ್ಡಲಾಗಿ ಏನಾದರೂ ಅಡ್ಡಿ ಯಾದರೆ ಆಗ ಕೋಪ ಬರುತ್ತದೆ. ದೇವರು ಇಚ್ಛೆ ಪಡುವ, ಆತನಿನ್ನೂ ಪಡೆಯದೆ ಇರುವ ಅಥವಾ ಆತನು ಪಡೆಯಲಾಗದೆ ಇರುವ ವಸ್ತು ಏನಾ ದರೂ ಇದೆಯೇನು? ಆತನ ಹಾದಿಯಲ್ಲಿ ಅಡ್ಡಿಯನ್ನುಂಟುಮಾಡುವವ ನಾರು? ಆತ ನಮ್ಮಿಂದ ಏನನ್ನೂ ಬಯಸುವುದಿಲ್ಲ. ಆತನನ್ನು ನಾವು ಪ್ರಾರ್ಥಿಸಿದರೆ ಅಥವಾ ಆತನನ್ನು ಸಂಪೂರ್ಣಮರೆತರೆ ಅದರಿಂದ ಆತ ನಿಗೆ ಲೇಶಮಾತ್ರವೂ ನಷ್ಟವಿಲ್ಲ. ಲಾಭ ಅಥವಾ ನಷ್ಟ, ಸುಖದುಃಖ, ಒಳ್ಳೆ ಯದು ಕೆಟ್ಟದ್ದು ಇದೆಲ್ಲಾ ಕೇವಲ ನಮಗೆ ಮಾತ್ರ ಅನ್ವಯಿಸುತ್ತದೆ.

೧೫೧. ಯಾರು ತಾನು ಬ್ರಹ್ಮನನ್ನು ತಿಳಿದಿರುವೆನೆಂದು ಭಾವಿಸುವನೊ ಅವನು ಬ್ರಹ್ಮನನ್ನು ನೋಡೇ ಇಲ್ಲ ಎಂದು ಉಪನಿಷತ್ತು ಸಾರುತ್ತದೆ. ಯಾರು ಬ್ರಹ್ಮ, ಮನೋವಾಕ್ಕಾಯಗಳಿಗೆ ಅತೀತನೆಂದು, ಅಖಂಡ ಜ್ಞಾನನೆಂದು, ಜ್ಞಾನ ಮತ್ತು ಅನುಭವಗಳ ಪರಿಮಿತಿಗೆ ಮೀರಿದವನೆಂದು ಅರಿತಿದ್ದಾನೊ ಅವನಿಗೆ ಬ್ರಹ್ಮಜ್ಞಾನವಾಗಿದೆ. ಆಗ ಅವನು ಬ್ರಹ್ಮನೇ ಆಗುತ್ತಾನೆ. ಅರಿವೇ ತಾನಾಗಿರುವವನನ್ನು ಅರಿಯಬಲ್ಲವರಾರು? ಅರಿತಾದ ಮೇಲೆ ಜ್ಞಾನಿ ಜ್ಞೇಯವಾಗುವನು. ಆದ್ದರಿಂದ ಅವನಿಗೊಂದು ಪರಿಮಿತಿ ಇದೆ. ಯಾವುದಕ್ಕೆ ಮಿತಿಯುಂಟೊ ಮತ್ತು ಯಾವುದು ದೇಶ, ಕಾಲ, ಕಾರಣಗಳ ಒಳಗೆ ಇರುವುದೋ ಅದಕ್ಕೆ ಹುಟ್ಟು ಸಾವುಗಳು, ಸುಗುಣ ದುರ್ಗುಣಗಳೂ ಇವೆ; ಆದ್ದರಿಂದ ಮುಕ್ತಿ ಅಥವಾ ಪರಿಪೂರ್ಣತೆಯು ಇಂತಹ ವಸ್ತುವಿನಿಂದ ಎಂದಿಗೂ ಲಭಿಸುವುದಿಲ್ಲ. ಅಂತಹ ಮೇರೆ ಇರುವ ವಸ್ತುವನ್ನು ತಿಳಿದುದರಿಂದ ಅಥವಾ ಪೂಜಿಸುವುದರಿಂದ ಅಥವಾ ಹೊಂದುವುದರಿಂದ ತಾನೆ ಏನು ಪ್ರಯೋಜನವಾದೀತು?

೧೫೨. ಬ್ರಹ್ಮ, ಸತ್ಯ ಜ್ಞಾನ ಆನಂದಸ್ವರೂಪ, ಅನಂತ ಸ್ವರೂಪ. ಇವುಗಳೆಲ್ಲಾ ಅದರ ಗುಣಗಳಷ್ಟೇ ಅಲ್ಲ ಅದರ ಸ್ವಭಾವ ಅಥವಾ ತಿರುಳು. ಗುಣಗಳು ಒಂದು ಎಲ್ಲೆಯನ್ನು ಕಲ್ಪಿಸುತ್ತವೆ. ಅವು ಶಾಶ್ವತವಲ್ಲ. ಅವು ಬೆಳೆಯುತ್ತವೆ, ನಾಶಹೊಂದುತ್ತವೆ. ಬ್ರಹ್ಮ ಗುಣಾತೀತ. ನಾವು "ಇದಲ್ಲ, ಇದಲ್ಲ" ಎಂದು ಮಾತ್ರ ಹೇಳಬಹುದು. ಕೇವಲ ಅದನ್ನು ಕೂಡ ಅದರ ಸಂಪೂರ್ಣಸ್ವಭಾವ ತಿಳಿದಮೇಲೆ ಹೇಳಲಾಗುವುದಿಲ್ಲ. ಏಕೆಂದರೆ ದ್ವೈತ ಭಾವನೆ ಅಂತಹ ಸಮಯದಲ್ಲಿ ಪೂರ್ಣ ಮಾಯವಾಗುವುದು. ಅದರ ವಿಷಯವಾಗಿ ಹೇಳಲು, ಅದನ್ನು ವರ್ಣಿಸಲು ಯಾರಿದ್ದಾರೆ? ಆದರೆ ಸಾಕಾರನಾದಾಗ ಅವನು ಅನಂತಗುಣಾಧಾರನಾಗಿರುವನು.

೧೫೩. ಬ್ರಹ್ಮನು "ಏಕಮೇವಾದ್ವಿತೀಯ" ನಾಗಿದ್ದರೆ ಮಾಯೆ ಎಲ್ಲಿಂದ ಮತ್ತು ಏತಕ್ಕೆ ಬಂದು ಅದರ ಮೇಲೆ ತನ್ನ ಪ್ರಭಾವವನ್ನು ಬೀರಬೇಕು? ಇದು ಪುರಾತನ ಪ್ರಶ್ನೆ; ಅದಕ್ಕೆ ಕೊನೆ ಎಂಬುದೇ ಇಲ್ಲ. ಏಕೆಂದರೆ ಮಾಯಾಪ್ರಪಂಚದಲ್ಲಿರುವವರೆಗೆ ಯಾರೂ ಅದಕ್ಕೆ ಉತ್ತರ ಕೊಡಲಾರರು. ಮಾಯೆಯನ್ನು ಮೀರಿಹೋದಮೇಲೆ ಈ ಪ್ರಶ್ನೆಯನ್ನು ಕೇಳುವವರುತಾನೆ ಯಾರು? ಅಂತಹವನಿಗೆ ಮಾಯೆ ಎಂಬ ವಸ್ತುವೇ ಇಲ್ಲ. ಅಂತಹ ಸ್ಥಿತಿಯಲ್ಲಿ ದೃಗ್ ಮತ್ತು ದೃಶ್ಯ ಎರಡೂ ನಾಶವಾಗು

ತ್ತದೆ. ಕೇವಲ ಏಕತ್ವಮಾತ್ರ ಉಳಿದಿರುತ್ತದೆ. ಆಗ ನಮಗೆ ಆಂತರಿಕ ದೃಷ್ಟಿ ಉತ್ಪನ್ನವಾಗುತ್ತದೆ. ಬ್ರಹ್ಮ ಮಾತ್ರ ಸತ್ಯ. ಭೂತ, ವರ್ತಮಾನ, ಭವಿಷ್ಯತ್ತಿನಲ್ಲೆಲ್ಲಾ ಆತನು ಸ್ವಸ್ವರೂಪದಲ್ಲಿ ಪ್ರತಿಷ್ಠಿತನಾಗಿರುವನು. ಮಾಯೆಯು ಅದನ್ನು ಸೋಕಿಯೂ ಇಲ್ಲ. ದ್ವೈತಭಾವನೆ ಕೇವಲ ಭ್ರಮೆ, ನಾನೇ ಬ್ರಹ್ಮ.

೧೫೪. ಯಾರು ಹೃತ್ಪೂರ್ವಕ ಗುರುವಿನ ಉಪದೇಶದಲ್ಲಿ ಶ್ರದ್ಧೆ, ವಿಶ್ವಾಸವಿಟ್ಟು ಅವುಗಳಂತೆ ನಡೆಯಲು ಪ್ರಯತ್ನಿಸುವನೋ ಮತ್ತು ಯಾರು ಕೇವಲ ಗುರುವಿನ ಸಂತೋಷ ಅಥವಾ ತೃಪ್ತಿಗಾಗಿ ತನ್ನನ್ನು ಸಂಪೂರ್ಣ ಅರ್ಪಿಸಿಕೊಳ್ಳುತ್ತಾನೊ ಅವನೇ ನಿಜವಾದ ಶಿಷ್ಯ. ಗುರುವನ್ನು ಕೇವಲ ಒಬ್ಬ ಮನುಷ್ಯನೆಂದು ನೋಡಬೇಡ. ಶಿಷ್ಯ ಗುರುವನ್ನು ಪ್ರತ್ಯಕ್ಷ ದೇವತೆ ಎಂದು ನೋಡಿದರೆ, ಮನಃಪೂರ್ವಕ ಆತನನ್ನು ಪ್ರೀತಿಸಿ ಪೂಜಿಸಿದರೆ, ಅವನು ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರಿಯುತ್ತಾನೆ; ಗುರಿಯನ್ನು ಬೇಗ ಮುಟ್ಟುತ್ತಾನೆ. ಯೋಗ್ಯಗುರು ನಮ್ಮ ಹೃದಯದಲ್ಲಿ ವಾಸಿಸುವ ಪರಮಗುರುವಿನೊಡನೆ (ಇಷ್ಟದೈವನಾದ ಭಗವಂತ) ಐಕ್ಯತೆಯನ್ನುಂಟುಮಾಡುತ್ತಾನೆ. ಕೇವಲ ಗುರುವಿನ ಮೂಲಕ ಮಾತ್ರ ಆಧ್ಯಾತ್ಮಿಕ ಪ್ರವಾಹ ಶಿಷ್ಯನಿಗೆ ಹರಿಯುತ್ತದೆ. ನಾವೇನು ಇಚ್ಛಿಸಿದರೂ ಗುರುಕೃಪೆಯಿಂದ ಅದು ಲಭಿಸುತ್ತದೆ. ಆದರೆ ಶಿಷ್ಯನೂ ಕೂಡ ಅಂತಹ ಅವಶ್ಯಕವಾದ ಗುಣಗಳಿಂದ ಕೂಡಿ ಅದಕ್ಕೆ ಅರ್ಹನಾಗಿರಬೇಕು. ಕಾಯಾ ವಾಚಾ ಮನಸಾ ಪರಿಶುದ್ಧತೆ, ಜ್ಞಾನ ಭಕ್ತಿ ಮುಕ್ತಿಗಾಗಿ ಉತ್ಕಟ ಹಂಬಲ ಪ್ರಾಪಂಚಿಕ, ವಸ್ತುಗಳ ಮೇಲೆ ಬೇಸರಿಕೆ ಮತ್ತು ಜಯಪ್ರದ ದೀರ್ಘಪ್ರಯತ್ನ ಇವು ಆವಶ್ಯಕ. ಗುರುವಿಗೆ ಶಾಸ್ತ್ರಸಾರ ಗೊತ್ತಿರಬೇಕು. ಪಾಪರಹಿತನಾಗಿರಬೇಕು. ಬ್ರಹ್ಮನನ್ನು ತಿಳಿದವನಾಗಿರಬೇಕು. ಆತನಿಗೆ ಪ್ರಾಪಂಚಿಕ ಸುಖಾಸಕ್ತಿ ಕೊಂಚವೂ ಇರಕೂಡದು. ನಿಃಸ್ವಾರ್ಥಿಯಾಗಿರಬೇಕು. ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡುವುದರಲ್ಲಿ ನಿರತನಾಗಿರಬೇಕು. ಆತನ ದಯೆ ಮತ್ತು ಪ್ರೇಮ ಎಲ್ಲರ ಮೇಲೂ ಏಕರೀತಿಯಾಗಿರಬೇಕು.

೧೫೫. ತಂದೆ ಮತ್ತು ಗುರು ಇಬ್ಬರೂ ತಮ್ಮ ಮಕ್ಕಳ ಅಥವಾ ಶಿಷ್ಯರ ಕೈಯಲ್ಲಿ ಸೋಲನ್ನು ಹೊಂದಲು ಇಚ್ಛಿಸುತ್ತಾರೆ. ಅಂದರೆ ಅವರು "ನನ್ನ ಮಗ, ನನ್ನ ಶಿಷ್ಯ, ನನಗಿಂತ ಹೆಚ್ಚು ಮಹತ್ವ ಪಡೆಯಲಿ.

ಆತನು ಹೆಚ್ಚು ಪ್ರಖ್ಯಾತನಾಗಿ ಹೆಚ್ಚು ಗೌರವ ಮತ್ತು ಮರ್ಯಾದೆಯನ್ನು ಪಡೆಯುವಂತಾಗಲಿ" ಎಂದು ನಿಜವಾಗಿ ಆಶಿಸುತ್ತಾರೆ. ಆದರೆ ತಂದೆ ಅನಂತರ ಒಂದುದಿನ ಮಗನಿಂದ ಅನೇಕ ವಸ್ತುಗಳನ್ನು ಪಡೆಯಬೇಕೆಂದು ಯೋಚಿಸುತ್ತಾನೆ. ಆದರೆ ಗುರುವಾದರೋ ಶಿಷ್ಯನಿಂದ ತನಗಾಗಿ ಏನನ್ನೂ ಬಯಸುವುದಿಲ್ಲ. ಆತನ ಸ್ವಭಾವ ಕೇವಲ ಕೊಡುವುದು ಮಾತ್ರವಾಗಿದೆ. ಆತನು ಹಿಂತಿರುಗಿ ತೆಗೆದುಕೊಳ್ಳುವ ಯೋಚನೆ ಕೂಡ ಇಲ್ಲದೆ ಕೊಡುತ್ತಾನೆ. ವಿವೇಕಾನಂದರು, "ನಿಮ್ಮಲ್ಲಿ ಪ್ರತಿಯೊಬ್ಬರೂ ವಿವೇಕಾನಂದರಿಗಿಂತ ಹೆಚ್ಚು ಮಹತ್ವವನ್ನು ಪಡೆಯುವಂತಾಗಲಿ. ಆಗ ನಾನು ನಿಜವಾಗಿಯೂ ಸಂತೋಷಪಡುವೆನು. ನಾನು ಜನ್ಮವೆತ್ತಿ ಸಾರ್ಥಕವಾಯಿತು ಎಂದು ಭಾವಿಸುವೆ" ಎನ್ನುತ್ತಿದ್ದರು.

೧೫೬. ಒಂದು ಹೆಣವನ್ನು ಕತ್ತಿಯಿಂದ ಕಡಿದರೆ ಅದಕ್ಕೇನೂ ನೋವಾಗುವುದಿಲ್ಲ. ಶರೀರವನ್ನು ಒಂದು ಹೆಣದಂತೆ ಮಾಡಬಲ್ಲೆವಾದರೆ ಎಂದರೆ ಶರೀರದೊಡನೆ ಆತ್ಮದ ಐಕ್ಯತೆಯನ್ನು ನಾಶಮಾಡಬಲ್ಲೆವಾದರೆ ಆಗ ನಮ್ಮ ಜೀವನದಲ್ಲಿ ಎಂತಹ ಕಠಿನ ಪೆಟ್ಟುಗಳು ಬೀಳಲಿ ನಮಗೆ ಅವುಗಳ ಅರಿವೇ ಉಂಟಾಗುವುದಿಲ್ಲ. ಕೇವಲ ಇಂತಹ ಸ್ವಭಾವವುಳ್ಳ ಮನುಷ್ಯನು ಸಾಧಾರಣ ಮಾನವರಂತೆ ಪರಿಸ್ಥಿತಿಗಳಿಗೆ ಎದುರಾಗಿ ಹೋಗುವುದಿಲ್ಲ. ಅವರು ದೇಹದೊಡನಿದ್ದರೂ ಜೀವನ್ಮುಕ್ತರು. ಅಂತಹವರಿಗೆ ಮನೆಯೂ ಸ್ಮಶಾನವೂ–ಜೀವನ, ಮರಣಗಳೂ ಒಂದೇ ಆಗಿರುತ್ತವೆ.

೧೫೭. ಈ ಶರೀರದ ಮೇಲಿನ ವ್ಯಾಮೋಹ—ದೇಹವೇ ನಾನೆಂಬ ಭಾವನೆಯೇ ಎಲ್ಲಾ ಪಾಪ ಮೂಲ. ಎಲ್ಲಾ ಬಗೆಯ ಹೆದರಿಕೆ, ತಪ್ಪು, ದುರ್ಗುಣ ಅದರಿಂದ ಉದ್ಭವಿಸುವುದು. ತನ್ನ ದೇಹ ಪೋಷಣೆಗಾಗಿ, ತಾನು ಜೀವಿಸುವುದಕ್ಕಾಗಿ ಮನುಷ್ಯನು ಮಾಡದ ಪಾಪ ಕೆಲಸವೇ ಇಲ್ಲ—ದರೋಡೆ, ಮೋಸ, ಜನರ ಸರ್ವನಾಶ, ಕಡೆಗೆ ಕೊಲೆ–ಎಲ್ಲವನ್ನೂ ಮಾಡುತ್ತಾನೆ. "ಕಾಮಿನಿ ಕಾಂಚನ" ವೇ ಅವನು ಪೂಜಿಸುವ ದೇವರು. ಇದರ ಫಲವಾಗಿ ಅವನು ಸುಖವನ್ನರಸುತ್ತಾ ದುಃಖವನ್ನಪ್ಪಿಕೊಳ್ಳುತ್ತಾನೆ. ತನ್ನ ಸುಂದರ ಶರೀರದ ರಕ್ಷಣೆಗಾಗಿ ಸಾವನ್ನೇ ಹಿಡಿದುಕೊಳ್ಳುತ್ತಾನೆ. ಅವನು ಪ್ರತಿಗಳಿಗೆಯೂ ಸಾವಿಗಂಜುತ್ತಾನೆ. ಆದರೆ ಆತ್ಮ ಸಾಕ್ಷಾತ್ಕಾರವಾದವನು ಶರೀರದ ಅರಿವನ್ನೇ ಮರೆತು ಮೇಲಿದ್ದಿರುವನು.

ಕೇವಲ ಒಂದು ಕ್ಷುದ್ರ ಜಂತುವಿಗಾಗಿ ತನ್ನ ಇಡೀ ಜೀವನವನ್ನೇ ಅರ್ಪಿಸಲು ಸಿದ್ಧನಾಗಿರುವನು. ಈ ಶರೀರವನ್ನು ಅವನು ಗಮನಿಸುವುದೇ ಇಲ್ಲ. ಅದೊಂದು ಅಲ್ಪವಸ್ತು. ಮನುಷ್ಯರಲ್ಲಿ ಎರಡು ವಿಧ, ಆಸುರೀಮನುಷ್ಯ ದೈವೀಮನುಷ್ಯ. ದೇಹ ತಾವೆಂದು ತಿಳಿದಿರುವವರು ಮತ್ತು ಆ ಭಾವನೆ ಇಲ್ಲದವರು. ಯಾರು ಈ ದೇಹದ ಬಂಧನವನ್ನು ಹೊಂದಿರುವನೋ ಅವನು ಅಸುರೀ ಸ್ವಭಾವದವನು. ಯಾರು ದೇಹಭಾವವಿಲ್ಲದೆ ಇರುವನೊ ಅವನು ದೈವೀ ಸ್ವಭಾವದವನು.

೧೫೮. ಕರ್ಮದ ಫಲವನ್ನೆಲ್ಲಾ ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ಅಥವಾ ಮಧ್ಯಸ್ಥವಾಗಲಿ ಎಲ್ಲವನ್ನೂ ದೇವರಿಗೆ ಅರ್ಪಿಸಬೇಕು. ನಮ್ಮ ಒಳ್ಳೆಯ ಕೆಲಸಗಳಿಗಾಗಿ ಮತ್ತು ಧರ್ಮಕಾರ್ಯಗಳಿಗೆ ನಾವು ಹೆಮ್ಮೆಪಡುವುದು, ಅದರ ಫಲವನ್ನು ನಮ್ಮ ಭೋಗಗಳಿಗೆ ಮೀಸಲಾಗಿಡುವುದು, ನಾವೇ ಅವುಗಳನ್ನು ಮಾಡಿದೆವೆಂದು ಯೋಚಿಸುವುದು, ನಮ್ಮ ಪಾಪಕೃತ್ಯಗಳ ಮತ್ತು ಕೆಟ್ಟ ಕೆಲಸಗಳ ಫಲಗಳನ್ನು ಅವುಗಳಿಂದ ನಮಗೆ ಕೆಡಕಾಗುವುದೆಂದು ಹೆದರಿ ಆತನಿಗೆ ಅರ್ಪಿಸುವುದು, ಇದು ಒಳ್ಳೆಯ ಮನೋಭಾವವಲ್ಲ. ಹೀಗೆ ಮಾಡುವುದರಿಂದ ನಾವು, ನಮ್ಮ ಕೆಟ್ಟ ಕೆಲಸಗಳೆಲ್ಲಾ ಆತನ ಇಚ್ಛೆಯಿಂದಾದುವು, ಕೇವಲ ಅವನು ನಮ್ಮನ್ನು ಆಡಿಸಿದಂತೆ ಆಡಿದ್ದೇವೆಂದು ಅದರ ಪ್ರಾಯಶ್ಚಿತ್ತದಿಂದ ತಪ್ಪಿಸಿಕೊಳ್ಳಲು, ನಮ್ಮ ಜವಾಬ್ದಾರಿಯನ್ನು ದೇವರ ಮೇಲೆ ಹೊರಿಸಲು ಪ್ರಯತ್ನಿಸುತ್ತೇವೆ. ಇದು ಕೇವಲ ಆತ್ಮವಂಚನೆ. ಯಾರು ದೇವರಿಗಾಗಿ ಸಕಲವನ್ನೂ ಅರ್ಪಿಸುತ್ತಾರೋ ತನ್ನ ಸ್ವಾರ್ಥಕ್ಕಾಗಿ ಸ್ವಲ್ಪವೂ ಯೋಚಿಸುವುದಿಲ್ಲವೊ ಅಂತಹವರಿಗೆ ದೇವರು ಎಲ್ಲವನ್ನೂ ಕೊಡುತ್ತಾನೆ.

೧೫೯. ಯಾವ ಪವಿತ್ರನಾಮ ಅಥವಾ ಶಬ್ದೋಚ್ಚಾರಣೆಯಿಂದ ನಮ್ಮ ಮನಸ್ಸು ಅವಿದ್ಯೆಯಿಂದ ಪಾರಾಗುವುದೋ ಅದಕ್ಕೆ ಮಂತ್ರವೆಂದು ಹೆಸರು.

೧೬೦. ಪತಂಜಲಿ ಯೋಗಸೂತ್ರದಲ್ಲಿ ಅವಿದ್ಯೆಯ ಸ್ವಭಾವ ಹೀಗೆ ವಿವರಿಸಿದೆ. ಅವಿದ್ಯೆ, ಅನಿತ್ಯವನ್ನು (ಸಂಸಾರವನ್ನು) ನಿತ್ಯವೆಂದೂ, ಅಪವಿತ್ರವನ್ನು (ಶರೀರ) ಪವಿತ್ರವೆಂದೂ, ದುಃಖದಲ್ಲಿ (ವಿಷಯ ಭೋಗಾದಿಗಳ ಕಾಲದಲ್ಲಿ) ಸುಖ ಬುದ್ಧಿಯನ್ನೂ, ಅನಾತ್ಮ ವಸ್ತುವಿನಲ್ಲಿ (ಸ್ತ್ರೀ ಪುತ್ರಾದಿಗಳಾರೂ ನಿನ್ನವರಲ್ಲ, ಆದರೂ ಅವರೆಲ್ಲಾ) ಆತ್ಮೀಯರೆಂದು

ಕೇವಲ ಒಂದು ಕ್ಷುದ್ರ ಜಂತುವಿಗಾಗಿ ತನ್ನ ಇಡೀ ಜೀವನವನ್ನೇ ಅರ್ಪಿಸಲು ಸಿದ್ಧನಾಗಿರುವನು. ಈ ಶರೀರವನ್ನು ಅವನು ಗಮನಿಸುವುದೇ ಇಲ್ಲ. ಅದೊಂದು ಅಲ್ಪವಸ್ತು. ಮನುಷ್ಯರಲ್ಲಿ ಎರಡು ವಿಧ, ಆಸುರೀಮನುಷ್ಯ ದೈವೀಮನುಷ್ಯ. ದೇಹ ತಾವೆಂದು ತಿಳಿದಿರುವವರು ಮತ್ತು ಆ ಭಾವನೆ ಇಲ್ಲದವರು. ಯಾರು ಈ ದೇಹದ ಬಂಧನವನ್ನು ಹೊಂದಿರುವನೋ ಅವನು ಅಸುರೀ ಸ್ವಭಾವದವನು. ಯಾರು ದೇಹಭಾವವಿಲ್ಲದೆ ಇರುವನೊ ಅವನು ದೈವೀ ಸ್ವಭಾವದವನು.

೧೫೮. ಕರ್ಮದ ಫಲವನ್ನೆಲ್ಲಾ ಒಳ್ಳೆಯದಾಗಲಿ, ಕೆಟ್ಟದ್ದಾಗಲಿ, ಅಥವಾ ಮಧ್ಯಸ್ಥವಾಗಲಿ ಎಲ್ಲವನ್ನೂ ದೇವರಿಗೆ ಅರ್ಪಿಸಬೇಕು. ನಮ್ಮ ಒಳ್ಳೆಯ ಕೆಲಸಗಳಿಗಾಗಿ ಮತ್ತು ಧರ್ಮಕಾರ್ಯಗಳಿಗೆ ನಾವು ಹೆಮ್ಮೆಪಡುವುದು, ಅದರ ಫಲವನ್ನು ನಮ್ಮ ಭೋಗಗಳಿಗೆ ಮೀಸಲಾಗಿಡುವುದು, ನಾವೇ ಅವುಗಳನ್ನು ಮಾಡಿದೆವೆಂದು ಯೋಚಿಸುವುದು, ನಮ್ಮ ಪಾಪಕೃತ್ಯಗಳ ಮತ್ತು ಕೆಟ್ಟ ಕೆಲಸಗಳ ಫಲಗಳನ್ನು ಅವುಗಳಿಂದ ನಮಗೆ ಕೆಡಕಾಗುವುದೆಂದು ಹೆದರಿ ಆತನಿಗೆ ಅರ್ಪಿಸುವುದು, ಇದು ಒಳ್ಳೆಯ ಮನೋಭಾವವಲ್ಲ. ಹೀಗೆ ಮಾಡುವುದರಿಂದ ನಾವು, ನಮ್ಮ ಕೆಟ್ಟ ಕೆಲಸಗಳೆಲ್ಲಾ ಆತನ ಇಚ್ಛೆಯಿಂದಾದುವು, ಕೇವಲ ಅವನು ನಮ್ಮನ್ನು ಆಡಿಸಿದಂತೆ ಆಡಿದ್ದೇವೆಂದು ಅದರ ಪ್ರಾಯಶ್ಚಿತ್ತದಿಂದ ತಪ್ಪಿಸಿಕೊಳ್ಳಲು, ನಮ್ಮ ಜವಾಬ್ದಾರಿಯನ್ನು ದೇವರ ಮೇಲೆ ಹೊರಿಸಲು ಪ್ರಯತ್ನಿಸುತ್ತೇವೆ. ಇದು ಕೇವಲ ಆತ್ಮವಂಚನೆ. ಯಾರು ದೇವರಿಗಾಗಿ ಸಕಲವನ್ನೂ ಅರ್ಪಿಸುತ್ತಾರೋ ತನ್ನ ಸ್ವಾರ್ಥಕ್ಕಾಗಿ ಸ್ವಲ್ಪವೂ ಯೋಚಿಸುವುದಿಲ್ಲವೊ ಅಂತಹವರಿಗೆ ದೇವರು ಎಲ್ಲವನ್ನೂ ಕೊಡುತ್ತಾನೆ.

೧೫೯. ಯಾವ ಪವಿತ್ರನಾಮ ಅಥವಾ ಶಬ್ದೋಚ್ಚಾರಣೆಯಿಂದ ನಮ್ಮ ಮನಸ್ಸು ಅವಿದ್ಯೆಯಿಂದ ಪಾರಾಗುವುದೋ ಅದಕ್ಕೆ ಮಂತ್ರವೆಂದು ಹೆಸರು.

೧೬೦. ಪತಂಜಲಿ ಯೋಗಸೂತ್ರದಲ್ಲಿ ಅವಿದ್ಯೆಯ ಸ್ವಭಾವ ಹೀಗೆ ವಿವರಿಸಿದೆ. ಅವಿದ್ಯೆ, ಅನಿತ್ಯವನ್ನು (ಸಂಸಾರವನ್ನು) ನಿತ್ಯವೆಂದೂ, ಅಪವಿತ್ರವನ್ನು (ಶರೀರ) ಪವಿತ್ರವೆಂದೂ, ದುಃಖದಲ್ಲಿ (ವಿಷಯಭೋಗಾದಿಗಳ ಕಾಲದಲ್ಲಿ) ಸುಖ ಬುದ್ಧಿಯನ್ನೂ, ಅನಾತ್ಮ ವಸ್ತುವಿನಲ್ಲಿ (ಸ್ತ್ರೀ ಪುತ್ರಾದಿಗಳಾರೂ ನಿನ್ನವರಲ್ಲ, ಆದರೂ ಅವರೆಲ್ಲಾ) ಆತ್ಮೀಯರೆಂದು

ಭಾವಿಸುವುದು. ಅವಿದ್ಯೆ ಅನಾದಿ. ಅದರ ಪ್ರಾರಂಭ ಅಥವಾ ಕಾರಣ ವನ್ನು ನಿಶ್ಚಯಿಸಲಾಗುವುದಿಲ್ಲ. ಈ ಭೂಮಂಡಲದ ಸ್ವಾಭಾವಿಕ ಸ್ಥಿತಿ ಗಳಿಗನುಸಾರವಾಗಿ ಅದಕ್ಕೆ ವಿರಾಮ ಅಥವಾ ಕಾಲದ ಕೊನೆಯಲ್ಲಿ ಕೂಡ ಅದು ಬೀಜ ರೂಪದಲ್ಲಿ ಇರುವುದು. ಅವ್ಯಕ್ತ ಸ್ಥಿತಿಯಲ್ಲಿದ್ದು ನಂತರ ಸೃಷ್ಟಿಯ ಅಥವಾ ಕಲ್ಪದ ಕಾಲದಲ್ಲಿ ವ್ಯಕ್ತವಾಗುವುದು. ಎಲ್ಲಿಯವರೆಗೆ ಸತ್ಯದ ಜ್ಞಾನವುಂಟಾಗುವುದಿಲ್ಲವೊ ಅಲ್ಲಿಯವರೆಗೂ ಮನುಷ್ಯರು ಹುಟ್ಟು ಸಾವುಗಳಿಗೆ ಪುನಃ ಪುನಃ ಒಳಗಾಗಲೇ ಬೇಕು. ತಮ್ಮ ಸ್ವಭಾವ ಮತ್ತು ಕರ್ಮಗಳಿಗನುಸಾರವಾಗಿ ಮನುಷ್ಯರು, ಪ್ರಾಣಿಗಳು, ಅಥವಾ ಪಕ್ಷಿಗಳು ಮುಂತಾದುವುಗಳಾಗಿ ಪುನಃ ಪುನಃ ಹುಟ್ಟಿ ಅನೇಕ ಬಗೆಯ ದುಃಖ ವನ್ನನುಭವಿಸಬೇಕು.

೧೬೧. ಹಾಗಾದರೆ ಮುಕ್ತಿಗಾಗಿ ಪ್ರಯತ್ನಿಸುವುದು ನಿಷ್ಫಲವೇ? ನಿಜವಾಗಿಯೂ ಅಲ್ಲ. ಏಕೆಂದರೆ ಅವಿದ್ಯೆ ಕೆಲವು ವ್ಯಕ್ತಿಗಳಿಗೆ ಕೊನೆ ಯಾಗಿರುತ್ತದೆ. ನಿರಂತರ ವ್ಯಥೆ ಪಟ್ಟಮೇಲೆ ತಾರತಮ್ಯ ಭಾವನೆ ಮತ್ತು ತ್ಯಾಗ (ವಿವೇಕ ವೈರಾಗ್ಯ) ಉದ್ಭವಿಸಿ ಜೀವನು ದೇವರಲ್ಲಿ ಶರಣಾಗುವನು. ಆಗ ಅವಿದ್ಯೆ ಆಮೂಲಾಗ್ರವಾಗಿ ನಾಶವಾಗುವುದು. ದೇವರ ಕೃಪೆಯಿಂದ ಜ್ಞಾನಾಭಿವೃದ್ಧಿಯಾಗುವುದು. ಗೀತೆಯಲ್ಲಿ ಅಪಾರ ಕರುಣಾಮಯ ನಾದ ಭಗವಂತ ಬಾರಿಬಾರಿಗೂ ಹೀಗೆ ಸಾರಿದ್ದಾನೆ. "ದುಃಖದಿಂದ ತುಂಬಿ ರುವ ಈ ಕ್ಷಣಿಕ ಪ್ರಪಂಚಕ್ಕೆ ಬಂದಿರುವೆ. ಕೇವಲ ನನ್ನನ್ನು ಪೂಜಿಸಿ ಶರಣಾಗು. ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಪಾರುಮಾಡು ವೆನು. ಹುಟ್ಟು ಸಾವುಗಳಿಂದ ಕೂಡಿದ ದಾಟುವುದಕ್ಕೆ ಅಸಾಧ್ಯವಾದ ಈ ಭವಸಾಗರದಿಂದ ಆನಂದಕ್ಕೆ ಒಯ್ಯುತ್ತೇನೆ".

೧೬೨. ಬಂಗಾಳದಲ್ಲಿ ಒಂದು ಗಾದೆ ರೂಢಿಯಲ್ಲಿದೆ: "ಆಹಾರವನ್ನು ನನ್ನ ಬಾಯೆಡೆಗೆ ತಾ: ನನಗೆ ಸ್ವಲ್ಪವೂ ಅಲುಗಾಡಿಸಲಾಗುವುದಿಲ್ಲ." ನಿನ್ನ ಪಿತೃಗಳಿಗೂ ಅವರ ಸುಕೃತ್ಯಗಳಿಗೂ ಧನ್ಯವಾದ! ಈಗಿನ ಕಾಲ ದಲ್ಲಿ ಬಹುಮಂದಿ ಈ ಗುಂಪಿಗೆ ಸೇರಿದ್ದಾರೆ. ಯಾರಿಗೂ ತಾವು ಶ್ರಮ ಪಡಲು ಇಚ್ಛೆ ಇಲ್ಲ. ಪ್ರತಿಯೊಬ್ಬರೂ ಉಚಿತವಾಗಿ ಅಥವಾ ಕೆಲವು ಕಪಟ ತಂತ್ರಗಳಿಂದ ತಮ್ಮ ಇಷ್ಟಾರ್ಥಸಿದ್ಧಿಯನ್ನು ಬಯಸುತ್ತಾರೆ. ಅದರಲ್ಲೂ ಆಧ್ಯಾತ್ಮಿಕ ವಸ್ತುಗಳ ಸಂಬಂಧದಲ್ಲಿ ಜನರು ಸ್ವಲ್ಪವೂ ಪರಿಶ್ರಮ ಮತ್ತು ಕಷ್ಟಪಡಲು ಇಚ್ಛಿಸದೆ ಎಲ್ಲವೂ ತಮಗೆ ಮತ್ತೊಬ್ಬರಿಂದಾಗ

ಬೇಕೆಂದು ಇಚ್ಛಿಸುತ್ತಾರೆ. ಒಂದು ಗಂಟೆ ಅಥವಾ ಸ್ವಲ್ಪ ಹೊತ್ತು ಕಣ್ಣುಮುಚ್ಚಿಕೊಂಡು ಕುಳಿತು ಕೆಲವು ದಿನ ಅಥವಾ ಕೆಲವು ತಿಂಗಳು ಗಳಾದಮೇಲೆ ಅವರು, "ಅಯ್ಯೋ! ನಾನೇನನ್ನೂ ಸಾಧಿಸುತ್ತಿಲ್ಲ. ನನಗೆ ಮನಸ್ಸನ್ನು ನಿಗ್ರಹಿಸಲಾಗುತ್ತಿಲ್ಲ. ನನಗೆ ಮುಂದುವರಿಯುತ್ತಿದ್ದೇನೆಂದು ಸ್ವಲ್ಪವೂ ಅನ್ನಿಸುತ್ತಿಲ್ಲ" ಎಂದು ಗೊಣಗುಟ್ಟುತ್ತಾರೆ. ಸ್ವಾಮಿ ವಿವೇಕಾ ನಂದರು, "ಕೇವಲ ಕೆಲವು ಕಾಸುಗಳನ್ನು ಎಸೆದು ಕೊಂಡುಕೊಳ್ಳುವುದಕ್ಕೆ ದೇವರೇನು ಸೊಪ್ಪಿನ ಕಂತೆ ಅಥವಾ ಮೀನೆಂದು ಭಾವಿಸಿದಿರಾ?" ಎನ್ನು ತ್ತಿದ್ದರು. ಬೇಗ ಫಲಕ್ಕೆ ಆಸೆಪಡುವಿರೇಕೆ? ಪ್ರಯತ್ನ ಪಡುತ್ತಲೇ ಇರು. ನಿನ್ನ ಪ್ರಯತ್ನ ಸಕಾಲದಲ್ಲಿ ಫಲಕಾರಿಯಾಗುವುದು. ಈ ಜಗತ್ತಿನ ಜನರು ನೀನು ಕೆಲಸಮಾಡಿದ್ದಕ್ಕೆ ಸಂಬಳ ಕೊಡುತ್ತಾರೆ. ನೀನು ದೇವರಿಗಾಗಿ ಕೆಲಸ ಮಾಡಿದರೆ ಆತನು ಕೊಡುವುದಿಲ್ಲವೇನು? ಶ್ರದ್ಧೆ, ನಿಶ್ಚಲತೆ, ನಿಷ್ಕಪಟಪ್ರೇಮ, ಸಹನೆ ಮತ್ತು ದೀರ್ಘ ಪ್ರಯತ್ನ ಆವಶ್ಯಕ. ಒಂದು ಬೀಜವನ್ನು ನೆಟ್ಟಕೂಡಲೆ ಅದು ಎದ್ದು ಮರವಾಗಿ ಹಣ್ಣು ಬಿಡು ತ್ತದೆಯೇ? ಅದಕ್ಕೆ ಮುಂಚೆ ಕಷ್ಟಪಟ್ಟು ಕೆಲಸ ಮಾಡಬೇಕು, ಬಹಳ ದಿನ ಇದನ್ನು ಮಾಡಬೇಕು. ಸಕಾಲದಲ್ಲಿ ನಮಗೆ ಅದರಿಂದ ಫಲ ದೊರಕುವುದು.

೧೬೩. ಅನೇಕರು ತಾವು ಉಪದೇಶ ಪಡೆದ ಹೊಸದರಲ್ಲಿ ಮನಃ ಪೂರ್ವಕ ಜಪ ಧ್ಯಾನಮಾಡಿ ಸಂತೋಷಪಡುವರು. ಅನಂತರ ಆಸಕ್ತಿ ಹಠಾತ್ತಾಗಿ ಬತ್ತಿಹೋಗಿ, ಅವರಿಗೆ ಇನ್ನು ಮುಂದೆ ಧ್ಯಾನಮಾಡಲು ಇಚ್ಛೆಯೇ ಬರುವುದಿಲ್ಲ. ಅವರ ಹೃದಯ ಬತ್ತಿದಂತೆ ಭಾಸವಾಗುತ್ತದೆ. ಅವರು ಅಸಹಾಯರಾಗಿ ಯಾವುದೊಂದು ಆಸರೆಯೂ ಇಲ್ಲದವರಾಗು ತ್ತಾರೆ. ಆದರೆ ಇದಕ್ಕಾಗಿ ಹೆದರಬೇಕಾಗಿಲ್ಲ. ನಿರಾಶೆಪಡಬೇಕಾಗಿಲ್ಲ. ಪ್ರತಿಯೊಂದಕ್ಕೂ ತಗ್ಗು ದಿಣ್ಣೆ, ಉಬ್ಬರ ಇಳಿತ, ಐಕ್ಯತೆ ವಿರಹಗಳಿವೆ. ಅದರಂತೆಯೇ ಸಾಧಕನ ಜೀವನದಲ್ಲಿಯೂ ಕೂಡ ಆಶೆ ನಿರಾಶೆ ಕತ್ತಲೆ ಬೆಳಕುಗಳಿರುತ್ತವೆ. ಯಾರಲ್ಲಿ ಈಶ್ವರ ಲಾಭದ ಆಕಾಂಕ್ಷೆ ತೀವ್ರವಾಗಿ ಜಾಗ್ರತವಾಗಿದೆಯೋ ಅವರಲ್ಲಿ ಇದರಿಂದ ವ್ಯಾಕುಲತೆ ಮತ್ತೂ ಹೆಚ್ಚು ವುದು. ಅವನು ಕಾತರನಾಗಿರಲಿಚ್ಛಿಸುತ್ತಾನೆ, ಭಗವತ್ಕೃಪಾಭಿಕ್ಷೆ ಬೇಡು ತ್ತಾನೆ. ದ್ವಿಗುಣಿತ ಉತ್ಸಾಹದಿಂದ ಹೆಚ್ಚು ಹೆಚ್ಚು ಸಾಧನೆಯಲ್ಲಿ ನಿರತ ನಾಗಿ ಹಿಂದಿಗಿಂತ ಹೆಚ್ಚು ಆನಂದವನ್ನನುಭವಿಸುತ್ತಾನೆ.

೧೬೪. ಮತ್ತೊಂದು ವರ್ಗದ ಜನರಿದ್ದಾರೆ. ಅವರ "ನವಾನುರಾಗ" ಕ್ರಮೇಣ ಕಡಿಮೆಯಾಗುವುದು. ಮನಸ್ಸು ಪೂರ್ವದ ಉತ್ಸಾಹ ಆನಂದಗಳನ್ನು ಕಳೆದುಕೊಳ್ಳುವುದು. ಆಧ್ಯಾತ್ಮಿಕ ಸಾಧನೆ ಹಾಸ್ಯಾಸ್ಪದವಾಗುವುದು. ಕಾಲವಾದಂತೆಲ್ಲಾ ಸಾಧನೆ ಬೇಸರಗೊಳಿಸುವ, ಸ್ವಾರಸ್ಯರಹಿತವಾದ ನಿತ್ಯಕೆಲಸಗಳಂತೆ ಅಥವಾ ನ್ಯಾಯ ಶಾಸ್ತ್ರದ ಬರವಣಿಗೆಯನ್ನು ಔಪಚಾರಿಕವಾಗಿ ಅನುಸರಿಸುವಂತೆ ಮುಂದುವರಿಯುತ್ತದೆ. ಅಥವಾ ಸಾಧನೆ ನಿಂತೇ ಹೋಗುತ್ತದೆ. ಬಹಳ ಪ್ರಾಪಂಚಿಕ ಕೆಲಸ ಕಾರ್ಯಗಳಿವೆ, ಸ್ವಲ್ಪವೂ ಕಾಲವೇ ಇಲ್ಲ, ಆರೋಗ್ಯವಿಲ್ಲ ಮುಂತಾದ ಸುಳ್ಳು ಕಾರಣಗಳು ಮುಂದೇಳುತ್ತವೆ. ಇಂತಹವರು ಕೆಲವುವೇಳೆ ಕ್ಷಣಿಕ ಸಾಮೂಹಿಕ ಉತ್ಸಾಹ ಪ್ರೇರಿತರಾಗಿಯೋ, ಸಂಸಾರದ ಪೆಟ್ಟಿಗೆ ಸಿಕ್ಕಿ ದುಃಖ ಪಡುವಾಗ ಬರುವ ವೈರಾಗ್ಯಕ್ಕೆ ವಶರಾಗಿಯೋ, ಅಥವಾ ಯಾವುದಾದರೂ ಸ್ವಾರ್ಥಸಿದ್ಧಿಗಾಗಿಯೋ ಉಪದೇಶ ಪಡೆಯುವರು. ಅಥವಾ ಸಂಸಾರ ತ್ಯಜಿಸುವರು. ಇಂತಹವರಿಂದ ಹೆಚ್ಚು ಆಧ್ಯಾತ್ಮಿಕ ಅಭಿವೃದ್ಧಿಯನ್ನು ನಿರೀಕ್ಷಿಸಲಾರೆವು.

೧೬೫. ಅನೇಕರು, "ಗುರು ನನಗೆ ಉಪದೇಶ ಕೊಟ್ಟಾದ ಮೇಲೆ ಅವರು ನಮ್ಮ ಪಾಪದ ಜವಾಬ್ದಾರಿಯನ್ನು ವಹಿಸಿಕೊಂಡಿದ್ದಾರೆ. ನಾವಿನ್ನು ಮಾಡಬೇಕಾದ್ದು, ಯೋಚನೆಪಡಬೇಕಾದ್ದು ಯಾವುದೂ ಇಲ್ಲ. ಎಲ್ಲವನ್ನೂ ಕೇವಲ ಆತನ ಕೃಪೆಯಿಂದ ಪಡೆಯಬಹುದು" ಎಂದು ಯೋಚಿಸುತ್ತಾರೆ. ಒಬ್ಬನ ಪಾಪದ ಹೊರೆಯನ್ನು ಮತ್ತೊಬ್ಬನಿಗೆ ಹೊರಿಸುವುದು, ಅಥವಾ ಒಬ್ಬನ ಪಾಪದ ಜವಾಬ್ದಾರಿಯನ್ನು ತನ್ನ ಹೆಗಲ ಮೇಲೆ ಹೊತ್ತುಕೊಳ್ಳುತ್ತೇವೆಂಬುದು, ನಾವು ತಿಳಿದಿರುವಷ್ಟು ಸುಲಭವಲ್ಲ. ಇದು ನಿಜವಾದ ಪಕ್ಷಕ್ಕೆ ಪ್ರತಿಯೊಬ್ಬರೂ ಪ್ರಯಾಸವಿಲ್ಲದೆ ಪಾಪರಹಿತರಾಗುವುದರಿಂದ ಈ ಭೂಮಂಡಲ ನಿಜವಾಗಿಯೂ ಬೇರೊಂದು ಸ್ಥಳವಾಗುತ್ತಿತ್ತು. ನೀನು ನಿನ್ನ ಪಾಪದ ಹೊರೆಯನ್ನು ಗುರು ಅಥವಾ ದೇವರಿಗೆ ಕೊಡುವುದಾದರೆ ನಿನ್ನ ಭಾಗದ ಪುಣ್ಯ ಮತ್ತು ಒಳ್ಳೆಯ ಕೆಲಸಗಳ ಫಲವನ್ನೂ ಅದೇ ಕಾಲದಲ್ಲಿ ಕೊಡಬೇಕು. ಆದರೆ ನೀನು ಕೇವಲ ಯಾವುದರಿಂದ ವ್ಯಥೆ ನೋವುಂಟಾಗುತ್ತದೆಯೋ ಅಂತಹ ಪಾಪದ ಭಾಗವನ್ನು ಮಾತ್ರ ಕೊಟ್ಟು, ಈ ಜನ್ಮ ಅಥವಾ ಮುಂದಿನ ಜನ್ಮಗಳಲ್ಲಿ ನಿನಗೆ ಸುಖಕೊಡುವ ಪುಣ್ಯ ಕೆಲಸಗಳ ಫಲವನ್ನು ನೀನೇ ಇಟ್ಟುಕೊಳ್ಳಬೇಕೆಂದು ಬಯಸಿದರೆ, ನೀನು ಕೊಡುವುದೂ ಇಲ್ಲ, ದೇವರು ಅದನ್ನು ನಿಜವಾಗಿ ಒಪ್ಪಿಕೊಳ್ಳುವುದೂ ಇಲ್ಲ.

ಹಾಗೆ ಯಾರಾದರೂ ಈ ಬಗೆ ತಮ್ಮ ಪಾಪದ ಹೊರೆಯನ್ನು ಮತ್ತೊಬ್ಬರಿಗೆ ವಹಿಸಿ ಪಾಪರಹಿತನಾದರೆ ಆತ ಖಂಡಿತವಾಗಿ ಮತ್ತೆ ಪಾಪ ಮಾಡಲಿಕ್ಕೆ ಹೋಗುವುದಿಲ್ಲ. ಆದ್ದರಿಂದ ಉಪದೇಶ ಪಡೆದ ಮೇಲೂ ಒಬ್ಬನಲ್ಲಿ ಪಾಪದ ಅಥವಾ ಕೆಡಕಿನ ಸ್ವಭಾವ ಉಳಿದಿದ್ದರೆ, ಒಂದು ನವ ಜೀವನ ಉದಯವಾಗದಿದ್ದಲ್ಲಿ, ಪಾಪಗಳು ದೀಕ್ಷೆಯ ಸಮಯದಲ್ಲಿ ಮಾಯವಾಗಿ ನಂತರ ಬರುವುದರಲ್ಲಿ ಸಂದೇಹವಿಲ್ಲ. ಇದನ್ನು ಶ್ರೀರಾಮಕೃಷ್ಣರು "ಗಂಗಾ ನದಿಯಲ್ಲಿ ಸ್ನಾನ ಮಾಡುತ್ತಿದ್ದಾಗ ಪಾಪಗಳು ಹತ್ತಿರದ ಮರಗಳ ಕೊಂಬೆಗಳಲ್ಲಿ ಅವಿತುಕೊಂಡಿರುತ್ತವೆ. ಸ್ನಾನಮಾಡಿದವನು ನದಿಯಿಂದ ಮೇಲೆದ್ದು ಬಂದಾಗ ಅವು ಅವನ ಹೆಗಲ ಮೇಲೇರುವುವು" ಎಂದು ಹಾಸ್ಯ ಮಾಡುತ್ತಿದ್ದರು.

೧೬೬ ಹಾಸ್ಯವನ್ನು ಬಿಟ್ಟು ಒಮ್ಮೆ ಯೋಚಿಸಿನೋಡು. ನಿನಗೆ ಒಂದು ಸಾಸಿವೆಯಷ್ಟಾದರೂ ಗುರುವಿನಲ್ಲಿ ಶ್ರದ್ಧೆ ಪ್ರೇಮ ಅಥವಾ ಭಕ್ತಿ ಯಿದ್ದರೆ ನಿನ್ನ ಕೆಟ್ಟ ಕೃತ್ಯಗಳನ್ನು ಆತನ ಮೇಲೆ ಹೇರಿ ಅವರಿಗೆ ಯಾತನೆ ಯನ್ನು ಉಂಟುಮಾಡಲು ನಿನಗೆ ಮನಸ್ಸು ಬರುವುದೇ? ಆತನೇನು ಒಂದು ಗೊಬ್ಬರದ ಗುಂಡಿಯೆ? ಯಾರಿಗೆ ಪ್ರೇಮದ ಅರಿವೇ ಇಲ್ಲವೋ, ಯಾರು ಪೂರ್ಣ ಸ್ವಾರ್ಥಿಗಳೋ, ಪ್ರಾಪಂಚಿಕ ವಸ್ತುಗಳ ಮೇಲೆ ವ್ಯಾಮೋಹ ವಿದೆಯೋ ಅಂತಹವರು ಮಾತ್ರ ಇಷ್ಟು ನೀಚರಾಗಬಹುದು. ನಿಜವಾಗಿ ಅಂತಹವರನ್ನು ಶಿಷ್ಯರೆಂದೂ ಪರಿಗಣಿಸಲಾಗುವುದಿಲ್ಲ. ಯಾರಿಗೆ ಗುರುವಿ ನಲ್ಲಿ ನಿಶ್ಚಲ ಶ್ರದ್ಧೆ ಮತ್ತು ಪ್ರೀತಿ ಇದೆಯೋ ಅಂತಹವರು ಪುನಃ ಪಾಪ ಮಾಡುವುದಿಲ್ಲ. ಏಕೆಂದರೆ ಗುರುವಿಗೆ ಇದರಿಂದ ನೋವುಂಟಾಗಬಹು ದೆಂದು ಯೋಚಿಸುವರು. ಅಹುದು, ಕೇವಲ ಅಂತಹ ಶಿಷ್ಯರ ಪಾಪದ ಹೊರೆಯನ್ನು ಆತನು ಹೊತ್ತುಕೊಳ್ಳುತ್ತಾನೆ. ನಿಜವಾಗಿ, ದೇವರು ಗುರು ವಿನ ರೂಪದಿಂದ ಈ ಪಾಪದ ಹೊರೆಯನ್ನು ತಾನೇ ಹೊತ್ತು ಶಿಷ್ಯನನ್ನು ಪಾಪವಿಮುಕ್ತನನ್ನಾಗಿ ಮಾಡುತ್ತಾನೆ.

೧೬೭. ಶಿಷ್ಯರ ಕೆಲವು ಪಾಪಗಳು ಗುರುವಿನ ಮೇಲೆ ಪರಿಣಾಮ ವನ್ನುಂಟುಮಾಡುತ್ತವೆ. ಏಕೆಂದರೆ ತಾರತಮ್ಯವಿಲ್ಲದೆ ಮತ್ತು ಅವರ ನೀತಿ ಮತ್ತು ಅರ್ಹತೆಯನ್ನು ಗಮನಿಸದೆ ಮಂತ್ರದೀಕ್ಷೆಯನ್ನು ಕೊಟ್ಟರೆ ಪವಿತ್ರ ಪಾಪರಹಿತನಾದ ಗುರುವಿನ ದೈಹಿಕ ಆರೋಗ್ಯ ಪ್ರಬಲ ಖಾಯಿ ಲೆಗೆ ಒಳಗಾಗುವುದು. ಅನೇಕವೇಳೆ ಅವರ ಆಯಸ್ಸನ್ನು ಕೂಡ ಇದು

ಕ್ಷೀಣಿಸುವುದು ನಮಗೆ ಕಾಣಬರುವುದು. ಆದರೆ ಮತ್ತೊಬ್ಬರಿಗೆ ಒಳ್ಳೆಯ ದನ್ನು ಮಾಡಬೇಕೆಂದು ಅವರನ್ನು ದೇವರೆಡೆಗೆ ಒಯ್ಯಬೇಕೆಂಬ ನಿಸ್ವಾರ್ಥಿ ಯಾದ ಗುರು ತನ್ನ ಅಗಾಧ ಕರುಣೆಯಿಂದ, ಇವೆಲ್ಲದರ ಅರಿವಿದ್ದರೂ ಕೂಡ ತನ್ನ ದೇಹದ ಯೋಚನೆಯೇ ಇಲ್ಲದೆ, ತನ್ನ ಶಿಷ್ಯರ ಮೇಲ್ಮೆಗಾಗಿ ತನ್ನ ಜೀವನವನ್ನು ಹೆಜ್ಜೆ ಹೆಜ್ಜೆಗೂ ಒತ್ತೆಯಿಡುತ್ತಾನೆಂಬುದನ್ನು ನಾವು ನೋಡುತ್ತೇವೆ. ಅವತಾರ ಪುರುಷರು ಇತರರ ಪಾಪದ ಹೊರೆಯನ್ನು ತಾವೇ ತೆಗೆದುಕೊಳ್ಳುತ್ತಾರೆ. ಅದರ ಫಲವಾಗಿ ಅವರು ಅನೇಕ ಖಾಯಿಲೆ ಗಳಿಂದ ನರಳಬೇಕಾಗುತ್ತದೆ. "ಗಿರೀಶನ ಪಾಪ ಸ್ವೀಕಾರದಿಂದಲೇ ನನಗೆ ಈ ಶಾರೀರಕ ವ್ಯಾಧಿ" ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು.

೧೬೮. ಸದ್ಗುರು ಸ್ವಲ್ಪವೂ ಹಿಂದೆ ಮುಂದೆ ನೋಡದೆ, ಸಂದೇಹ ಪಡದೆ ಎಂದಾದರೂ ಹಿಂದಕ್ಕೆ ಪಡೆಯ ಬಹುದೆಂಬ ಯೋಚನೆ ಕೂಡ ಇಲ್ಲದೆ, ತನ್ನ ಜೀವಮಾನವೆಲ್ಲಾ ಕಷ್ಟಪಟ್ಟು ಕಠಿಣ ತಪಸ್ಸಿನಿಂದ ಆರ್ಜಿ ಸಿದ ಅಮೂಲ್ಯವಾದ ಆಧ್ಯಾತ್ಮಿಕ ಸಂಪತ್ತನ್ನು ತನ್ನ ಶಿಷ್ಯನಿಗೆ ಧಾರೆ ಎರೆಯುತ್ತಾನೆ. ಅಂದ ಮೇಲೆ ಈ ಕ್ಷಣಿಕವಾದ ಶರೀರದ ಮಾತೇನು! ಶಿಷ್ಯ ಶುದ್ಧ ಸಾತ್ತ್ವಿಕನಾಗಿ ಯಥಾರ್ಥ ಭಗವತ್ಪ್ರೇಮಿಯಾಗಿದ್ದರೆ ಮಾತ್ರ ಗುರುವಿನ ಆಧ್ಯಾತ್ಮಶಕ್ತಿ ಸಂಚಾರವನ್ನು ತನ್ನ ಹೃದಯದಲ್ಲಿ ಅರಿಯ ಬಹುದು, ಗುರು ತೋರಿದ ಹಾದಿಯಲ್ಲಿ ಶಿಷ್ಯನು ಶ್ರದ್ಧೆ ವಿಶ್ವಾಸದಿಂದ ಮುಂದುವರಿದಷ್ಟೂ ಅವನ ಮನಸ್ಸೂ ಶುದ್ಧವಾಗುತ್ತದೆ. ಆತನು ಗುರು ವಿನ ಶಕ್ತಿಯ ಮಹತ್ವ ಮತ್ತು ಕೃಪೆಯನ್ನು ಗ್ರಹಿಸುತ್ತಾನೆ. ಗುರುಕೃಪೆ ಮತ್ತು ಶಿಷ್ಯನ ನಿರಂತರ ಪರಿಶ್ರಮ ಇವೆರಡರ ಸಮ್ಮಿಳನದಿಂದ ಸಾಕ್ಷಾ ತ್ಕಾರ ಲಭಿಸುವುದು.

೧೬೯. ಮಾನವ ಜೀವನದ ಧ್ಯೇಯ ಮತ್ತು ಅಂತ್ಯ ದೈವ ಸಾಕ್ಷಾ ತ್ಕಾರವೆಂಬುದನ್ನು ಮರೆಯಬೇಡ. ನೀನು ಬಾಳನ್ನು ಪ್ರಾಣಿಗಳಂತೆ ಕೇವಲ ತಿನ್ನುವುದು, ಮಲಗುವುದು, ಇಂದ್ರಿಯ ಭೋಗ, ವ್ಯರ್ಥ ಹರಟೆ ಮತ್ತು ನಿಷ್ಪ್ರಯೋಜಕ ಕೆಲಸಗಳಲ್ಲಿ ಕಳೆದರೆ ವ್ಯರ್ಥವಾಗುವುದು. ನೀನೂ ವ್ಯಥೆಗೀಡಾಗುವೆ. ಎಲ್ಲಿಯವರೆಗೆ ನಿನ್ನ ದೇಹ ಮತ್ತು ಮನಸ್ಸು ಗಳಲ್ಲಿ ಶಕ್ತಿ ಚೈತನ್ಯಗಳಿವೆಯೋ ಅಲ್ಲಿಯವರೆಗೂ ಅಂತಃಕರಣ ಪೂರ್ವಕ ನಿನ್ನ ಶಕ್ತಿಯನ್ನೆಲ್ಲಾ ಸಾಧನೆಯಲ್ಲಿ ಉಪಯೋಗಿಸು. ಏನು ಬಂದರೂ ನಿನ್ನ ಪ್ರಯತ್ನದಿಂದ ವಿಮುಖನಾಗಬೇಡ. "ಈ ಸಾಧನೆಗಳನ್ನು ನಂತರ

ಮಾಡಬಹುದು. ದೇವರು ಇಚ್ಛಿಸಿದಾಗ ಅಥವಾ ಒಲಿದಾಗ ಮಾತ್ರ ಇವುಗಳೆಲ್ಲಾ ಸಾಧ್ಯ"—ಎನ್ನುವುದು ಏನೂ ಕೆಲಸಕ್ಕೆ ಬಾರದ ಮೂಢರ ಮಾತು. ಅವರು ಎಂದೂ ಏನನ್ನೂ ನಿಷ್ಕಾಪಟ್ಯದಿಂದ ಮಾಡಬಯಸು ವುದಿಲ್ಲ. ಯಾವ ಒಳ್ಳೆಯ ಕೆಲಸವೂ ಅವರಿಂದ ಅಸಾಧ್ಯ.

೧೭೦. ಜೀವನದ ಅತಿ ಶ್ರೇಷ್ಠವಾದ ಕಾಲವೆಂದರೆ ಹದಿನಾರು ವರುಷದಿಂದ ಮೂವತ್ತು ವರುಷಗಳವರೆಗೆ ಮಾತ್ರ. ಆಗಲೇ ಕೆಲಸ ಮಾಡಲು ದೇಹದಲ್ಲಿ ಪೂರ್ಣ ಶಕ್ತಿಯಿರುವುದು. ನಮ್ಮಿಷ್ಟಾರ್ಥಸಿದ್ಧಿಗೆ ಬೇಕಾಗಿರುವ ಉತ್ಸಾಹ, ಕೆಲಸ ಪ್ರಾರಂಭಿಸಬೇಕೆಂಬ ಇಚ್ಛೆ, ಧೈರ್ಯ, ಆತ್ಮ ಶ್ರದ್ಧೆ, ಹಿಡಿದ ಕೆಲಸವನ್ನು ಮಾಡುವ ಹಠ, ಮತ್ತು ಚಿತ್ತಶಕ್ತಿ ಇವೆಲ್ಲಾ ಸ್ವಾಭಾವಿಕವಾಗಿ ಮನಸ್ಸಿನಲ್ಲಿರುತ್ತವೆ. ಈ ಜೀವನದ ಅಮೂಲ್ಯವಾದ ಕಾಲವನ್ನೇ ಪೂರ್ತಿ ಪೋಲುಮಾಡಿ ನಂತರ ಮುದಿವಯ ಸ್ಸಿನಲ್ಲಿ ಸಾಧನೆ ಮಾಡಬೇಕೆಂದಿರುವೆಯೇನು? ನಿಷ್ಫಲವಾದ ಆಸೆ! ಇದು ಕೇವಲ ಆತ್ಮ ವಂಚನೆ. ಆಗ ಮನಸ್ಸು ಇಚ್ಛೆಪಟ್ಟರೂ ಶ್ರಮವನ್ನು ತಡೆ ಯಲಾಗದೆ ದೇಹ ಬಿದ್ದುಹೋಗುತ್ತದೆ. ಎಲ್ಲಾ ಬಗೆಯ ನಿತ್ಯರೋಗಕ್ಕೆ ತುತ್ತಾಗಿ ಮನಸ್ಸು ಚಂಚಲವಾಗುತ್ತದೆ. ಸ್ವಲ್ಪ ಶ್ರಮವಾದರೂ, ತುಂಬಾ ಆಯಾಸವಾದಂತಾಗಿ ಸೊರಗಿ ಹೋಗುತ್ತದೆ. ಸೋಮಾರಿತನ, ತೂಕಡಿಕೆ ಎಲ್ಲವೂ ಬರುತ್ತದೆ. ನಿಸ್ಸಹಾಯರಾಗಿ ಮಹಾ ಆಸೆ ಆಕಾಂಕ್ಷೆ ಗಳೆಲ್ಲಾ ಮುರಿದುಬಿದ್ದು, ಕೇವಲ ಒಂದು ಚಿಕ್ಕ ಕೆಲಸ ಅಥವಾ ಅಪೇಕ್ಷೆ ಗಾಗಿ ಮತ್ತೊಬ್ಬರನ್ನು ಪೂರ್ಣ ಅವಲಂಬಿಸಬೇಕಾಗುವುದು. ಜೀವನ ಅಸಹನೀಯವಾಗುವುದು. ಒಂದುವೇಳೆ ದೇಹ ದೃಢವಾಗಿದ್ದರೂ ನಿನ್ನ ಪೂರ್ವ ಜನ್ಮದ ಸಂಸ್ಕಾರ ಮತ್ತು ಅಭ್ಯಾಸದಿಂದ, ಹೆಂಡತಿ ಮಕ್ಕಳ ಮೇಲಿನ ಮೋಹ—ನಿನ್ನನ್ನು ಕಟ್ಟಿಹಾಕುವುವು. ಪರಮೇಶ್ವರನ ಧ್ಯಾನ ಕ್ಕಾಗಲೀ, ಅವನನ್ನು ಪಡೆಯುವುದಕ್ಕೆ ಪ್ರಯತ್ನವಾಗಲೀ ಅಸಾಧ್ಯ. ಆಗ ಮನಸ್ಸನ್ನು ವಿಷಯ ವಸ್ತುಗಳಿಂದ ಬಿಡಿಸುವುದು ಎಷ್ಟು ಪ್ರಯತ್ನ ಪಟ್ಟರೂ ನಿಷ್ಫಲ. ಇದೆಲ್ಲಕ್ಕಿಂತ ಹೆಚ್ಚಾಗಿ ಜೀವನ ಕ್ಷಣಿಕ. ಇಂದು ಇದೆ, ನಾಳೆ ಇಲ್ಲ. ನಾನು ಮುದುಕನಾಗುವವರೆಗೂ ಬದುಕಿರುತ್ತೇನೆ, ನನಗೆ ಆಗ ವಿರಾಮ ಸಿಕ್ಕುವುದು ಎಂದು ಯಾರು ಹೇಳ ಬಲ್ಲರು? ನೀನೇನು ಮಾಡಬೇಕಾದರೂ ಈಗಲೇ ಮಾಡು. ನೀನು ನಾಳೆವರೆಗೂ ಅದನ್ನು ತಳ್ಳಿದರೆ ಆ ನಾಳೆ ಎಂದಿಗೂ ಬರದೆ ಇರಬಹುದು.

೧೭೧. ಸಾಧಕನು ಈ ಕೆಳಗಣ ಸದ್ಗುಣ ಮತ್ತು ನಿಯಮವನ್ನು ಅಭ್ಯಾಸ ಮಾಡುವುದು ಆವಶ್ಯಕ.

ದೇವರಲ್ಲಿ ದೃಢನಂಬುಗೆ, ಆತನಲ್ಲಿ ಶರಣಾಗುವುದು.

ಬ್ರಹ್ಮಚರ್ಯ ಅಥವಾ ಇಂದ್ರಿಯ ನಿಗ್ರಹವನ್ನು ಆಚರಿಸುವುದು; ಎಂದರೆ ಕಾಮವನ್ನು ತ್ಯಜಿಸುವುದು. ಕ್ಷಣಭಂಗುರಗಳಾದ ಮತ್ತು ಕೆಟ್ಟ ಪ್ರಕೃತಿಯುಳ್ಳ ವಿಷಯ ವಸ್ತುಗಳನ್ನು ವಿಮರ್ಶಿಸಿ ಅವುಗಳ ಮೇಲಿನ ವ್ಯಾಮೋಹವನ್ನು, ಹಸಿವನ್ನು ವರ್ಜಿಸಬೇಕು. ಎಲ್ಲಾ ಬಗೆಯ ವ್ಯಾಮೋಹದಿಂದಲೂ ವಿಮುಕ್ತನಾಗಬೇಕು. ಕಾಮದ ನಿಗ್ರಹವಿಲ್ಲದ ಹೊರತು ದೈಹಿಕ ಮಾನಸಿಕ ಮತ್ತು ಬುದ್ಧಿಯ ಪೂರ್ಣ ಬೆಳವಣಿಗೆ ಅಸಾಧ್ಯ. ಇದನ್ನು ಬಿಡದೆ ಹನ್ನೆರಡು ವರುಷಗಳು ಅನುಸರಿಸಿದರೆ ಜ್ಞಾಪಕ ಶಕ್ತಿ ಮತ್ತು ಅಂತರ್‌ಜ್ಞಾನಕ್ಕೆ ಸಹಾಯ ಮಾಡುವ 'ಮೇಧಾ' ಎಂಬ ಸೂಕ್ಷ್ಮನರ ಬೆಳೆಯುತ್ತದೆ. ಇದೇ ಒಬ್ಬ ಋಷಿ ಅಥವಾ ಮಹಾತ್ಮನ ಲಕ್ಷಣ. ಇದರಿಂದ ಗಹನವಾದ ಸತ್ಯಗಳನ್ನು ಗ್ರಹಿಸುವುದಕ್ಕೂ ಅದನ್ನು ಉಳಿಸಿಕೊಳ್ಳುವುದಕ್ಕೂ ಬೇಕಾದ ಸಾಮರ್ಥ್ಯ ಲಭಿಸುವುದು. ಸಂಪೂರ್ಣ ಆನಂದದ ಅನುಭವ ಆಗ ನಮಗುಂಟಾಗುತ್ತದೆ. ದೇಹ ಮುಖಗಳು ಕಾಂತಿಗೂಡುತ್ತವೆ. ಮನಸ್ಸು ತುಂಬಿ ತುಳುಕಾಡುವ ಉತ್ಸಾಹದಿಂದ ತುಂಬಿರುತ್ತದೆ. ಕೆಲಸಮಾಡುವ ಶಕ್ತಿ ಸೂಕ್ಷ್ಮ ಬುದ್ಧಿ ಅಗಣಿತವಾಗಿ ವೃದ್ಧಿಯಾಗುವುದು.

ಆಹಾರ ಮತ್ತು ವಿರಾಮಗಳಲ್ಲಿ ಸಂಯಮ ನಿಯಮವರ್ತಿಯಾಗುವುದು. ಆಹಾರ ಉದ್ರೇಕಗೊಳಿಸದೆ, ಪುಷ್ಟಿಕರವಾಗಿ ಬೇಗ ಜೀರ್ಣವಾಗುವಹಾಗಿರಬೇಕು. ಅಜೀರ್ಣದಿಂದ ಪಾರಾಗಬೇಕು. ಆಹಾರ ತೆಗೆದುಕೊಳ್ಳುವುದು ಇಂದ್ರಿಯ ಚಪಲಕ್ಕಾಗಿ ಅಲ್ಲ. ದೇಹಾರೋಗ್ಯಕ್ಕೆ ಮತ್ತು ಕಾರ್ಯಮಾಡುವುದಕ್ಕೆ ಮಾತ್ರ. ಶುದ್ಧವಾದ ಗಾಳಿ, ಸ್ವಲ್ಪ ಸುಲಭವಾದ ವ್ಯಾಯಾಮ ಉಪಯುಕ್ತ. ಯಾವ ಕೆಲಸವಾಗಲಿ ರೋಗಿಷ್ಠನಿಂದ, ದುರ್ಬಲ, ನಿದ್ರಾಸಕ್ತ, ಸೋಮಾರಿ ಮತ್ತು ಸ್ವೇಚ್ಛಾಚಾರಿಗಳಿಂದ ಸಾಧ್ಯವಾಗಲಾರದು.

ಕುಸಂಗ, ಅಸತ್‌ಪ್ರಸಂಗ, ಪರಚರ್ಚಾ, ವ್ಯರ್ಥಕರ್ಮ ಇವನ್ನು ತೊರೆಯಬೇಕು. ಸತ್ಸಂಗ, ಶಾಸ್ತ್ರಪಾಠ, ಸತ್‌ಚಿಂತೆ ಮತ್ತು ಸತ್ ಅಸತ್ ವಿಚಾರ ಮಾಡಬೇಕು.

ಯಾವಾಗಲೂ ನಿನ್ನ ಜೀವನದ ಉದ್ದೇಶ ಮತ್ತು ಆದರ್ಶದ ಸಾಕ್ಷಾತ್ಕಾರಕ್ಕಾಗಿ ತ್ರಿಕರಣ ಪೂರ್ವಕ ಪ್ರಯತ್ನಪಡು. ನಿನ್ನ ಆಧ್ಯಾತ್ಮಿಕ ಸಾಧನೆಗಳನ್ನು ಅನಂತ ತಾಳ್ಮೆ ಧೀರ್ಘ ಪ್ರಯತ್ನಗಳಿಂದ ಮುಂದುವರಿಸು. ಎಂದಿಗೂ ನಿನ್ನ ಮನಸ್ಸನ್ನು ನಿರಾಶೆ ಅಥವಾ ದುಃಖ ಪ್ರವೇಶಿಸದಿರಲಿ. ನಿನ್ನ ಸ್ವಾರ್ಥ ದುಃಖಭೋಗಗಳಿಗೆ, ಕರ್ಮ ಫಲಗಳಿಗೆ ಸ್ವಲ್ಪವೂ ಗಮನ ಕೊಡದೆ ಹೃತ್ಪೂರ್ವಕ ದೇವರೇ ನಿನ್ನ ಅತ್ಯಂತ ಪ್ರೀತಿಪಾತ್ರನಾದವನು, ಅವನೇ ನಿನ್ನ ಸರ್ವಸ್ವವೆಂದು ಪ್ರಾರ್ಥಿಸಿದರೆ ನೀನು ಪರಮ ಶಾಂತಿ ಆನಂದವನ್ನು ಪಡೆಯುವೆ.

೧೭೨. ಸತ್ಯಾನ್ವೇಷಣೆಗಾಗಿ ಹೊರಟಿರುವ ಸಾಧಕನ ಜೀವನವೆಲ್ಲಾ ಒಂದು ನಿರಂತರ ಆಧ್ಯಾತ್ಮಿಕ ಪ್ರಯತ್ನ — ಜಪ ಮತ್ತು ಧ್ಯಾನವನ್ನು ಗೊತ್ತಾದ ವೇಳೆಯಲ್ಲಿ ಒಂದೆರಡು ಗಂಟೆಮಾಡಿ ಉಳಿದ ಕಾಲದಲ್ಲಿ ಪ್ರಪಂಚ ವಿಷಯಗಳಲ್ಲಿ ಮುಳುಗಿರುವುದಲ್ಲ. ಇದಲ್ಲ ಧಾರ್ಮಿಕ ಜೀವನ. ಯಾವಾಗ ಧಾರ್ಮಿಕತೆ ನಮ್ಮ ಪ್ರತಿಯೊಂದು ಯೋಚನೆ, ಕಾರ್ಯ, ಪರಿಸ್ಥಿತಿಯಲ್ಲೂ ವ್ಯಕ್ತವಾಗುವುದೋ, ಯಾವಾಗ ಅದು ವ್ಯಕ್ತಿಯ ಬಾಳಿನ ಜೀವಾಳವಾಗಿರುವುದೋ, ಆಗ ಮಾತ್ರ ಅದನ್ನು ಧಾರ್ಮಿಕತೆ ಎನ್ನಬಹುದು. ನಿನ್ನ ಕೈಗಳು ಕೆಲಸಮಾಡುತ್ತಿರಲಿ, ಬಾಯಿ ಆ ವಿಚಾರವನ್ನು ಇತರರಿಗೆ ತಿಳಿಸುತ್ತಿರಲಿ. ಆದರೆ ಯಾವಾಗಲೂ ನಿನ್ನ ಮನಸ್ಸನ್ನು ದೇವರ ಮೇಲೆ ನಿಲ್ಲಿಸು. ಕೇವಲ ಇದೊಂದಕ್ಕಾಗಿ–ದೇವರಲ್ಲಿ ಬದುಕುವುದಕ್ಕಾಗಿ– ನಾವು ಈ ಪ್ರಪಂಚಕ್ಕೆ ಬಂದಿರುವುದು: ಇದೊಂದೆ ಬಾಳಿನ ಸಾರ್ಥಕತೆಗೆ ಕಾರಣವೆಂದು ತಿಳಿ. ದೈನ್ಯತೆ, ನಿಸ್ವಾರ್ಥತೆ, ನಿರ್ವ್ಯಾಮೋಹ, ದೇವರೊಬ್ಬನೇ ಸತ್ಯ ಎಂಬ ದೃಢನಂಬಿಕೆ, ಇವೇ ಆ ಸ್ಥಿತಿಗೆ ಸಾಧನಗಳು. ಇದು ಕಷ್ಟಕರವಾದುದೇನೋ ನಿಜ. ಆದರೆ ದೀರ್ಘ ಪ್ರಯತ್ನದಿಂದ, ಅಭ್ಯಾಸದಿಂದ ಇದನ್ನು ಸಾಧಿಸಬಹುದು. ಶ್ರೀ ರಾಮಕೃಷ್ಣರು ಇದನ್ನು ಒಂದು ಉಪಮಾನದ ಮೂಲಕ ಹೇಳುತ್ತಿದ್ದರು: ಹಳ್ಳಿಯ ಹೆಂಗಸು ಒರಳಲ್ಲಿರುವ ಅವಲಕ್ಕಿಯನ್ನು ಆಡಿಸುವಳು. ಮತ್ತೊಂದು ಕೈಯಿಂದ ಮಗುವನ್ನು ಹಿಡಿದುಕೊಂಡು ಅದಕ್ಕೆ ಎದೆ ಹಾಲನ್ನು ಕುಡಿಸುವಳು. ಅದೇ ಕಾಲದಲ್ಲಿ ಬಂದವರ ಹತ್ತಿರ ನಿನ್ನ ಹಿಂದಿನ ಬಾಕಿ ಇಷ್ಟು, ಈವತ್ತಿನದು ಇಷ್ಟು, ಎಂದು ವ್ಯಾಪಾರ ಮಾಡುವಳು. ಅವಳು ಮಾಡುವ ಕೆಲಸ ಅಷ್ಟೊಂದಿದ್ದರೂ ಕುಟ್ಟುವ ಯಂತ್ರ ತನ್ನ ಕೈ ಮೇಲೆ ಬಿದ್ದು ಗಾಯವಾಗದೆ

ಇರಲಿ ಎಂದು ಯಾವಾಗಲೂ ಅದರ ಮೇಲೆ ತನ್ನ ಮನಸ್ಸನ್ನು ಇಟ್ಟಿರುವಳು.

೧೭೩. ಪ್ರಾರಂಭದಲ್ಲಿ ಧ್ಯಾನ ಮತ್ತು ಜಪಕ್ಕೆ ಒಂದು ನಿಯಮಿತ ಕಾಲ ಇರಬೇಕು. ಸಹಜವಾಗಿ ಮನಸ್ಸು ಕೆಲಸಮಾಡಲು, ಶ್ರಮಪಡಲು ಇಚ್ಛಿಸುವುದಿಲ್ಲ. ಕುಂಟು ನೆವಗಳನ್ನೊಡ್ಡಿ ಹಿಂಜರಿಯುವುದು. ಮಾಡಬೇಕೆಂದಿರುವ ಕೆಲಸಕ್ಕೆ ಬದಲಾಗಿ ಎಲ್ಲೊ ಚೆಲ್ಲಾಪಿಲ್ಲಿಯಾಗಿ ಹೋಗುತ್ತದೆ. ಅದನ್ನು ಯಾವುದಾದರೊಂದು ಕೆಲಸದಲ್ಲಿ ತೊಡಗಿಸದಿದ್ದಲ್ಲಿ ಅದು ಅನೇಕ ಬಗೆಯ ನಿರರ್ಥಕವಾದ ಮತ್ತು ಹಾನಿಕರವಾದ ಕೆಲಸಗಳಿಗೆ ಒಯ್ಯುವುದು. ಅದಕ್ಕೆ "ಆಲಸ್ಯ ಮನವೇ ಸೈತಾನಿನ ಕಾರ್ಖಾನೆ" ಎಂದು ಹೇಳುತ್ತಾರೆ. ಅದನ್ನು ಅಂಕೆಯಲ್ಲಿಟ್ಟುಕೊಳ್ಳಬೇಕಾದರೆ ಕಠಿಣವಾದ ಬಲವಾದ ನಿಯಮಗಳಿಂದ ಕಟ್ಟಿಹಾಕಬೇಕು. ಸರಿಯಾಗಿ ಪರ್ಯಾಲೋಚಿಸಿದ ನಂತರ ನೀನು ಯಾವ ಬಗೆಯ ಸಾಧನೆಯನ್ನು ನಿತ್ಯ ಜೀವನದಲ್ಲಿ ಮಾಡಬೇಕೆಂದು, ನಿರ್ಣಯಿಸು. ನೀನು ಯಾವ ಬಗೆಯ ಪರಿಸ್ಥಿತಿಗೊಳಗಾದರೂ ನಿನಗೆ ಯಾವ ಕೆಲಸ ಒದಗಿದರೂ ಏನೇ ಮಾಡುತ್ತಿದ್ದರೂ ಆ ನಿಯಮಿತ ಕ್ರಮಕ್ಕೆ ತಪ್ಪುವುದಿಲ್ಲವೆಂದು ನಿಶ್ಚಯಿಸು. ಆಧ್ಯಾತ್ಮಿಕ ಪ್ರಗತಿಗೆ ಅಂತಹ ದೃಢ ನಿಶ್ಚಯ, ನಿರ್ಧಾರ, ಅತ್ಯಾವಶ್ಯಕ. ಆಹಾರವಿಹಾರ, ಓದುಬರಹ, ವ್ಯಾಯಾಮ, ನಿದ್ದೆ, ಕೆಲಸ, ಕಾರ್ಯ, ಧ್ಯಾನ, ಭಜನೆ, ಆಮೋದ ಪ್ರಮೋದ, ಆಟ ಓಟ, ಎಲ್ಲಕ್ಕೂ ನಿರ್ದಿಷ್ಟ ಕಾಲ ಇರಬೇಕು. ನೀನು ಕಾಲವನ್ನು ಸಿಕ್ಕಾಪಟ್ಟೆ ಕಳೆದರೆ ಜೀವನ ವ್ಯರ್ಥವಾಗುವುದು. ನಿತ್ಯವಿಧಿಗಳನ್ನು ನಿರ್ಣಯಿಸಿದ ಮೇಲೆ ನಿನ್ನ ಮನಸ್ಸಿಗೆ, "ಇಲ್ಲಿ ನೋಡು, ನೀನಿಷ್ಟಪಡು ಪಡದಿರು, ಈ ನಿಯಮಗಳನ್ನು ನೀನು ಪಾಲಿಸಲೇ ಬೇಕು" ಎಂದು ಎಚ್ಚರಗೊಳಿಸು. ಸ್ವಲ್ಪ ಕಾಲ ಮನಸ್ಸು ಮೊಂಡತನಮಾಡುವುದು; ನಿರ್ವಹಿಸಲಸಾಧ್ಯವಾಗಿ ತೋರುವುದು. ಕೆಲಸಮಾಡಲು ನೀನು ಪ್ರಯತ್ನಪಟ್ಟಷ್ಟೂ ನಿನಗೆ ಎದುರುಬೀಳುವುದು; ಇತರ ಕಡೆಗೆ ಅಲೆದಾಡುವುದು; ಆದರೂ ನೀನು ಬಲಾತ್ಕಾರವಾಗಿಯಾದರೂ ಕೆಲಸಮಾಡಿಸಲು ಪ್ರಯತ್ನಿಸುವುದನ್ನು ಬಿಡಬೇಡ. ಆಗಾಗ್ಗೆ ಕೆಲಸ ಸರಿಯಾಗಿ ನಡೆಯುತ್ತಿರುವುದೋ ಇಲ್ಲವೋ ಎಂದು ಪರೀಕ್ಷಿಸುತ್ತಿರು. ಮನಸ್ಸನ್ನು ಪಳಗಿಸುವುದೆಂದರೆ ಕಾಡುಮೃಗವನ್ನು ಪಳಗಿಸಿದಂತೆ. ಅದಕ್ಕೆ ಅನಂತ ತಾಳ್ಮೆ, ದೀರ್ಘ ಪ್ರಯತ್ನ, ಚಿತ್ತ

ನಿಗ್ರಹಶಕ್ತಿ ಆವಶ್ಯಕ. ಯಾವಾಗ ಮನಸ್ಸು ತನಗೆ ತಪ್ಪಿಸಿಕೊಳ್ಳಲು ಯಾವ ಹಾದಿಯೂ ಇಲ್ಲವೆಂದು ತಿಳಿಯುವುದೋ ಆಗ ಅದು ತನ್ನ ಕಪಿಚೇಷ್ಟೆಯನ್ನು ಬಿಟ್ಟು ನೀನು ಹೇಳಿದಂತೆ ಕೇಳುವುದು. ಇದೇ ಅಭ್ಯಾಸಯೋಗ. ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಲು ಬೇರೆ ಮತ್ತಾವ ಹಾದಿಯೂ ಇಲ್ಲವೆಂದು ತಿಳಿ.

೧೭೪. ನೀನು ಮೂರು ನಾಲ್ಕು ವರ್ಷ ಹೀಗೆ ಯೋಗಾಭ್ಯಾಸ ವನ್ನು ಔಷಧಿ ಸೇವನೆಯಂತೆ ಅದು ಎಷ್ಟೇ ಕಹಿಯಾಗಿ, ಸಪ್ಪೆಯಾಗಿ ಅಸಹ್ಯಕರವಾಗಿರಲಿ ಬಿಡದೆ ಮಾಡುತ್ತಿದ್ದರೆ, ಆಗ ಧ್ಯಾನ ಭಜನೆ ಮಾಡು ವುದು ಎಷ್ಟು ಮಧುರ, ಅಮೃತಸಮಾನವಾಗಿದೆ, ಆನಂದಪ್ರದವಾಗಿದೆ ಎಂಬುದರ ಅನುಭವ ಆಗುವುದು. ಕಾಲೇಜಿನಲ್ಲಿ ವಿದ್ಯಾರ್ಥಿಗಳು ಪರೀಕ್ಷೆಗಾಗಿ ಹಗಲೂ ರಾತ್ರಿ ಅರ್ಧರಾತ್ರಿವರೆಗೂ ಎಷ್ಟು ಕಷ್ಟಪಟ್ಟು ಓದಿ ಆರೋಗ್ಯವನ್ನು ಕೆಡಿಸಿಕೊಳ್ಳುವರು ! ಇವೆಲ್ಲಕ್ಕಿಂತ ಹೆಚ್ಚಾಗಿ ನಿರಂತರ ಭಯ, ವ್ಯಾಕುಲತೆ, ಚಿಂತೆಗಳು ಕಾಣುತ್ತವೆ. ನಮ್ಮ ಇಡೀ ಅಳಿವು ಉಳಿವು ಆ ಪರೀಕ್ಷೆಯ ತೀರ್ಗಡೆಯನ್ನು ಅವಲಂಬಿಸಿದಂತೆ ಇದೆ. ಇವೆಲ್ಲಾ ಯಾವ ಗುರಿಯನ್ನು ಸಾಧಿಸುವುದಕ್ಕೆ? ಅಶಾಶ್ವತವಾದ ಒಂದು ದೊಡ್ಡ ಕೆಲಸ ದೊರಕಿಸಿಕೊಳ್ಳುವ ಯೋಚನೆ, ಹೆಸರು ಕೀರ್ತಿಗಳನ್ನು ಗಳಿಸುವುದು, ಸುಖ ಸಂತೋಷವಾದ ಜೀವನವನ್ನು ನಡೆಸುವ ದೃಷ್ಟಿ ಯಿಂದಲ್ಲವೇ ? ದೇವರ ಸಾಕ್ಷಾತ್ಕಾರಕ್ಕಾಗಿ ನಡೆಸುವ ಹೋರಾಟ ಇದ ಕ್ಕಿಂತ ನಿಜವಾಗಿಯೂ ಸುಲಭ. ಕೊನೆಗೆ ನಮಗೆ ಫಲ ನಿಜವಾಗಿಯೂ ಸಿಕ್ಕುವುದೆಂಬ ನಂಬಿಕೆ ಇರುವುದರಿಂದ ಇಷ್ಟೊಂದು ಹೆದರಿಕೆ, ಚಿಂತೆಯಿಂದ ಹೋರಾಡಬೇಕಾಗಿಲ್ಲ. ಎಲ್ಲಾ ಕೆಲಸವನ್ನೂ ಬಿಟ್ಟು, "ನನ್ನ ಧ್ಯೇಯ ಸಿದ್ಧಿಸಬೇಕು; ಇಲ್ಲವೇ ಈ ಶರೀರ ನಾಶವಾಗಬೇಕು" ಎಂಬ ಕಠಿಣ ವ್ರತ ವನ್ನು ಹಿಡಿದು ಸತತ ಪ್ರಯತ್ನದಿಂದ ಮನಃಪೂರ್ವಕ ಸಾಧನೆ ಮಾಡಿದರೆ ಕೊಂಚವೂ ಅನುಮಾನವಿಲ್ಲದೆ ದೇವರು ಪ್ರತ್ಯಕ್ಷನಾಗುತ್ತಾನೆ. ಜಗತ್ತಿನ ಐಶ್ವರ್ಯ, ಅದೃಷ್ಟ ಸುಖಗಳೆಲ್ಲವನ್ನೂ ಮೀರಿಸುವ ಅಮೂಲ್ಯವಾದ ಸಂಪತ್ತಿಗೆ ಭಕ್ತನನ್ನು ಒಡೆಯನನ್ನಾಗಿ ಮಾಡುತ್ತಾನೆ. ಅವನು ಮೃತ್ಯುವನ್ನು ಅತಿ ಕ್ರಮಿಸಿ ಅಮೃತತ್ವಕ್ಕೆ ಹಕ್ಕುದಾರನಾಗುವನು.

೧೭೫. ಸ್ವಾಮಿ ಬ್ರಹ್ಮಾನಂದರು ಹೀಗೆ ಹೇಳುತ್ತಿದ್ದರು: "ನನ್ನ ಶಿಷ್ಯರಲ್ಲಿ ಯಾರಾದರೂ, ದೀಕ್ಷೆ ಪಡೆದ ಸ್ವಲ್ಪ ಹೊತ್ತಿನಲ್ಲಿಯೇ ನನ್ನ

ಹತ್ತಿರ ಬಂದು, 'ನಾನು ಜಪ ಮತ್ತು ಧ್ಯಾನವನ್ನು ಇಷ್ಟು ದಿನಗಳು ಸಾಧನೆ ಮಾಡುತ್ತಿದ್ದರೂ ಏನನ್ನೂ ಸಾಧಿಸಿಲ್ಲ. ನನ್ನ ಮನಸ್ಸನ್ನು ಅಂಕೆಯಲ್ಲಿಡಲು ಸಾಧ್ಯವಿಲ್ಲ. ನನಗೆ ಶಾಂತಿ ಆನಂದಗಳೊಂದೂ ದೊರಕುತ್ತಿಲ್ಲ' ಎಂದರೆ ನಾನು ಅವನ ಮಾತುಗಳು ಕೇಳಿಸದವನಂತೆ ಉತ್ತರವನ್ನೇ ಕೊಡುವುದಿಲ್ಲ. ಎರಡು ಮೂರು ವರುಷಗಳ ನಂತರ ಅವನೇ, 'ಈಗ ಇಷ್ಟು ದಿವಸಗಳಾದಮೇಲೆ ಮುಂದುವರಿಯುತ್ತಿದ್ದೇನೆ ಎನ್ನಿಸುತ್ತಿದೆ. ನನಗೆ ಸ್ವಲ್ಪಮಟ್ಟಿಗೆ ಶಾಂತಿ ಆನಂದಗಳು ದೊರೆತಿವೆ' ಎಂದು ಹೇಳುತ್ತಾನೆ. ಆದ್ದರಿಂದ ನಾನು ಹೇಳುವುದೇನೆಂದರೆ, ಹೃತ್ಪೂರ್ವಕ ಎರಡು ಮೂರು ವರುಷಗಳು ಸಾಧನೆ ಭಜನೆ ಬಿಡದೆ ಮುಂದುವರಿಸು, ಆಗ ನೀನೇ ಅದು ಎಂತಹ ಆನಂದವೆಂಬುದನ್ನು ಅರಿಯುವೆ. ಕೇವಲ ಕೇಳುವುದರಿಂದ, ಯಾವುದಾದರೊಂದು ತಂತ್ರದಿಂದ, ನೀನಾಗಿ ಏನನ್ನೂ ಪ್ರಯತ್ನಿಸದೆ ದೈವಸಾಕ್ಷಾತ್ಕಾರವಾಗಬೇಕೆಂದು ನೀನು ಇಚ್ಛಿಸುತ್ತಿರುವೆ. ಇದು ಕೇವಲ ಹುಚ್ಚುತನವಲ್ಲವೆ?''

೧೭೬. ಶ್ರೀ ಶಾರದಾ ದೇವಿಯವರು ಕೂಡ ತಮ್ಮ ಶಿಷ್ಯರ ಕಾಟದಿಂದ ಬಹಳ ತೊಂದರೆಗೊಳಗಾಗುತ್ತಿದ್ದರು. ಅವರು ಹೀಗೆ ಹೇಳುತ್ತಿದ್ದರು· ''ಶ್ರೀ ರಾಮಕೃಷ್ಣರ ಕಾಲದಲ್ಲಿ ಬರುತ್ತಿದ್ದ ಭಕ್ತರು ಎಷ್ಟು ಒಳ್ಳೆಯವರಾಗಿದ್ದರು. ಈಗ ಬರುವವರು ಕೇವಲ, 'ತಾಯಿ, ನನಗೆ ದೇವರನ್ನು ತೋರಿಸಿ'! 'ಗುರುವನ್ನು ತೋರಿಸಿ'! 'ನಮಗೇಕೆ ಅವರ ದರ್ಶನವಾಗುವುದಿಲ್ಲ? ನೀವಿಚ್ಛೆಪಟ್ಟರೆ ಖಂಡಿತವಾಗಿಯೂ ಅದನ್ನು ಮಾಡಬಲ್ಲಿರಿ' ಎನ್ನುವರು. ನಮ್ಮ ಪೂರ್ವಿಕರಲ್ಲಿ ಎಷ್ಟು ಜನ ಮಹಾತ್ಮರಾದ ಯೋಗಿಗಳು, ಋಷಿಗಳು ಅತ್ಯಂತ ಕಠಿಣವಾದ ತಪಸ್ಸನ್ನು, ಎಷ್ಟೋ ಯುಗಗಳು ಆಚರಿಸಿದರೂ ಭಗವಂತನನ್ನು ಕಾಣಲಾರದೆ ಹೋದರು! ಇವರು ಕೇವಲ ಒಂದು ಕ್ಷಣದಲ್ಲಿ ಎಲ್ಲವನ್ನೂ ಸಾಧಿಸಬೇಕೆನ್ನುವರು. ಇವರು ಸಾಧನೆಮಾಡುವುದಿಲ್ಲ, ಬ್ರಹ್ಮಚರ್ಯ, ಇಂದ್ರಿಯನಿಗ್ರಹ ಏನನ್ನೂ ಮಾಡುವುದಿಲ್ಲ. 'ನನಗೆ ಆತನನ್ನು ಈ ಕ್ಷಣದಲ್ಲಿ ತೋರಿಸಿ' ಎನ್ನುವರು. ಅವರ ಹಿಂದಿನ ಜನ್ಮದಲ್ಲಿ ಅವರೆಷ್ಟು ಕೆಟ್ಟ ಕೃತ್ಯಗಳನ್ನು ಮಾಡಿದ್ದರೊ ಬಲ್ಲವರಾರು? ಇವುಗಳೆಲ್ಲಾ ಕಾಲಕ್ರಮೇಣ ಕಳೆದುಹೋದ ಹೊರತು ಅವರು ಹೇಗೆ ತಾನೆ ಮಹತ್ವದ ವಸ್ತುಗಳನ್ನು ಪಡೆಯಲು ಸಾಧ್ಯ? ಈ ಜನ್ಮದಲ್ಲಿ ಸಾಕ್ಷಾತ್ಕಾರವಾಗದಿದ್ದಲ್ಲಿ ಮುಂದಿನ

ಜನ್ಮದಲ್ಲಿ ಆಗಬಹುದು ಅಥವಾ ಅದರ ಮುಂದಿನ ಜನ್ಮದಲ್ಲಿ ಪಡೆಯು ಬಹುದು. ನೀನು ಸಾಧನೆ ಮಾಡುತ್ತಾ ಹೋದರೆ ಅದು ಆಗೇ ತೀರ ಬೇಕು. ದೈವ ಸಾಕ್ಷಾತ್ಕಾರ ಅಷ್ಟು ಸುಲಭವೇನು? ಕೇವಲ ಈ ಬಾರಿ ಮಾತ್ರ ಠಾಕೂರರ (ಶ್ರೀ ರಾಮಕೃಷ್ಣ) ಆಗಮನದಿಂದ, ಹಾದಿಯನ್ನು ಅವರು ತೋರಿದುದರಿಂದ ಅದು ಅಷ್ಟು ಸುಲಭವಾಗಿದೆ, ಅಷ್ಟೆ. ಪ್ರಾಪಂಚಿಕ ಸುಖದಲ್ಲಿ ಜೀವಿಸುತ್ತಿದ್ದಾರೆ. ಪ್ರತಿ ವರ್ಷವೂ ಮಕ್ಕಳನ್ನು ಹೆರುತ್ತಾರೆ. ಅಂಥಹವರು ಬಂದು, 'ಪವಿತ್ರ ಭಗವಂತನ ದರ್ಶನವೇಕೆ ನನಗೆ ಆಗುತ್ತಿಲ್ಲ?' ಎನ್ನುವರು. ಹೆಂಗಸರು ಠಾಕೂರರ ಹತ್ತಿರ ಹೋಗಿ, 'ದೇವರ ಕಡೆಗೇಕೆ ಮನಸ್ಸನ್ನು ಇಡಲಾಗುವುದಿಲ್ಲ? ಅದೇಕೆ ಸ್ಥಿರವಾಗುವುದಿಲ್ಲ?' ಎಂದು ಕೇಳುತ್ತಿದ್ದರು. ಪರಮಹಂಸರು ಅವರಿಗೆ, 'ಓ! ಇದು ಹೇಗೆ ಸಾಧ್ಯ? ನಿಮ್ಮ ಹತ್ತಿರ ಇನ್ನೂ ಹೆರಿಗೆ ಮನೆ ವಾಸನೆ ಇದೆ. ಮೊದಲು ಅದರಿಂದ ಪಾರಾಗಿ. ಸಕಾಲದಲ್ಲಿ ಅದು ನಿಮಗೆ ಬರುವುದು. ಈ ಜನ್ಮದಲ್ಲಿ ನೀವು ನನ್ನ ಹತ್ತಿರಬಂದಿರುವುದೇ ಸಾಕು. ಮುಂದಿನ ಜನ್ಮದಲ್ಲಿ ಆಧ್ಯಾತ್ಮಿಕ ಜೀವನವನ್ನು ನೀವು ಬೇಗ ಪಡೆಯುಬಹುದು,' ಎಂದು ಹೇಳುತ್ತಿದ್ದರು. ಭಗವಂತನ ದರ್ಶನ ಸ್ವಪ್ನ ದಲ್ಲಾಗಬಹುದು; ಆದರೆ ಪ್ರತ್ಯಕ್ಷ ಈ ಕಣ್ಣುಗಳಿಂದ ನೋಡುವುದಕ್ಕೆ ಭಕ್ತನಿಗಾಗಿ ದೇಹಧಾರಣೆ ಮಾಡಿ ದರ್ಶನಭಾಗ್ಯವನ್ನು ಕರುಣಿಸುವುದು ಅಪರೂಪ. ಇದು ಎಷ್ಟು ಜನರಿಗಾಗಬಹುದು? ಅದು ಕೇವಲ ಅಪರೂಪ ಭಾಗ್ಯೋದಯ."

೧೭೭. ಶ್ರೀ ರಾಮಕೃಷ್ಣರು, "ನಾನು ಹದಿನಾರಾಣೆಯಷ್ಟು ತಪಸ್ಸುಮಾಡಿದ್ದೇನೆ. ನೀನು ಅದರಲ್ಲಿ ಕೇವಲ ಒಂದು ಆಣೆಯಷ್ಟು ಮಾಡಿದರೆ ಸಾಕು" ಎಂದು ಹೇಳುತ್ತಿದ್ದರು. ನಿಜವಾಗಿಯೂ ಶ್ರೀ ರಾಮಕೃಷ್ಣರು, ಭಗವತ್ಸಾಕ್ಷಾತ್ಕಾರಕ್ಕಾಗಿ ಮಾಡಿದ ಕಠಿನ ತಪಸ್ಸಿನ ನೂರನೆಯ ಒಂದು ಪಾಲನ್ನು ಮಾಡುವುದು ಕೂಡ ಮಾನವನಿಗೆ ಅಸಾಧ್ಯ. ಆದರೂ ಅವರು ಹೇಳಿದಂತೆ ಒಂದು ಆಣೆಯಷ್ಟನ್ನಾದರೂ ಮಾಡುವುದು ಅವಶ್ಯಕ. ಹದಿನಾರಾಣೆ ಭಾಗವನ್ನೂ ಮಾಡಬೇಕೆಂದು ಪ್ರಯತ್ನಪಟ್ಟರೆ ಬಹುಶಃ ಒಂದು ಭಾಗವನ್ನು ಮಾಡಲು ಶಕ್ಯವಾಗಬಹುದು. ನೀನು ದೇವರ ಸನ್ನಿಧಿಗೆ ಒಂದು ಹೆಜ್ಜೆ ಮುಂದಿಟ್ಟರೆ ಆತನು ಹತ್ತು ಹೆಜ್ಜೆ ನಿನ್ನ ಹತ್ತಿರ ಬರುತ್ತಾನೆ. ಉಳಿದುದನ್ನು ತನ್ನ ಸಹಾಯದಿಂದ ಭಕ್ತನು

ಮಾಡುವಂತೆ ಅನುಗ್ರಹಿಸುತ್ತಾನೆ. ಅದು ಆತನ ಕೃಪೆ.

೧೭೮. ಅಹಿಂಸೆ (ಹಿಂಸೆಮಾಡದಿರುವಿಕೆ) ಪರಮೋತ್ಕೃಷ್ಟಗುಣ ವೆಂಬುದೇನೋ ನಿಜ. ಆದರೆ ಕೇವಲ ಬಾಯಲ್ಲಿ ಮಾತ್ರ ಅದನ್ನು ಹೇಳು ತ್ತಿದ್ದರೆ ಕೆಲಸಕ್ಕೆ ಬಾರದವನಿಗಿಂತ ಕೇಡು. ಉದಾಹರಣೆಗೆ, ಕೇವಲ ಪ್ರಾಣಿಗಳನ್ನು ಕೊಲ್ಲದೆ ಮೀನನ್ನು ತಿನ್ನದೆ ಇದ್ದಮಾತ್ರಕ್ಕೆ ಅದು ಅಹಿಂಸೆ ಎನ್ನಿಸಿಕೊಳ್ಳುವುದಿಲ್ಲ. ಯಾವಾಗ ದೇವರನ್ನು ಎಲ್ಲ ಜೀವಿ ಗಳಲ್ಲಿಯೂ ನೋಡುತ್ತೇವೆಯೋ ಎಂದರೆ, ಆತ್ಮ ಸಾಕ್ಷಾತ್ಕಾರ ಲಭಿಸಿದರೆ ಮಾತ್ರ ಅಹಿಂಸೆಯನ್ನು ಸಾಧಿಸಬಹುದು. ಪ್ರತಿಕ್ಷಣದಲ್ಲಿಯೂ ನಮಗೆ ತಿಳಿದಂತೆ ತಿಳಿಯದಂತೆ, ಕಣ್ಣಿಗೆ ಕಾಣುವಂತೆ ಕಾಣದೆ, ಎಷ್ಟೋ ಲೆಕ್ಕ ವಿಲ್ಲದಷ್ಟು ಜೀವಿಗಳನ್ನು ನಾಶಮಾಡುತ್ತೇವೆ. ಇದು ನಮ್ಮ ಬಾಳಿನ ಸಹಜ ಸ್ವಭಾವ. ಯೋಗಿಗಳು ಹಾಲನ್ನು ಮಾತ್ರ ಸೇವಿಸಿ ಸಾಧನೆ ಮಾಡು ತ್ತಾರೆ. ಏಕೆಂದರೆ ಹಾಲು ಸಾತ್ತ್ವಿಕ ಆಹಾರ. ಆದರೆ ಕರುವಿಗೆ ತಾಯಿಯ ಹಾಲಿನ ಹಕ್ಕಿದೆ, ಅದರ ಆಹಾರದ ಒಂದುಭಾಗವನ್ನು ಕಿತ್ತುಕೊಂಡರೆ ಧಾರ್ಮಿಕವಾಗಿ ಅದು ಕ್ರೌರ್ಯ ಅಥವಾ ನೋವಿನ ಕೃತ್ಯ ವಾಗಲಿಲ್ಲವೆ? ಎಷ್ಟು ಮತ್ತೊಬ್ಬನಿಗೆ ತೊಂದರೆ ಕೊಡದೆ ನೋವನ್ನುಂಟು ಮಾಡದೆ ಇರುವನೋ ಅಷ್ಟೂ ಮೇಲು. ನಿಜವಾದ ಅಹಿಂಸೆಯನ್ನು ಅಭ್ಯಾಸಮಾಡಿದರೆ ಎಲ್ಲಾ ಜೀವಿಗಳನ್ನೂ ಪ್ರೀತಿಸಬಹುದು. ಕ್ಷುದ್ರ ಅಹಂ ಅಥವಾ ಸ್ವಾರ್ಥತೆ ಮಾಯವಾಗಿ ಶತ್ರುಮಿತ್ರರೆಂಬ ಭೇದವೇ ತೋರುವುದಿಲ್ಲ. ಇದರಿಂದ ಹೃದಯ ಪರಿಶುದ್ಧವಾಗಿ, ಅಂತಹ ಪವಿತ್ರ ಹೃದಯದಲ್ಲಿ ದೇವರ ಪೂರ್ಣ ಪ್ರತಿಬಿಂಬವನ್ನು ನೋಡಬಹುದು.

೧೭೯. ಶ್ರೀರಾಮಕೃಷ್ಣರು, "ಧ್ಯಾನವನ್ನು ಮನ ವನ, ಕೋಣ (ಮೂಲೆ) ಯಲ್ಲಾಗಲಿ ಮಾಡಬೇಕು" ಎಂದು ಹೇಳಿದ್ದಾರೆ. ಮನಸ್ಸಿನ ಏಕಾಗ್ರತೆಗೆ ಇದು ಬಹಳ ಸಹಾಯಮಾಡುತ್ತದೆ. 'ಮೂಲೆಯಲ್ಲಿ' ಎಂದರೆ ಒಂದು ಏಕಾಂತವಾದ ಜನರಹಿತವಾದ ಸ್ಥಳದಲ್ಲಿ, ಸಾಧನೆಯನ್ನು ಗುಟ್ಟಾಗಿ ಮಾಡಬೇಕು. ಎಲ್ಲರಿಗೂ ಕಾಣುವಂತೆ ಮಾಡಿದರೆ ಅನೇಕರಿಗೆ ಇದರಿಂದ ಅಡ್ಡಿ ಆತಂಕಗಳೊದಗುವುವು. ನಮ್ಮ ಹೃದಯಾಂತರಾಳದ ಭಾವನೆಗಳು ಮತ್ತು ಸಾಧನೆ ರಹಸ್ಯವಾಗಿರಬೇಕು. ಮೊದಲೆ ಪ್ರಕಟ ಪಡಿಸಿದರೆ ಅವು ಬೇರೂರುವ ಮೊದಲೆ ನಾಶಹೊಂದುತ್ತವೆ. ಆಧ್ಯಾತ್ಮಿಕ ಭಾವನೆ, ಭಕ್ತಿಯನ್ನು ನಿನ್ನಲ್ಲೇ ಇಟ್ಟುಕೊಂಡಷ್ಟೂ ಅವು ಹೆಚ್ಚಾಗಿ ವೃದ್ಧಿ

ಹೊಂದುತ್ತವೆ. ಈ ಕಾರಣದಿಂದಲೇ ಸಾತ್ತ್ವಿಕ ಸ್ವಭಾವದ ಸಾಧಕನು ಜಪಧ್ಯಾನಗಳನ್ನು ಕತ್ತಲೆ, ಮಧ್ಯರಾತ್ರಿ, ಸೊಳ್ಳೆಯ ಪರದೆಯ ಒಳಗೆ ಹಾಸಿಗೆಯ ಮೇಲೆ ಮಾಡುತ್ತಾನೆ. ಅದು ಮತ್ತಾರಿಗೂ ತಿಳಿಯುವುದಿಲ್ಲ.

೧೮೦. 'ಅರಣ್ಯದಲ್ಲಿ' ಎಂದರೆ, ಪುರಜನರ ಕೋಲಾಹಲದಿಂದ ದೂರವಾದ ಏಕಾಂತ ಸ್ಥಳ. ಉದಾಹರಣೆಗೆ ಹಿಮಾಲಯ ಅಥವಾ ಗಂಗೆಯಂತಹ ಪವಿತ್ರ ನದಿಯ ತೀರ. ಪ್ರಕೃತಿ ಸೌಂದರ್ಯದ ಮಧ್ಯೆ ಪವಿತ್ರವಾದ, ಆರೋಗ್ಯಕರವಾದ ಸ್ಥಳ ಎಂದರ್ಥ. ಯೋಗಿಗಳು ಇಂತಹ ಸ್ಥಳವನ್ನು ತಮ್ಮ ಸಾಧನೆಗೆ ಅನುಕೂಲವೆಂದು ಆರಿಸುತ್ತಾರೆ. ಅಲ್ಲಿ 'ಕಾಮಿನಿ ಕಾಂಚನ'ದ ಪ್ರಲೋಭನೆಗಳಿಗೆ ಕೊಂಚವೂ ಅವಕಾಶವಿರುವುದಿಲ್ಲ. ಆದರೆ ಅರಣ್ಯಕ್ಕೆ ಹೋದ ಮೇಲೂ ಕೂಡ ಪ್ರಾಪಂಚಿಕ ವಸ್ತುಗಳನ್ನೇ ಚಿಂತಿಸುತ್ತಿದ್ದರೆ ಅದು ಅರಣ್ಯವಾಗುವುದಿಲ್ಲ. ಪ್ರಪಂಚವನ್ನೇ ನಿನ್ನೊಡನೆ ಕರೆದೊಯ್ದಂತಾಗುತ್ತದೆ. ಮನಸ್ಸು ಸ್ಥಿರವಾಗಿ ಏಕಾಗ್ರವಾದರೆ ಹೊರಗಿನ ಯಾವ ವಸ್ತುವೂ ಅದರ ಸಮತ್ವಕ್ಕೆ ಭಂಗತರಲಾರದು. ಸಂತೆಯಂತಿರುವ ಈ ಜಗತ್ತು ಯೋಗಿಯ ಅರಣ್ಯವಾಗಿ ಪರಿಣಮಿಸುತ್ತದೆ. ಜಗತ್ತಿನ ಗಲಭೆಯ ಮಧ್ಯದಲ್ಲಿಯೂ ಅವನು ಅರಣ್ಯದ ಮೌನವನ್ನು ಅನುಭವಿಸುತ್ತಾನೆ.

೧೮೧. ಧ್ಯಾನವನ್ನು 'ಮನಸ್ಸಿನಲ್ಲಿ' ಮಾಡುವುದು ಅತ್ಯಂತ ಮುಖ್ಯ. ಎಲ್ಲಿ ಬೇಕಾದರೂ ನೀನು ಧ್ಯಾನಮಾಡು. ನಿನ್ನ ಹೃದಯಾಂತರಾಳದಲ್ಲಿ ಇಷ್ಟ ದೇವತೆಯನ್ನು ಪ್ರತಿಷ್ಠೆಗೊಳಿಸು. ಇಂದ್ರಿಯ ನಿಗ್ರಹ ಮಾಡಿ, ನಿನ್ನ ಮನಸ್ಸನ್ನು ಇಷ್ಟ ದೇವತೆಯ ಮೇಲೆ ಏಕಾಗ್ರ ಮಾಡಲು ನಿನ್ನ ಶಕ್ತಿಯನ್ನೆಲ್ಲಾ ಉಪಯೋಗಿಸು. ಈ ಪ್ರಚಂಡ ಆತ್ಮಶಕ್ತಿ ವಿಕಾಸಕ್ಕೆ ನಿರರ್ಗಳವಾದ ಸಾಧನೆ ಮಾಡಬೇಕು. ಇದರಿಂದ ಭಗವಂತನ ಸತ್ಯಸ್ವಭಾವ ಅರಿವಾಗುವುದು. ಮನಸ್ಸು ಅನೇಕ ಕಡೆ ಚದುರಿ ಹೋದಷ್ಟು ಅದು ತನ್ನ ಶಕ್ತಿ ಸಾಮರ್ಥ್ಯವನ್ನು ಕಳೆದುಕೊಂಡು ದುರ್ಬಲವಾಗಿ ಬಲಹೀನವಾಗುವುದು. ಅಂತಹ ಮನಸ್ಸಿನಿಂದ ಯಾವ ಮಹತ್ವದ ಕೆಲಸವೂ ಅಸಾಧ್ಯ.

೧೮೨. ಕತ್ತಲೆಯಲ್ಲಿ ಕಣ್ಣನ್ನು ಮುಚ್ಚಿಕೊಂಡು ಧ್ಯಾನಿಸು. ಸೆಖೆಯಾಗದಂತೆ ಕಿಟಕಿ ತೆರೆದಿಡು. ನಿನ್ನ ಉಡುಪು ಸಡಿಲವಾಗಿರಲಿ. ಶ್ರೀರಾಮಕೃಷ್ಣರು ಕೆಲವು ಸನ್ಯಾಸಿ ಶಿಷ್ಯರಿಗೆ ಬೆತ್ತಲೆ ಧ್ಯಾನಿಸುವಂತೆ

ಆಜ್ಞಾಪಿಸಿದ್ದರು! ಹೀಗೆ ಮಾಡುವುದು ಶಿಶುಭಾವ ಮತ್ತು ಬಂಧನ ವಿಮೋಚನೆಯ ಭಾವೋದಯಕ್ಕೆ ಸಹಕಾರಿ.

೧೮೩. ಧ್ಯಾನದ ವೇಳೆಯಲ್ಲಿ ಹೃದಯವನ್ನು ಇಷ್ಟದೇವತೆಯ ವಾಸಸ್ಥಳವೆಂದು ಭಾವಿಸಬೇಕು. ಅದನ್ನು ನಮ್ಮಿಷ್ಟಬಂದರೀತಿಯಲ್ಲಿ ಭಾವಿಸಬಹುದು. ಉದಾಹರಣೆಗೆ, ಹೃದಯಪೀಠ, ಹೃದಯ ಪದ್ಮ, ಹೃದಯ ಗಹ್ವರ, ಹೃದಯ ದೇಗುಲ, ಹೃದಯಾಕಾಶ, ಹೃತ್ಪಾತ್ರೆ, ಹೃದಯ ಕೇಂದ್ರ, ಹೃದಯದ ಆವಾಸಸ್ಥಾನ, ಹೃದಯ ಕುಟೀರ, ಹೃದಯ ಲತಾಗೃಹ, ಹೃದಯ ಸಿಂಹಾಸನ–ಅಂತೂ ಸಾಧಕ ಎಷ್ಟುವಿಧ ಕಲ್ಪಿಸಿಕೊಳ್ಳಬಹುದೋ ಅಷ್ಟು ವಿಧದಲ್ಲಿಯೂ ಧ್ಯಾನಿಸಬಹುದು. ಹೃದಯ ಅಂದರೆ ಚೇತನದ ಜೀವಾಳ–ಸಾಧಾರಣ ಸಲ್ಲಾಪಗಳಲ್ಲಿ ಪ್ರಿಯನು ತಾನು ಪ್ರೀತಿಸುವವರನ್ನು ಅತ್ಯಂತ ನಿಕಟವಾಗಿ ಆಲಂಗಿಸಲು ಹಂಬಲಿಸುವ ಭಾವನೆಯನ್ನು ಹೊರಸೂಸುವ ಸ್ಥಳ. ಯಾರಿಗೆ ಇಷ್ಟ ದೇವತೆಯನ್ನು ತಮ್ಮ ಹೃದಯದಲ್ಲಿ ಧ್ಯಾನಿಸಲು ಪ್ರಾರಂಭದಲ್ಲಿ ಆಗುವುದಿಲ್ಲವೋ ಅವರು ಒಂದು ಪಠ ಅಥವಾ ವಿಗ್ರಹವನ್ನು ತಮ್ಮ ಮುಂದಿಟ್ಟುಕೊಂಡು ಧ್ಯಾನಿಸಬಹುದು. ಆದರೆ ಅದು ಕೇವಲ ಬಾಹ್ಯವಾಗುತ್ತದೆ.

೧೮೪. ಧ್ಯಾನಕ್ಕೆ ಯೋಗ್ಯ ಸಮಯ. ಹಗಲು ರಾತ್ರಿ ಸಂಧಿಸುವ ಸಮಯ ಸೂರ್ಯೋದಯ ಮತ್ತು ಸೂರ್ಯಾಸ್ತ; ಬ್ರಾಹ್ಮೀಮುಹೂರ್ತ ಎಂದರೆ ರಾತ್ರಿಯ ಕಡೆಯ ಭಾಗ – ಸೂರ್ಯೋದಯಕ್ಕೆ ಒಂದು ಘಂಟೆ ಮುಂಚೆ, ಅರ್ಧರಾತ್ರೆ ಈ ಸಮಯದಲ್ಲಿ ಪ್ರಕೃತಿ ಸ್ತಬ್ಧವಾಗಿ ಶಾಂತವಾಗಿ. ನೀರವವಾಗಿರುವುದು. ಈ ಕಾಲದಲ್ಲಿ ಬೆನ್ನ ಮೂಳೆಯಲ್ಲಿರುವ ಸುಷುಮ್ನಾ ನಾಡಿ ಜಾಗ್ರತವಾಗಿರುತ್ತದೆ. ಮೂಗಿನ ಎರಡು ಹೊಳ್ಳೆಗಳಿಂದಲೂ ನಾವು ಉಸಿರಾಡುತ್ತೇವೆ. ಉಳಿದ ಕಾಲಗಳಲ್ಲಿ ಸುಷುಮ್ನಾ ಕಾಲುವೆಯ ಎರಡು ಪಕ್ಷಗಳಲ್ಲಿಯೂ ಇರುವ ಇಡ ಮತ್ತು ಪಿಂಗಳ, ಇವೆರಡರಲ್ಲಿ ಯಾವುದಾದರೊಂದು ನರ ಚಟುವಟಿಕೆಯಿಂದಿದ್ದು ಶ್ವಾಸೋಛ್ವಾಸಗಳು ಎಡ ಅಥವಾ ಬಲಮೂಗಿನ ಹೊಳ್ಳೆಯಿಂದ ಆಗುವುದು. ಇದರಿಂದ ಮನಸ್ಸು ಚಂಚಲವಾಗಿರುವುದು. ಈ ಕಾರಣದಿಂದ ಅನೇಕ ಯೋಗಿಗಳು ಸುಷುಮ್ನಾ ಜಾಗ್ರತೆ ಗೊಳ್ಳುವುದನ್ನು ನಿರೀಕ್ಷಿಸುತ್ತಿದ್ದು ಆ ವೇಳೆಯಲ್ಲಿ ತಮ್ಮ ಉಳಿದ ಕೆಲಸಗಳನ್ನೆಲ್ಲಾ ಬಿಟ್ಟು ಧ್ಯಾನಕ್ಕೆ ಕುಳಿತುಕೊಳ್ಳುವರು.

೧೮೫. ಸಾಧಕನಿಗೆ ಕೆಲವು ವೇಳೆ ಮನಸ್ಸು ಜಡವಾಗಿ ಬೇಸರ

ವಾದಂತೆ ಭಾಸವಾಗುತ್ತದೆ. ಯಾವ ಹೊಸ ಭಾವನೆಯೂ ಮೂಡುವು ದಿಲ್ಲ. ಜಪಧ್ಯಾನ ಮಾಡಲು ಇಚ್ಛೆ ಇರುವುದಿಲ್ಲ. ಮನಸ್ಸು ಹೀನ ಯೋಚನೆ, ಹೀನಪ್ರವೃತ್ತಿಗಳಕಡೆ ಓಡುವುದು. ಎಷ್ಟು ಶ್ರಮಪಟ್ಟರೂ ಅದನ್ನು ನಿಲ್ಲಿಸಲಾಗುವುದಿಲ್ಲ. ಹೀಗೆ ಇದು ಮುಂದುವರಿದರೆ ಇದಕ್ಕೆ ಪರಿಹಾರ ಸಾಧು ಸಂತರ ಸಹವಾಸ, ಅವರ ದರ್ಶನ ಮತ್ತು ಸ್ಪರ್ಶದಿಂದ. ಅವರ ಸೇವೆ ಮಾಡುವುದರಿಂದ ಅವರ ಶಕ್ತಿ ಮತ್ತು ದೈವಿಕ ಭಾವನೆಗಳು ಭಕ್ತನ ಹೃದಯಕ್ಕೂ ಪ್ರವಹಿಸಿ ಆಧ್ಯಾತ್ಮಿಕ ಹಸಿವನ್ನೂ ಕೊಡುತ್ತವೆ. ಮನಸ್ಸಿನ ಕಲ್ಮಶ ತೊಳೆದು ನಾವು ಹೆಚ್ಚು ಉತ್ಸಾಹದಿಂದ ಸಾಧನೆಗೆ ತೊಡಗುತ್ತೇವೆ. ಸಾಧುಸಂಗ ಮಾಡುವ ಸುಯೋಗವಿಲ್ಲದಿದ್ದಲ್ಲಿ ಪವಿತ್ರ ಗ್ರಂಥಗಳನ್ನೋದುವುದು, ಸದಾಲಾಪ, ದೇವರಿಗೆ ವ್ಯಾಕುಲ ಹೃದಯ ದಿಂದ ಮೊರೆಯಿಡುವುದು, ಇದರಲ್ಲಿ ಕಳೆಯಬೇಕು. ನಮ್ಮಿಚ್ಛೆ ಇರಲಿ ಇಲ್ಲದಿರಲಿ ದೇವರನಾಮ ಅಥವಾ ಮಂತ್ರವನ್ನು ಜಪಮಾಡಲು ದೃಢ ನಿಶ್ಚಯಮಾಡಿಕೊ. ಆಗ ಮಾರ ಮಾಯವಾಗಿ ತಮಸ್ಸಿನ ಅಂಧಕಾರ ಜಾರುವುದು ಕಾಣುವುದು.

೧೮೬. ಮನಸ್ಸನ್ನು ಯಾವಾಗಲೂ ಒಂದಲ್ಲ ಒಂದು ಕೆಲಸದಲ್ಲಿ ತೊಡಗಿಸು. ಅದನ್ನು ಎಂದಿಗೂ ಸೋಮಾರಿಯಾಗಿರಲು ಬಿಡಬೇಡ. ನೀನು ಅದನ್ನು ನಿರುದ್ಯೋಗಿಯಾಗಲು ಬಿಟ್ಟಕೂಡಲೆ ಅದು ಕೇಡನ್ನುಂಟು ಮಾಡಿ ನಿನ್ನನ್ನು ಕಾಡುವುದು. ಯಾವಾಗ ನಿನ್ನ ಮನಸ್ಸು ವೃಥಾ ಚಂಚಲವಾಗುವುದೋ, ಹೀನ ಯೋಚನೆಗೆ ಒಳಗಾಗುವುದೊ ಯಾವು ದಾದರೂ ಪ್ರಲೋಭನೆ ಅಥವಾ ಮಾನಸಿಕ ಉದ್ರೇಕವನ್ನು ತಡೆಯಲಶಕ್ಯ ಎಂದು ತೋರಿದ ಕೂಡಲೆ ನೀನಿರುವ ಸ್ಥಳವನ್ನು ಬಿಟ್ಟಿದ್ದು ಬೇರೊಂದು ವ್ಯತಿರಿಕ್ತವಾದ ವಾತಾವರಣಕ್ಕೆ ಹೋಗು. ಇಲ್ಲದೇ ಹೋದರೆ ಅದು ನಿನ್ನನ್ನು ಕ್ರಮೇಣ ಕೀಳು ಸ್ಥಿತಿಗೆಳೆಯುವುದು. ಊರಿನ ಆಚೆ ನಾಲ್ಕೈದು ಮೈಲಿ ಬಯಲು ಪ್ರದೇಶಗಳಲ್ಲಿ ಬೇಗ ಬೇಗ ಹೆಜ್ಜೆಯಿಟ್ಟು ನಡೆದರೂ ಮನ ಸ್ಸಿನ ಕೀಳುಪ್ರವೃತ್ತಿಗಳನ್ನು ತಾತ್ಕಾಲಿಕವಾಗಿ ಆದರೂ ತಡೆಯಬಹುದು. ಪ್ರಲೋಭನೆಯನ್ನು ತಡೆಗಟ್ಟಲು ಕೇವಲ ಎರಡು ದಾರಿಗಳಿವೆ. ಹೋರಾಟ ಅಥವಾ ಪಲಾಯನ. ಆದರೆ ಅಯ್ಯೊ! ಮನಸ್ಸಿನಿಂದ ಓಡಿಹೋಗಿ ಅದ ರಿಂದ ದೂರವಾಗಿರಲು ಬೇರೆ ದಾರಿಯೇ ಇಲ್ಲ. ಅದನ್ನು ಹಿಡಿತದಲ್ಲಿಟ್ಟು ಕೊಳ್ಳಬೇಕು. ಇಲ್ಲವೇ ಇದು ಹೇಳಿದಂತೆ ಕುಣಿಯಬೇಕು.

೧೮೭. ಘರ್ಷಣೆಯಿಂದ ಸೌದೆಯಲ್ಲಿರುವ ಬೆಂಕಿ, ಕಡೆಯುವುದರಿಂದ ಹಾಲಿನಲ್ಲಿರುವ ಬೆಣ್ಣೆ, ಅರೆಯುವುದರಿಂದ ಹರಳಿನಲ್ಲಿರುವ ಎಣ್ಣೆ, ಅಗೆಯುವುದರಿಂದ ಭೂಮಿಯಲ್ಲಿರುವ ನೀರು ದೊರಕುವುದು. ನಮ್ಮ ಹೃದಯಾಂತರಾಳದಲ್ಲಿ ಹುದುಗಿರುವ ಪರಮಾತ್ಮ ಪ್ರಾಣಪಣ ಪೂರ್ವಕ ಮಾಡಿದ ತಪಸ್ಸು ಮತ್ತು ಏಕಾಗ್ರತೆಯಿಂದ ಪ್ರಾಪ್ತವಾಗುವುದು.

೧೮೮. ಸಾಧನೆಯ ಪ್ರಾರಂಭದಲ್ಲಿ ಜಪ ಮತ್ತು ಧ್ಯಾನವನ್ನು ನಿಧಾನವಾಗಿ ಕ್ರಮೇಣ ಹೆಚ್ಚಿಸಬೇಕು. ಇಂದು ಅರ್ಧ ಅಥವಾ ಮುಕ್ಕಾಲು ಗಂಟೆ ಕಾಲವನ್ನು ಅದಕ್ಕಾಗಿ ವಿನಿಯೋಗಿಸಿದರೆ, ಇನ್ನು ಕೆಲವುದಿನ ಅಥವಾ ವಾರಗಳನಂತರ ಒಂದು ಗಂಟೆ ಅವಧಿಗೆ ಹೆಚ್ಚಿಸು. ನಂತರ ಅದನ್ನು ಏಕಪ್ರಕಾರವಾಗಿ ಒಂದೂವರೆ, ಎರಡು ಗಂಟೆ, ಹೀಗೆ ನಿಧಾನವಾಗಿ ನಿನ್ನ ಶಕ್ತಿಗೆ ತಕ್ಕಂತೆ ಹೆಚ್ಚಿಸುತ್ತಾ ಹೋಗು. ಆತುರ ಅಥವಾ ಉತ್ಕಂಠತೆಯಿಂದ ಉದ್ರಿಕ್ತನಾಗಿ ಫಲವನ್ನು ಬೇಗ ಹೊಂದುವ ಆಸೆಯಿಂದ ಬಲಾತ್ಕಾರವಾಗಿ ಮುಂದುವರಿದರೆ, ನಿನ್ನ ದೈಹಿಕ, ಮಾನಸಿಕ ಶಕ್ತಿ ಮೀರಿ ಪ್ರಯತ್ನಿಸಿದರೆ, ಮುಂದೆ ಈ ದುಡುಕಿನ ಪರಿಣಾಮವಾಗಿ ಹೆಚ್ಚು ವ್ಯಥೆ ಪಡಬೇಕಾಗುವುದು. ಅದರ ಪರಿಣಾಮ ಅತ್ಯಂತ ಕಠೋರವಾಗಿ ಅಸಹನೀಯವಾಗುವುದು, ನರಗಳು ದುರ್ಬಲವಾಗುವುವು. ಜಪ ಮತ್ತು ಧ್ಯಾನವನ್ನು ಮಾಡುವ ಉತ್ಸಾಹ ಮಾಯವಾಗಿ, ಮೆದಳು ಜಡವಾಗಿ, ಏನೂ ಹೊಳೆಯುವುದೇ ಇಲ್ಲ. ಪುನಃ ಹಿಂದಿನ ಸ್ಥಿತಿಯನ್ನು ಪಡೆಯಲು ಹೆಚ್ಚು ಕಾಲ ಶ್ರಮ ಎಚ್ಚರಿಕೆ ಬೇಕಾಗುತ್ತದೆ. ಮೆದಳು ಕೆಟ್ಟು ಹೋಗುವ ಸಂಭವವೂ ಉಂಟು. ಮಹಡಿಯ ಮೇಲಕ್ಕೆ ಒಂದೇ ನೆಗೆತಕ್ಕೆ ಹಾರಲಾಗುವುದಿಲ್ಲ. ಕೆಳಗೆ ಬಿದ್ದು ಕಾಲು ಮುರಿದು ಕೊಳ್ಳಬೇಕಾದೀತು. ಮೇಲೆ ಹೋಗಬೇಕಾದರೆ ಮೆಟ್ಟಲು ಮೆಟ್ಟಲಾಗಿ ಹತ್ತಿ ನಂತರ ಮಹಡಿಯನ್ನು ಸೇರಬೇಕು.

೧೮೯. ಯಾರು ಹೆಚ್ಚು ಧ್ಯಾನ ಮತ್ತು ಯೋಗಾಭ್ಯಾಸ ಮಾಡುವರೋ ಅವರು ನೂತನ ಸಾತ್ತ್ವಿಕ ಶರೀರವನ್ನು ಪಡೆಯುವರು. ಇಂದ್ರಿಯಾತೀತ ಕಲ್ಪನೆ, ಮನೋಭಾವಗಳ ರಭಸವನ್ನು ತಡೆಯಲು ಶಕ್ತಿಯುಳ್ಳ ಸ್ನಾಯುಜಾಲ ಮತ್ತು ನಾಡಿ ಚಕ್ರವನ್ನು ಹೊಂದುವರು.

೧೯೦. ಸನ್ಯಾಸಿಗಳು ಒಂದು ಸ್ಥಳದಲ್ಲಿ ನಿಂತು ಅನ್ನ ಛತ್ರದಿಂದ ಭಿಕ್ಷೆ ಸ್ವೀಕರಿಸುವುದು ಒಳ್ಳೆಯದಲ್ಲ. ವ್ಯಾಪಾರದಿಂದ ದುಡ್ಡುಗಳಿಸಿದ

ಗೃಹಸ್ಥರು, ಶ್ರಾದ್ಧದ ಸಮಯದಲ್ಲಿ ತಮ್ಮ ಪಿತೃಗಳಿಗೆ ಮುಂದಿನ ಜನ್ಮದಲ್ಲಿ ಸದ್ಗತಿಯುಂಟಾಗಲು, ತಮ್ಮ ಪಾಪ ರಾಶಿಯನ್ನು ಕಳೆದುಕೊಳ್ಳಲು, ಪುಣ್ಯಗಳಿಸಲೋಸುಗ ಇಲ್ಲವೆ ಅನೇಕ ಪ್ರಾಪಂಚಿಕ ಲಾಭದಾಸೆಯಿಂದ ಪ್ರೇರೇಪಿತರಾಗಿ ತುಂಬಾ ಹಣವನ್ನು ಈ ಛತ್ರಗಳಿಗೆ ದಾನ ಮಾಡಿರುತ್ತಾರೆ. ಆದ್ದರಿಂದ ಈ ಛತ್ರಗಳಲ್ಲಿ ಸಿಗುವ ಆಹಾರ ಆಧ್ಯಾತ್ಮಿಕ ದೃಷ್ಟಿಯಿಂದ ಅಶುದ್ಧ. ಮನಸ್ಸನ್ನು ಅಪವಿತ್ರಗೊಳಿಸಿ ಕೀಳುಮಟ್ಟಕ್ಕೆ ಬರುವಂತೆ ಮಾಡುತ್ತದೆ. ಮಧುಕರಿ ಭಿಕ್ಷೆ, ಅಂದರೆ ಮನೆ ಮನೆಗೂ ಹೋಗಿ ಭಿಕ್ಷಾನ್ನವನ್ನು ಬೇಡಿ ತರುವುದು, (ದುಂಬಿ ಅನೇಕ ಹೂಗಳಿಂದ ಶೇಖರಿಸಿರುವ ಜೇನಿನಂತೆ) ಸನ್ಯಾಸಿಗಳಿಗೆ ಉತ್ತಮ ಆಹಾರ. ಹೀಗೆ ಭಿಕ್ಷಾನ್ನದಿಂದ ತಂದ ಅನ್ನ ಪವಿತ್ರವಾದದು.

೧೯೧. ಸನ್ಯಾಸಿಗಳು ಸರಿಯಾಗಿ ಆಧ್ಯಾತ್ಮಿಕ ಸಾಧನೆಯನ್ನು ಮಾಡದಿದ್ದಲ್ಲಿ ಗೃಹಸ್ಥರಿಂದ ದಾನ ಸ್ವೀಕಾರ ಮಾಡಲು ಅವರಿಗೆ ಕೊಂಚವೂ ಹಕ್ಕಿಲ್ಲ. ಇದು ಗೃಹಸ್ಥರಿಗೆ ಮೋಸಮಾಡಿದಂತೆ– ಇದರಿಂದ ಸನ್ಯಾಸಿ ತೊಟ್ಟ ಪವಿತ್ರ ವ್ರತಕ್ಕೆ ಭಂಗ ಬರುವುದು. ಸನ್ಯಾಸಿಗಳು ತಮ್ಮ ಊಟ ಬಟ್ಟೆ ಬರೆ ಮುಂತಾದ ಜೀವನದ ಅತ್ಯಾವಶ್ಯಕ ವಸ್ತುಗಳಿಗಾಗಿ ತೊಂದರೆ ಪಡದೆ ತಮ್ಮ ಕಾಲವನ್ನೆಲ್ಲಾ ಆಧ್ಯಾತ್ಮಿಕ ಸಾಧನೆಯಲ್ಲಿ ಕಳೆಯಲು ಅವಕಾಶವಾಗುವಂತೆ ಗೃಹಸ್ಥರು ಸನ್ಯಾಸಿಗಳ ಸೇವೆ ಮಾಡುತ್ತಾರೆ. ಇಂತಹ ಸತ್ಕಾರ್ಯದಿಂದ ಸಹಜವಾಗಿಯೇ ಅವರು ಸನ್ಯಾಸಿಗಳು ಆರ್ಜಿಸಿದ ತಪಶ್ಶಕ್ತಿಯ ಒಂದು ಭಾಗಕ್ಕೆ ಪಾಲುದಾರರಾಗುತ್ತಾರೆ. ಆದ್ದರಿಂದ ಸನ್ಯಾಸಿಗಳು ತಮಗೆ ಸಹಾಯ ಮಾಡಿದವರಿಗೆ ಹಂಚಿಕೊಟ್ಟು ತಮಗೂ ಉಳಿಯುವಷ್ಟು ತಪಶ್ಶಕ್ತಿಯನ್ನಾರ್ಜಿಸಬೇಕು. ಇಲ್ಲವೆ ಅವರು ದೀವಾಳಿಯಾದರೆ ಧಾರ್ಮಿಕ ಹಾನಿಯಾಗುವುದು. ಇಹಪರವೆರಡರಲ್ಲೂ ಭ್ರಷ್ಟನಾದವನ ವ್ಯಥೆಗೆ ಕೊನೆಯೆ ಇಲ್ಲ. ಅವರು ನಿರಂತರ ದಾರಿದ್ರ್ಯದಲ್ಲಿರುತ್ತಾರೆ. ಆದ್ದರಿಂದಲೇ ಸರ್ವಸಂಗ ಪರಿತ್ಯಾಗಿಗಳಾದ ಸನ್ಯಾಸಿಗಳು, ಶ್ರದ್ಧಾವಂತರಾದ ಧಾರ್ಮಿಕರಾದ ಬ್ರಾಹ್ಮಣರು, ಶ್ರೀ ರಾಮಕೃಷ್ಣರ ತಂದೆಯಂತೆ, ಎಂದೂ ಯಾರ ಹತ್ತಿರವೂ ದಾನ ಸ್ವೀಕಾರ ಮಾಡುವುದಿಲ್ಲ. ದಾನ ಸ್ವೀಕರಿಸಿದರೆ ಋಣವನ್ನು ಹೊತ್ತಂತೆ. ಅದರಿಂದ ನಮ್ಮ ಸ್ವಾತಂತ್ರ್ಯಕ್ಕೆ ಭಂಗ.

೧೯೨. ಮನುಷ್ಯನು ತನ್ನ ತಂದೆ ತಾಯಿ, ಸಂಸಾರದ ಕರ್ತವ್ಯ ಮತ್ತು ಜವಾಬ್ದಾರಿ ಎಲ್ಲವನ್ನೂ ತೊರೆದು ಈ ಜನ್ಮದಲ್ಲೇ ಭಗವತ್ಸಾಕ್ಷಾ

ತ್ಕಾರ ಪಡೆಯುವ ತೀವ್ರ ಆಕಾಂಕ್ಷೆಯಿಂದ ಬ್ರಹ್ಮಚಾರಿ ಅಥವಾ ಸನ್ಯಾಸಿ ಯಾಗುತ್ತಾನೆ. ಆತನ ಆಧ್ಯಾತ್ಮಿಕ ಸಾಧನೆಯ ಫಲದಲ್ಲಿ ಅವರಿಗೂ ಒಂದು ಪಾಲಿರುತ್ತದೆ. ಆದಕಾರಣವೇ ತ್ಯಾಗಿಯ ಕುಲ ಪವಿತ್ರವಾಗುವುದು, ಜನನಿ ಕೃತಾರ್ಥಳಾಗುವಳೆಂದು ಹೇಳಿದೆ. ಇದೇ ಮಗನ ಪಿತೃಋಣ ವನ್ನು ತೀರಿಸುವುದು. ಆದರೆ ಯಾವ ಸನ್ಯಾಸಿ ತನ್ನ ತಂದೆ ತಾಯಿಗಳನ್ನು ಬಿಟ್ಟು ಬಂದು ಅವರ ಕಣ್ಣೀರು ಹರಿಸಿ, ನಂತರ ತನ್ನ ಧ್ಯೇಯದಿಂದ ಭ್ರಷ್ಟ ನಾಗಿ, ಸೋಮಾರಿಯಾಗಿ ದುರಭಿಮಾನದಿಂದ ಕೆಟ್ಟ ದಾರಿಯನ್ನು ಹಿಡಿಯುತ್ತಾನೋ ಆಗ ಅವನ ಒಳ್ಳೆಯ ಕೃತ್ಯಗಳು ಅವರ ಕಣ್ಣೀರಿನಿಂದ ಅಳಿಸಿ ಹೋಗುವುವು. ಇಂತಹ ಕೀಳು ಸ್ಥಿತಿಗಿಳಿದ ಮನುಷ್ಯನು ಹಿಂತಿರುಗಿ ಗೃಹಸ್ಥನಾಗಿ ಈ ಜೀವನದ ಕರ್ತವ್ಯಗಳನ್ನು ನಿರ್ವಹಿಸುವು ದೊಂದೆ ಪರಿಹಾರ ಮಾರ್ಗ.

೧೯೩. ಭಗವಂತನ ಸಾಕ್ಷಾತ್ಕಾರ ಮಾತ್ರ, ಆಧ್ಯಾತ್ಮಿಕ ನಿಧಿ ಮಾತ್ರ ಆ ಮಗು ಗೋಪಾಲನ ಪಾತ್ರೆಯ ಹಾಲಿನಂತೆ ಅಕ್ಷಯವಾಗ ಬಲ್ಲುದು. ಆ ಪಾತ್ರೆಯ ಹಾಲನ್ನು ಎಷ್ಟು ಬಗ್ಗಿಸಿದರೂ ಬರಿದಾಗುವುದೇ ಇಲ್ಲ, ಹಾಲು ಕಡಿಮೆಯಾಗುವುದಿಲ್ಲ. ನಿನಗೆ ಆ ಕಥೆ ಗೊತ್ತಿಲ್ಲವೆ? ಒಬ್ಬ ಬಡ ಬ್ರಾಹ್ಮಣ ವಿಧವೆಯ ಮಗ ಗೋಪಾಲನು ನಿತ್ಯವೂ ಶಾಲೆಗೆ ಒಂದು ಕಾಡಿನ ಮೂಲಕ ಹೋಗಬೇಕಾಗಿತ್ತು. ಭಯಗೊಂಡು ಹುಡು ಗನು ತಾಯಿಗೆ ಹೇಳಿದಾಗ, ಆಕೆ, "ಯಾಕೆ ಮಗು, ನಿನಗೆ ಭಯ? ನಿನ್ನ ಅಣ್ಣ ಮಧುಸೂದನ ಆ ಕಾಡಿನಲ್ಲಿ ವಾಸಿಸುತ್ತಾನೆ. ನೀನು ಅವನನ್ನು ಕರೆ ದೊಡನೆಯೆ ಅವನು ಬರುತ್ತಾನೆ" ಎಂದಳು. ಮುಗ್ಧ ಸ್ವಭಾವದ ಬಾಲಕನು ಇದನ್ನು ನಂಬಿದನು. ಅವನಿಗೆ ಯಾವಾಗ ಹೆದರಿಕೆಯಾದರೂ, "ಅಣ್ಣಾ, ಮಧುಸೂದನ ನೀನೆಲ್ಲಿರುವೆ?" ಎಂದು ಕೂಗುತ್ತಿದ್ದ. ಕೂಡಲೆ ಮನೋಹರಾ ಕೃತಿಯ ಒಬ್ಬ ಹುಡುಗನು ಕಾಡಿನೊಳಗಿಂದ, "ತಮ್ಮ, ನಾನಿಲ್ಲಿಯೇ ಇದ್ದೇನೆ. ಹೆದರಿಕೆ ಏಕೆ?" ಎಂದು ಆ ಹುಡುಗನ ಕೂಡ ಆಟವಾಡುತ್ತಾ ಮಾತು ಕತೆ ಆಡುತ್ತಾ ಕಾಡಿನಲ್ಲಿ ಜೊತೆಯಲ್ಲಿರುತ್ತಿದ್ದನು. ಹೀಗೆ ಕೆಲವು ದಿನ ಕಳೆಯಿತು. ಬಾಲಕನು ಬಹು ಸಂತೋಷದಿಂದಿದ್ದನು. ಒಂದು ದಿನ ಆ ಪಾಠಶಾಲೆಯ ಉಪಾಧ್ಯಾಯನ ತಾಯಿಯ ಶ್ರಾದ್ಧದಿನ ಬಂತು. ಆಕೆಯ ಆತ್ಮಕ್ಕೆ ಒಳ್ಳೆಯದಾಗಲೆಂದು ಶ್ರಾದ್ಧ ಮಾಡಬೇಕಾಯಿತು. ಶಿಷ್ಯ ರಿಗೆ ಅನೇಕ ವಸ್ತುಗಳನ್ನು ಬಹುಮಾನವಾಗಿ ತರಬೇಕೆಂದು ಗುರುಗಳ

ಅಪ್ಪಣೆ ಮಾಡಿದರು. ಅನೇಕ ಶ್ರೀಮಂತ ಬಾಲಕರು ರಾಶಿರಾಶಿಯಾಗಿ ಅನೇಕ ವಸ್ತುಗಳನ್ನು ಗುರುಗಳ ಮನೆಗೆ ಹೊತ್ತುಕೊಂಡು ಹೋದರು. ಗೋಪಾಲನ ತಾಯಿಯ ಹತ್ತಿರ ಏನೂ ಇರಲಿಲ್ಲ. ಅಣ್ಣ ಮಧುಸೂದನ ಅಂದು ಗೋಪಾಲನು ಸಪ್ಪೆಮೋರೆಯಿಂದ ಶಾಲೆಗೆ ಹೋಗುತ್ತಿರುವುದನ್ನು ನೋಡಿ ಕಾರಣವನ್ನು ಕೇಳಿದನು. ತಿಳಿದಾಗ ಒಂದು ಹಾಲಿನ ಕುಡಿಕೆ ಯನ್ನು ಅವನಿಗೆ ಕೊಟ್ಟು, "ನಿನ್ನ ಗುರುಗಳಿಗೆ ಇದನ್ನು ತೆಗೆದು ಕೊಂಡು ಹೋಗು" ಎಂದನು. ಗೋಪಾಲನು ಅದನ್ನು ಉಪಾಧ್ಯಾಯರಿಗೆ ಕೊಟ್ಟದ್ದೇ ತಡ, ಅವರಿಗೆ ತುಂಬಾ ಸಿಟ್ಟು ಬಂದು ಅಂತಹ ಸಣ್ಣ ವಸ್ತುವನ್ನು ತಂದ ನೆಂದು ಗೋಪಾಲನನ್ನು ಜರಿದರು. ಆದರೆ ಆ ಚಿಕ್ಕ ಕುಡಿಕೆಯನ್ನು ಎಷ್ಟು ಬರಿದು ಮಾಡಿದರೂ ಅದರಲ್ಲಿ ಹಾಲಿರುವುದನ್ನು ಕಂಡು ಎಲ್ಲರೂ ಆಶ್ಚರ್ಯ ಚಕಿತರಾದರು. ಎಲ್ಲವನ್ನೂ ಗೋಪಾಲನಿಂದ ಕೇಳಿ ತಿಳಿದುಕೊಂಡ ಉಪಾ ಧ್ಯಾಯರು ಅವನನ್ನು ಕಾಡಿಗೆ ಕರೆದೊಯ್ದು ಮಧುಸೂದನನನ್ನು ತಾನೂ ನೋಡಲು ಕರೆಯುವಂತೆ ಹೇಳಿದನು ಗೋಪಾಲನು ಕೂಗಿದಾಗ ಅಶರೀರ ವಾಣಿಯೊಂದು, "ನಿನ್ನ ಸರಳವಾದ ಶ್ರದ್ಧೆಯಿಂದ ನೀನು ನನ್ನನ್ನು ನೋಡುವೆ. ಆದರೆ ನಿನ್ನ ಉಪಾಧ್ಯಾಯರ ಮನಸ್ಸು ಇನ್ನೂ ಪವಿತ್ರ ವಾಗಿಲ್ಲದ ಕಾರಣ ಆತ ನನ್ನನ್ನು ನೋಡಲರ್ಹತೆ ಪಡೆದಿಲ್ಲ" ಎಂದು ಕೇಳಿಸಿತು.

೧೯೪. ಯಾರು ಅಂತಃಕರಣಪೂರ್ವಕ ಸರಳ ಶ್ರದ್ಧೆಯಿಂದ ಭಗವಂತನನ್ನು ಪ್ರಾರ್ಥಿಸುವರೋ, ಆತನ ಹೊರತು ಮತ್ತಾವುದೂ ಬೇಡ ವಾಗುವುದೋ ಅಂತಹವರು ಅವನನ್ನು ನೋಡುತ್ತಾರೆ. ಆತನ ದರ್ಶನ ವಾದ ಮೇಲೆ ಯಾವುದೂ ಬೇಕಾಗುವುದಿಲ್ಲ. ಇಚ್ಛೆ ಮೊದಲೇ ಇರುವುದಿಲ್ಲ. ಯಾರು ಇಹಪರ ಸುಖಕ್ಕಾಗಿ ಆತನನ್ನು ಪ್ರಾರ್ಥಿಸುವನೋ ಪ್ರಾಪಂಚಿಕ ವಸ್ತುಗಳಿಗಾಗಿ ಬೇಡುವನೋ ಅವನು ಭಗವಂತನಿಚ್ಛೆ ಯಿದ್ದರೆ ಅವನ್ನು ಪಡೆಯಬಹುದು. ಆದರೆ ಅವನಿಗೆ ಪರಮಾತ್ಮನ ದರ್ಶನವಾಗುವುದಿಲ್ಲ.

೧೯೫. "ಕಾಮಿನಿ ಕಾಂಚನ" ವೇ ಸನ್ಯಾಸಿಗಳು ಮತ್ತು ಬ್ರಹ್ಮ ಚಾರಿಗಳು ತಮ್ಮ ಧ್ಯೇಯದಿಂದುರುಳಲು ಕಾರಣ. ಎಂತಹ ದೊಡ್ಡ ದೊಡ್ಡ ಯೋಗಿವರ್ಯರು, ಜ್ಞಾನಿಗಳು ಈ ಕಾಮ ಕಾಂಚನದ ಅದ್ಭುತ ಮಾಯೆಯಿಂದ ಭ್ರಾಂತರಾಗಿ ಕೆಳಗುರುಳುತ್ತಾರೆ. ಒಂದು ಎಳೆ ಸಸಿ

ಯನ್ನು ಕಾಪಾಡುವುದಕ್ಕಾಗಿ ಬೇಲಿ ಇರುವಂತೆ ಸನ್ಯಾಸಿಗಳನ್ನು ಕಾಯು ವುದಕ್ಕಾಗಿ ಶಾಸ್ತ್ರಗಳಲ್ಲಿ ಹಲವು ಕಠಿಣ ನಿಯಮಗಳಿವೆ. "ಎಲ್ಲಿ ಕಾಮ ವಿರುವುದೋ ಅಲ್ಲಿ ರಾಮನಿಲ್ಲ" ಎಂದು ತುಳಸೀದಾಸನು ಹೇಳಿದ್ದಾನೆ. ಕಬೀರನು ಯಾವ ಯೋಗಿ ಸ್ತ್ರೀ ಸಂಗವನ್ನಿಟ್ಟುಕೊಂಡಿರುವನೋ ಅವನು ಕಳ್ಳ ಮತ್ತು ಕಪಟಿ ಎಂದು ಹೇಳಿದ್ದಾನೆ. ಶ್ರೀ ರಾಮಕೃಷ್ಣರು ತಮ್ಮ ಶಿಷ್ಯರು ಹೆಂಗಸರೊಂದಿಗೆ, ಭಕ್ತರಾದ ಸ್ತ್ರೀಯರಾಗಿದ್ದರೂ ಕೂಡ, ಸಹಕರಿಸುವುದನ್ನು ನಿಷೇಧಿಸಿದ್ದರು. ಅವರು, "ದೇವರ ನಾಮವನ್ನು ಕೇಳಿದಾಗ ಕಣ್ಣೀರು ಸುರಿಸುವ ಸ್ತ್ರೀಭಕ್ತೆಯರೊಂದಿಗೆ ಕೂಡ ಸೇರಬೇಡ. ಅವರ ಮನಸ್ಸು ಪವಿತ್ರವಾಗಿರಬಹುದು. ನಿನ್ನ ಮನಸ್ಸಿನಲ್ಲೇ ಅಪವಿತ್ರ ಭಾವನೆ ಏಳಬಹುದು" ಎನ್ನುತ್ತಿದ್ದರು. ಯಾರು ಇವರ ಉಪದೇಶವನ್ನು ಪರಿಪಾಲನೆ ಮಾಡಲಾಗಲಿಲ್ಲವೋ ಅವರು ಎಂತಹ ಉಚ್ಚ ಸ್ಥಿತಿಯಲ್ಲಿದ್ದರೂ ಪತಿತರಾದುದನ್ನು ನಾವು ನೋಡುವೆವು.

೧೯೬. ಮಹಾಮಾತೆಯವರು ಈ ವಿಷಯವಾಗಿಹೇಳಿರುವ ಮಾತು ಗಳು ಇನ್ನೂ ಕಠಿಣವಾಗಿದೆ. ಆಶ್ಚರ್ಯಕರವಾಗಿದೆ. ಅವರು ತನ್ನಿಂದ ದೀಕ್ಷೆ ಪಡೆದ ತರುಣ ವಯಸ್ಸಿನ ವಿಧವೆಯೊಬ್ಬಳಿಗೆ ಹೀಗೆಂದರು· "ಮಗು, ಪುರುಷರನ್ನು ಎಂದಿಗೂ ನಂಬಬೇಡ. ನಿನ್ನ ತಂದೆಯಾಗಲಿ, ಕೇವಲ ದೇವರೆ ಪುರುಷವೇಷಧಾರಿಯಾಗಿ ನಿನ್ನ ಮುಂದೆ ಬಂದು ನಿಂತರೂ ನೀನು ಅವನಲ್ಲಿ ನಂಬಿಕೆಯನ್ನಿಡಬೇಡ. ಅಂದರೆ ಉಳಿದವರ ಮಾತೇಕೆ?" ಎಂದರು. ಎಲ್ಲಿಯವರೆಗೆ ದೇಹಭಾವ ಇರುವುದೋ ಅಲ್ಲಿಯವರೆಗೆ ಕಾಮವಿರುತ್ತದೆ. ಜಾರುವ ಅಪಾಯವೂ ಇರುತ್ತದೆ. ಎಲ್ಲಿಯವರೆಗೆ ಮನಸ್ಸು ಅಪಕ್ವ ವಾಗಿ ರುವುದೋ ಅಲ್ಲಿಯವರೆಗೂ ಪ್ರಲೋಭನೆಗೆ ಒಳಗಾಗುವ ಸಂಭವವಿದೆ. ಆದ್ದರಿಂದ ಶಕ್ತಿಮೀರಿ ಅವುಗಳಿಂದ ದೂರವಾಗಿರಲು ಪ್ರಯತ್ನಿಸಬೇಕು· ಇಲ್ಲದಿದ್ದಲ್ಲಿ ಅಪಾಯ ಅನಿವಾರ್ಯ.

೧೯೭. ಸಾಧಕನು ಎದುರಿಸಬೇಕಾಗಿರುವುದರಲ್ಲಿ, ಕಾಮದಂತಹ ಘೋರವಾದ, ಪ್ರಬಲವಾದ ಶತ್ರು ಬೇರೊಂದಿಲ್ಲ. ಅದರ ಹಿಡಿತದಿಂದ ಪಾರಾಗಲು ಸಾಯುವವರೆಗೂ ನಿರಂತರ ಹೋರಾಡದೆ ಗತ್ಯಂತರವಿಲ್ಲ. ರಾವಣನು ಹೇಳುತ್ತಿದ್ದಂತೆ "ಎಂತಹ ಶತ್ರು ಈ ರಾಮ! ಬಾರಿಬಾರಿಗೂ ಸಾಯಿಸಿದರೂ ಸಾಯುವುದೇ ಇಲ್ಲ." ನಮ್ಮ ಪುರಾಣಗಳಲ್ಲಿ ಉಗ್ರ ತಪಸ್ಸುಮಾಡುತ್ತಿದ್ದ ಅನೇಕ ಋಷಿಗಳು, ಯೋಗಿಗಳು ಸ್ತ್ರೀವ್ಯಾಮೋ

ಹಕ್ಕೆ ಮಾರು ಹೋಗಿ ಬ್ರಹ್ಮಚರ್ಯವ್ರತದಿಂದ ಜಾರಿದ ಅನೇಕ ಕಥೆಗಳಿವೆ. ಆದ್ದರಿಂದಲೇ ಧರ್ಮಗ್ರಂಥಗಳಲ್ಲಿ ಸನ್ಯಾಸಿಗಳು ಮತ್ತು ಬ್ರಹ್ಮಚಾರಿಗಳು ಸ್ತ್ರೀಯರ ಹತ್ತಿರ ಯಾವ ಸಂಬಂಧವನ್ನೂ ಇಟ್ಟುಕೊಳ್ಳಕೂಡದೆಂದು ಉಲ್ಲೇಖಿತವಾಗಿದೆ. ಅವರು ಹೆಂಗಸರ ಮುಖವನ್ನು ಕೂಡ ಎತ್ತಿ ನೋಡಬಾರದು. ಅವರ ಹತ್ತಿರ ಸರಸದಿಂದ ರಹಸ್ಯವಾಗಿ ಮಾತನಾಡು ವುದಾಗಲಿ ಹೆಚ್ಚು ಸಂಭಾಷಣೆ ಆಗಲೀ ಇರಕೂಡದು. ಅವರು ಸ್ತ್ರೀಯರ ಚಿತ್ರಗಳನ್ನು ಕೂಡ ನೋಡಬಾರದೆಂದು ವಿಧಿಸುವರು. ಏಕೆಂದರೆ ಅವೂ ಕೂಡ ಅಪಕ್ವವಾದ ಮನಸ್ಸಿನಲ್ಲಿ ಕೆಟ್ಟ ಆಲೋಚನೆಗಳನ್ನು ಉದ್ರಿಕ್ತ ಗೊಳಿಸಬಹುದು. ಸೂಕ್ಷ್ಮವಾದ ರೀತಿಯಲ್ಲಿ ಹೀನ ಪ್ರವೃತ್ತಿಗಳನ್ನುಂಟು ಮಾಡಬಹುದು. ಸಾಧಾರಣ ಮನುಷ್ಯನು ಇಷ್ಟು ಕಠಿಣ ನಿಯಮಗಳನ್ನು ಆಚರಿಸಬೇಕಾಗಿಲ್ಲ. ಆದರೆ ಸರ್ವಸಂಗಪರಿತ್ಯಾಗಿಗಳಾದ ಸನ್ಯಾಸಿಗಳು ಬ್ರಹ್ಮಚಾರಿಗಳು ಯೋಗಾಭ್ಯಾಸ ಮತ್ತು ತಪಶ್ಚರ್ಯೆಯಿಂದ ದೇವರನ್ನು ಈ ಜನ್ಮದಲ್ಲೇ ಪಡೆಯಲು ಹೊರಟಿದ್ದಾರೆ. ಅವರು ಬೇರೊಂದು ವರ್ಗಕ್ಕೆ ಸೇರಿದವರು.

೧೯೮. ಸ್ತ್ರೀ ಪುರುಷ ಸಾಧಕರು ಒಬ್ಬರು ಮತ್ತೊಬ್ಬರೊಂದಿಗೆ ಸ್ವೇಚ್ಛೆಯಾಗಿ ಬೆರೆತು ಅಶ್ಲೀಲರೀತಿಯಲ್ಲಿ ವರ್ತಿಸುವುದನ್ನು ವಿಷದಂತೆ ತ್ಯಜಿಸಬೇಕು. ಈ ಕಾರಣದಿಂದ ಪ್ರತಿಯೊಂದು ಹಳೆಯ ಮತ್ತು ಹೊಸ ಧಾರ್ಮಿಕ ಸಂಸ್ಥೆಗಳಲ್ಲಿ ಎಲ್ಲಿ ಈ ನಿಯಮಗಳನ್ನು ಪಾಲಿಸಿಲ್ಲವೋ, ಅವು ಭ್ರಷ್ಟವಾಗಿ ಅಧೋಗತಿಗಿಳಿದಿವೆ. ಇವುಗಳ ಉದಾಹರಣೆಗಳು ನಮಗೆ ಹಿಂದೂ ದೇಶದಲ್ಲಿ ಬೌದ್ಧ, ತಾಂತ್ರಿಕ, ವೈಷ್ಣವ ಪಂಥಗಳಲ್ಲಿಯೂ, ಮಧ್ಯಯುಗದಲ್ಲಿ ಪಶ್ಚಿಮದೇಶಗಳಲ್ಲಿ ರೋಮನ್‌ಕ್ಯಾಥೊಲಿಕ್ ಪಂಗಡ ದಲ್ಲಿಯೂ ಬೇಕಾದಷ್ಟು ಸಿಕ್ಕಿವೆ. ಬುದ್ಧನ ಕಾಲದಲ್ಲಿ ಭಿಕ್ಷುಣಿಯರಿಗಾಗಿ ಒಂದು ವಿರಕ್ತ ಮಠ ಸ್ಥಾಪನೆಯಾಯಿತು. ಆಗ ಬುದ್ಧನು, "ಬೌದ್ಧ ಮತದ ನಾಶದ ಬೀಜವನ್ನು ಈಗ ಬಿತ್ತಾಯಿತು" ಎಂದು ಹೇಳಿದನು. ಪರಮದಯಾಳು ಚೈತನ್ಯಮಹಾಪ್ರಭು ತನ್ನ ಪ್ರೀತಿ ಪಾತ್ರನಾದ, ಸನ್ಯಾಸಿ ಶಿಷ್ಯ ಭಕ್ತಹರಿದಾಸನನ್ನು ತನ್ನ ಗುರುವಿನ ಅತ್ಯಂತ ಪ್ರಖ್ಯಾತ ಳಾದ ಸ್ತ್ರೀ ಭಕ್ತಳ ಹತ್ತಿರ ಭಿಕ್ಷೆ ಬೇಡಿದ ಸಣ್ಣ ತಪ್ಪಿಗೆ ಮಠ ಚ್ಯುತನನ್ನಾಗಿ ಮಾಡಿದನು. ಜನತೆಯ ಶಿಕ್ಷಣಕ್ಕಾಗಿ ಎಂತಹ ಉಗ್ರನಿದರ್ಶನ!

೧೯೯. ಕಾಮವನ್ನು ಮನಸ್ಸಿನಿಂದ ಓಡಿಸಲು ಪುರುಷರು ಸ್ತ್ರೀಯರ

ನ್ನೆಲ್ಲಾ ತಮ್ಮ ತಾಯಿಯರಂತೆಯೂ, ಸ್ತ್ರೀಯರು ಪುರುಷರನ್ನೆಲ್ಲಾ ತಮ್ಮ ಮಕ್ಕಳಂತೆಯೂ ನೋಡುವುದೊಂದೇ ದಾರಿ. ಇಂತಹ ಮಾನಸಿಕ ದೃಷ್ಟಿಯನ್ನು ಬೆಳೆಸದೆ ಹೋದರೆ ಎಂದಾದರೂ ಜಾರಿ ಬೀಳುವ ಅಪಾಯವಿದೆ. ಕಾಮವನ್ನು ಹಿಡಿತದಲ್ಲಿಟ್ಟು, ಕಠಿಣ ಬ್ರಹ್ಮಚರ್ಯವನ್ನಭ್ಯಾಸಿಸದ ಹೊರತು ಮನಸ್ಸು ಎಂದಿಗೂ ಸ್ಥಿರವಾಗುವುದಿಲ್ಲ. ಗಾಢವಾದ ಧ್ಯಾನ ಏಕಾಗ್ರತೆಯನ್ನು ಹೊಂದಲಾಗುವುದಿಲ್ಲ. ಸಾಂಪ್ರದಾಯಿಕ ಭಕ್ತಿಯಿಂದ ಬೇರೆಯಾದ ರಾಗಾನುಗಾಭಕ್ತಿ ಅಥವಾ ದೇವರಿಗಾಗಿ ಪರಮೋತ್ಕೃಷ್ಟವಾದ ಪ್ರೇಮವನ್ನು ಹೊಂದಲಾಗುವುದಿಲ್ಲ.

೨೦೦. ಅಪಕ್ವವಾದ ಮನಸ್ಸು ಅನೇಕ ವಿಧದಲ್ಲಿ ಹಾದಿ ತಪ್ಪಿಸುವುದು. ಅದು ಯಾವಾಗ ಹೇಗೆ ಅಜಾಕರೂಕರಾಗಿದ್ದ ಸಮಯದಲ್ಲಿ ಸಾಧಕನಿಗರಿವಿಲ್ಲದೆಯೇ ಅವನನ್ನು ಹಾದಿತಪ್ಪಿಸಿ ಮಾಯೆಯ ಬಲೆಯಲ್ಲಿ ಕಟ್ಟಿಹಾಕುತ್ತದೆಂಬುದನ್ನು ಕಂಡುಹಿಡಿಯುವುದು ಬಹಳ ಕಷ್ಟ. ಅಶುದ್ಧ ಮನಸ್ಸು ಸಹಜವಾಗಿ ಶರೀರಭೋಗ ಇಂದ್ರಿಯಲಾಲಸೆಗಳನ್ನು ಹುಡುಕುತ್ತಿರುತ್ತದೆ. ಹೆಂಡತಿ ಮಕ್ಕಳು ಸಂಸಾರವನ್ನು ತನ್ನದೆಂದು ಭಾವಿಸಿ ಮಾಯೆಗೆ ಮರುಳಾಗುವುದು. ಐಶ್ವರ್ಯ, ಸಂತಾನ, ಕೀರ್ತಿ, ಅಂತಸ್ತು, ಶಕ್ತಿ ಇವೇ ಜೀವನದ ಸರ್ವೋತ್ಕೃಷ್ಟ ವಸ್ತುಗಳೆಂದು ಭಾವಿಸುವುದು. ಬಾರಿಬಾರಿಗೂ ಸುಖವನ್ನರಸಲು ಹೋಗಿ ದುಃಖಪಟ್ಟರೂ, ಹೆಜ್ಜೆ ಹೆಜ್ಜೆಗೆ ಪೆಟ್ಟುತಿಂದರೂ ಅದಕ್ಕೆ ಬುದ್ಧಿ ಬರುವುದಿಲ್ಲ. ಈ ರೀತಿಯ ಅಪಕ್ವ ಮನಸ್ಸಿನವನು ತನ್ನ ಸುತ್ತಮುತ್ತ ಪ್ರತಿದಿನ ಜನರು ಸಾಯುತ್ತಿರುವುದನ್ನು ನೋಡಿಯೂ ತಾನು ಯಾವ ಘಳಿಗೆಯಲ್ಲಿ ಬೇಕಾದರೂ ಎಲ್ಲವನ್ನೂ ಇಲ್ಲಿಯೇ ಬಿಟ್ಟು ಹೋಗಬೇಕೆನ್ನುವುದನ್ನು ತಿಳಿಯುವುದಿಲ್ಲ. ತನ್ನ ಚಾತುರ್ಯವನ್ನೆಲ್ಲಾ ಉಪಯೋಗಿಸಿ, ಯಾವ ಬಗೆಯಿಂದಲಾದರೂ ಸರಿಯೆ, ತನ್ನಿಷ್ಟಾರ್ಥ ನೆರವೇರಬೇಕೆಂದು ಆಶಿಸುತ್ತಾನೆ. ಆತನ ಕೃತ್ಯಗಳಿಂದ ಮತ್ತೊಬ್ಬರಿಗೆ ನಷ್ಟ ಅಥವಾ ಹಿಂಸೆಯಾದರೆ ಅವನ್ನು ಗಮನಿಸುವುದೇ ಇಲ್ಲ. ಕೇವಲ ತಾನು ಸುಖಪಟ್ಟರೆ ಸಾಕು, ಮತ್ತಾವುದನ್ನೂ ಲೆಕ್ಕಿಸುವುದಿಲ್ಲ. ಈ ಪ್ರಪಂಚವೇ ಅವನ ಸಾರ ಸರ್ವಸ್ವ.

೨೦೧. ಈ ಅಪಕ್ವವಾದ ಮನಸ್ಸಿನಲ್ಲಿ ಗಣಿಯಿಂದ ಹೊರತೆಗೆದ ಇನ್ನೂ ಕರಗದೆ ಇರುವ ಅದುರಿನಂತೆ ಹಲವು ಬಗೆಯ ಕಲ್ಮಶಗಳು ಇರುತ್ತವೆ. ಅಶುದ್ಧ ವಸ್ತುವನ್ನು ತೊಳೆದು, ರಸಾಯನಿಕ ಕ್ರಮವನ್ನನುಸರಿಸಿ

ಕರಗಿಸಿದರೆ ಇದನ್ನು ಅಪ್ಪಟ ಚಿನ್ನ ಅಥವಾ ಅದಕ್ಕಿಂತ ಹೆಚ್ಚು ಬೆಲೆಯುಳ್ಳ ಬೇರೊಂದು ಲೋಹವಾಗಿ ಮಾಡಬಹುದು. ಅದರಂತೆಯೇ ಈ ಅಪಕ್ವವಾದ ಮನಸ್ಸನ್ನು ಕೂಡ ನಿತ್ಯ ಅನಿತ್ಯ ವಸ್ತು ವಿವೇಕದ ಜಲದಿಂದ ತೊಳೆದು, ಭಗವತ್ಪ್ರೇಮ ಮತ್ತು ವೈರಾಗ್ಯದ ಬೆಂಕಿಯಿಂದ ಪ್ರಾಪಂಚಿಕ ವಸ್ತುಗಳಮೇಲಿನ ವ್ಯಾಮೋಹವನ್ನು ಸುಟ್ಟು ಭಸ್ಮಮಾಡಿ, ಗುರು ಪ್ರದತ್ತ ಪರಮಾರ್ಥ ತತ್ತ್ವದಿಂದ ಶೋಧಿಸಿದರೆ ಆಗ ಮನಸ್ಸು ಶುದ್ಧವಾಗಿ ಪರಿಪಕ್ವವಾಗುವುದು. ನಿತ್ಯ ಶುದ್ಧ ಸಚ್ಚಿದಾನಂದಸ್ವರೂಪ ಪರಮೇಶ್ವರ ಅಂತಹ ಶುದ್ಧ ಪಕ್ವಮನಸ್ಸಿನಲ್ಲಿ ಗೋಚರಿಸುವನು.

೨೦೨. ಮನಸ್ಸು ಒಂದು ಹಣ್ಣಿನಂತೆ. ಅಪಕ್ವವಾದ ಹಣ್ಣು ಹುಳಿಯಾಗಿ, ಒಗರಾಗಿ ಅಥವಾ ಸಪ್ಪೆಯಾಗಿರುತ್ತದೆ. ಇದನ್ನು ತಿಂದರೆ ಅನೇಕ ರೋಗಗಳು ಬರುತ್ತವೆ. ಆದರೆ ಅದು ಹಣ್ಣಾದಾಗ ಎಷ್ಟು ಸಿಹಿಯಾಗಿ ಪ್ರಯೋಜನಕಾರಿಯಾಗುತ್ತದೆ; ಅದನ್ನು ದೇವರಿಗೆ ಕೂಡ ಪೂಜಿಸುವಾಗ ಅರ್ಪಿಸಬಹುದು. ಅದರಂತೆಯೇ ಮನಸ್ಸುಕೂಡ.

೨೦೩. ಅಪಕ್ವವಾದ ಮನಸ್ಸು ಸಾತ್ತ್ವಿಕ ಅಥವಾ ರಾಜಸಿಕ ಅಥವಾ ತಾಮಸಿಕವಾಗಿರಬಹುದು. ಸಾತ್ತ್ವಿಕ ಮನಸ್ಸುಳ್ಳವರು ಸಹಜವಾಗಿ ಧಾರ್ಮಿಕ ಪ್ರವೃತ್ತಿಯುಳ್ಳವರಾಗಿರುತ್ತಾರೆ. ಭಗವತ್ಸಾಕ್ಷಾತ್ಕಾರ ಹೊಂದಲು, ಸತ್ಯದಹಾದಿಯಲ್ಲಿ ನಡೆಯಲು ಇತರರಿಗೆ ಒಳ್ಳೆಯದನ್ನು ಮಾಡಲು ಆಸೆ. ಅವರು ಈ ಗುಣಗಳನ್ನು ಪಡೆಯಲು ಪ್ರಯತ್ನಿಸುವರು. ಆದರೆ ದುರದೃಷ್ಟ ರೋಗರುಜಿನ ಅಥವಾ ತಾವು ದುರ್ಬಲರು, ಅಯೋಗ್ಯರು ಎಂದು ನಿರಾಶರಾಗಿ ಹೆಚ್ಚು ಮುಂದುವರಿಯಲಾರರು. ರಾಜಸಿಕ ಸ್ವಭಾವದವರು ಪ್ರಪಂಚದಲ್ಲಿ, ಪ್ರಾಪಂಚಿಕ ಕೃತ್ಯಗಳಲ್ಲಿ ಎಷ್ಟರಮಟ್ಟಿಗೆ ಮುಳುಗಿರುತ್ತಾರೆ ಎಂದರೆ ಅವರಿಗೆ ಧರ್ಮದ ವಿಚಾರ ಯೋಚಿಸಲು ಕೂಡ ಹೊತ್ತೇ ಇರುವುದಿಲ್ಲ. ಅಥವಾ ಅವರು ಇಹ ಪರಗಳೆರಡರಲ್ಲೂ ಸುಖಗಳಿಸಲು ಯತ್ನಿಸಬಹುದು. ಯಾರು ತಾಮಸ ಸ್ವಭಾವದವರೊ ಅವರೆ ಹೆಚ್ಚಾಗಿ ಕೇಡುಂಟುಮಾಡುವವರು. ಅವರ ಏಕಮಾತ್ರ ಆಲೋಚನೆ ಪ್ರಯತ್ನವೆಂದರೆ, ಮತ್ತೊಬ್ಬರನ್ನು ಹೇಗೆ ತೊಂದರೆಗೆ ಗುರಿಮಾಡಿ ಹಾಳುಮಾಡುವುದು ಎಂಬುದು. ಇವರೇ ಕಾಮಾಂಧರಾದ ದುರಾಶಾಪೀಡಿತರಾದ ಪಾಪಿಷ್ಠರು.

೨೦೪. ಅಪಕ್ವ ಮನಸ್ಸುಳ್ಳವರು ತಮ್ಮ ದೇಶಕ್ಕೆ, ಜಗತ್ತಿಗೆ

ಕಲ್ಯಾಣ ಮಾಡಬೇಕೆಂದು ಹೊರಟರೆ, ಅಥವಾ ಸಹಾಯ ಸಂಸ್ಥೆಗಳನ್ನು ಸ್ಥಾಪಿಸಿದರೆ ಅದರ ಉಚ್ಚ ಧ್ಯೇಯವು ಏನೇ ಆಗಿದ್ದರೂ ಅವರಿಂದ ಜಗತ್ತಿಗೆ ಒಳ್ಳೆಯದಾಗುವುದಕ್ಕಿಂತ ಹೆಚ್ಚಾಗಿ ಹಾನಿಯಾಗುವುದು. ಅವರಿಗೆ ಬಹಳ ಕಾಲ ಈ ಪ್ರಪಂಚದಲ್ಲಿ ವಿವಿಧ ಘರ್ಷಣೆಯನ್ನೆದುರಿಸಿ ತಮ್ಮ ಆದರ್ಶದಲ್ಲಿ ವಿಶ್ವಾಸ ಇಡಲಾಗುವುದಿಲ್ಲ. ಉಗ್ರವಾಗಿ ಹೋರಾಡಿದರೂ ಅವರು ಮೋಹದ ಬಲೆಗೆ ಬೀಳುತ್ತಾರೆ. ಹೆಸರು, ಕೀರ್ತಿ, ಅಂತಸ್ತು, ಸಾಮರ್ಥ್ಯ ಇವುಗಳ ಆಸೆಯೇ ಅವರನ್ನು ಹೆಚ್ಚು ಆಕರ್ಷಿಸುತ್ತದೆ. ಅವರನ್ನು ಎಷ್ಟರ ಮಟ್ಟಿಗೆ ಅಸೂಯೆ, ದ್ವೇಷ, ಸಂಕುಚಿತ ಭಾವನೆ, ಸ್ವಾರ್ಥತೆ ಮುತ್ತುವುವೆಂದರೆ, ಅವರ ಎಲ್ಲಾ ಕೆಲಸಗಳೂ ಕೇವಲ ಧೂಮದಲ್ಲಿ ಕೊನೆಗಾಣುತ್ತವೆ. ಇದೊಂದೆ ಅಲ್ಲ, ಅವರು ತಮ್ಮೊಳಗಿನ ವಿಷದಿಂದ ಸಮಾಜಕ್ಕೇ ನೋವನ್ನು ಹರಡಿ ಅನೇಕ ಒಳ್ಳೆಯ ಭಾವನೆಯ ಮನುಷ್ಯರನ್ನು ಕೆಡಿಸುತ್ತಾರೆ. ಪರೋಪಕಾರ, ಧಾರ್ಮಿಕ ಸಂಸ್ಥೆ ಮತ್ತು ಸಭೆಗಳ ಮೇಲೂ ಧರ್ಮದ ಮೇಲೆ ಕೂಡ, ಜನರಿಗೆ ಅನುಮಾನ ಅಶ್ರದ್ಧೆಗಳುಂಟಾಗುವಂತೆ ಮಾಡುತ್ತಾರೆ.

೨೦೫. ಪ್ರಾರಂಭದಲ್ಲಿ ಸತ್ಯಸ್ವರೂಪ ಅದ್ವಿತೀಯ ಬ್ರಹ್ಮಮಾತ್ರ ಇದ್ದನು. ಮತ್ತೇನೂ ಇರಲಿಲ್ಲ. ಎಲ್ಲವೂ ಸರಿಯಾಗಿತ್ತು. ಒಮ್ಮೆ, ಎಚ್ಚರ ತಪ್ಪಿದ ವೇಳೆಯಲ್ಲಿ ಅವನು, "ನಾನು ಅನೇಕವಾಗಬೇಕು" ಎಂದಿಚ್ಛೆಪಟ್ಟನು. ಆಗ ಈ ಸೃಷ್ಟಿ ಎಲ್ಲವೂ ಕೋಟ್ಯನುಕೋಟಿ ಪ್ರಪಂಚಗಳೊಡನೆ ಉದ್ಭವಿಸಿತು. ಅವನೂ ಕೂಡ ಬಹಳ ತಪಸ್ಸು ಮತ್ತು ಧ್ಯಾನವನ್ನು ಇದಕ್ಕಾಗಿ ಮಾಡಬೇಕಾಯಿತು. ಈ ಭೂಮಂಡಲವನ್ನು ಸಚರಾಚರ ವಸ್ತುಗಳೊಡನೆ, ಚೇತನ ಅಚೇತನ ವಸ್ತುಗಳೊಡನೆ ಸೃಷ್ಟಿಸಿದ ನಂತರ ಬ್ರಹ್ಮನು ತಾನೆ ಅದರೊಳಗೆ ಪ್ರವೇಶಿಸಿ ಮನುಷ್ಯನಿಗೆ ಮಾತ್ರ ವಿವೇಕ ಬುದ್ಧಿಯನ್ನು ಅನುಗ್ರಹಿಸಿದನು. ನಂತರ ಅವನ ಅವಸ್ಥೆ, "ಬ್ರಹ್ಮನೇ ಪಂಚ ಭೂತಗಳ ಬಲೆಯಲ್ಲಿ ಸಿಕ್ಕಿ ಅಳುತ್ತಾನೆ" ಎಂದಂತೆ ಆಯಿತು. ಬುದ್ಧಿವಂತರೆಂದು ಕರೆಸಿಕೊಳ್ಳುವ ಕೆಲವು ಮನುಷ್ಯರು ತಮ್ಮ ತಪ್ಪುನೆಪ್ಪುಗಳು, ಅವಿವೇಕ ಕುಂದು ಕೊರತೆಗಳು, ದುರ್ಬಲತೆ ಕೆಟ್ಟನಡತೆ ಮುಂತಾದುವನ್ನು ಭಗವಂತನ ಹೆಗಲಿಗೊಪ್ಪಿಸಿ, ತಮ್ಮ ಎಲ್ಲಾ ಜವಾಬ್ದಾರಿಯನ್ನೂ ಆತನಿಗೆ ಒಪ್ಪಿಸಿದೆವೆಂದು ಭಾವಿಸುತ್ತಾರೆ. ಯಾವುದಾದರೊಂದು ಕೆಲಸದಲ್ಲಿ ಕೇವಲ ತಮ್ಮ ತಪ್ಪಿನಿಂದ ಅಥವಾ ಶ್ರಮ ಪಡದೆ ಇದ್ದುದರಿಂದ ಅಪಜಯ ಹೊಂದಿದರೆ, "ದೇವರಿಚ್ಛೆ ಇರಲಿಲ್ಲ" ಎನ್ನುತ್ತಾರೆ.

ತಾವು ಬಹುವಾಗಿ ಇಚ್ಛೆಪಟ್ಟಿದ್ದ ಕೆಲಸದಲ್ಲಿ ಜಯಗಳಿಸದೇ ಇದ್ದರೆ, "ಆತನ ಇಚ್ಛೆ ಪ್ರಕಾರ ನಡೆಯಿತು" ಎನ್ನುತ್ತಾರೆ. ಎಲ್ಲಾ ವಿಚಾರಗಳೂ, ದೇವರ ಇಚ್ಛೆ ಏನಿದೆ, ಏನಿಲ್ಲ ಎಲ್ಲವೂ ತಮಗೆ ತಿಳಿದಿದೆಯೋ ಎಂಬಂತೆ ನಟಿಸುತ್ತಾರೆ. ಹೀಗಿದ್ದರೆ ಅವರು ಅಸಾಧಾರಣ ಪುರುಷರಾಗಿರಬೇಕು! ಸರ್ವಜ್ಞನಾದವನ ಮನಸ್ಸೇ ತಿಳಿದ ಮೇಲೆ ಇನ್ನೇನು! ಅವರು ಅಧಿಕಾರ ದಾಸೆಯಿಂದ ಹಾಗೆ ತೋರ್ಪಡಿಸಿಕೊಳ್ಳುತ್ತಾರೆ. ಪ್ರತಿಯೊಬ್ಬನು ಮದುವೆ ಮಾಡಿಕೊಂಡು ಪ್ರಾಪಂಚಿಕ ಜೀವನ ನಡೆಸಬೇಕೆನ್ನುವುದು ದೇವರ ಇಚ್ಛೆ. ಏಕೆಂದರೆ ಎಲ್ಲರು ಸನ್ಯಾಸ ತೆಗೆದುಕೊಂಡರೆ ಸೃಷ್ಟಿಯ ಕೆಲಸ ಹೇಗೆ ಸಾಗುತ್ತದೆ? ತಾವು ಬಹುದಿನ ರಾತ್ರಿ ನಿದ್ದೆಗೆಟ್ಟು ಈ ಪ್ರಪಂಚ ಎಲ್ಲಿ ನಷ್ಟವಾಗಿ ಹೋಗುವುದೋ ಎಂದು ಕಾತರರಾದವರಂತೆ ನಟಿಸುವರು? ಜಗತ್ತಿನ ಜನರೆಲ್ಲಾ ಸನ್ಯಾಸಿಗಳಾಗಲು ತವಕಪಡುವರೆ?

೨೦೬. ಸಾಧಾರಣ ನಾವು ಮಾತನಾಡುವಾಗ "ಈಶ್ವರೇಚ್ಛೆ" ಎನ್ನುವೆವು. ಅವನ ಹೆಸರಿನಲ್ಲಿ ಆಣೆ ಇಡುತ್ತೇವೆ, ಅವನನ್ನು ಸಾಕ್ಷಿಗೆ ಕರೆಯುತ್ತೇವೆ. ಅವನ ಸಹಾಯ ಕೋರುತ್ತೇವೆ. ಇವೆಲ್ಲಾ "ದೇವರಾಣೆಗೂ" ಎಂದು ಮಕ್ಕಳು ಹೇಳುವಂತೆ. ಆಂಗ್ಲೇಯರು "Thank God" (ಭಗವಂತನಿಗೆ ಧನ್ಯವಾದ), My God (ನನ್ನ ದೇವರೆ) ಎನ್ನುವಂತೆ. ಯಾರು ಸಂಪೂರ್ಣ "ಅವನು ಯಾಂತ್ರಿಕ ತಾನು ಯಂತ್ರ" ಎಂದರಿತಿರುವನೋ, ಯಾರು ಇಚ್ಛೆ ಅನಿಚ್ಛೆ ನಿಂದಾಸ್ತುತಿ ಲಾಭನಷ್ಟ ಸುಖ ದುಃಖ ಎಂಬ ದ್ವಂದ್ವಗಳನ್ನು ಮೀರಿರುವನೊ ಅವನಿಗೆ ಮಾತ್ರ ಇದು ಅನುಭವ ವೇದ್ಯ.

೨೦೭. ವೇದಗಳ ಪ್ರಕಾರ ಪೂರ್ಣನಾಗಿರುವ ಬ್ರಹ್ಮನು ತ್ರಿಕಾಲದಲ್ಲಿಯೂ ಪೂರ್ಣನಾಗಿರುವನು. ಅವನು ಹೆಚ್ಚಾಗುವುದೂ ಇಲ್ಲ ಕಡಿಮೆಯಾಗುವುದೂ ಇಲ್ಲ, ಹಿಗ್ಗುವುದೂ ಇಲ್ಲ ಕುಗ್ಗುವುದೂ ಇಲ್ಲ. ಪೂರ್ಣದಿಂದ ಪೂರ್ಣವನ್ನು ಕಳೆದರೆ ಪೂರ್ಣವೇ ಉಳಿಯುವುದು. ಪೂರ್ಣಕ್ಕೆ ಪೂರ್ಣವನ್ನು ಸೇರಿಸಿದರೆ ಅದರ ಒಟ್ಟು ಕೂಡ ಪೂರ್ಣವೇ ಆಗುವುದು. ಅದು ಪೂರ್ಣ ಬ್ರಹ್ಮ ಅನಂತ ಪರಮಾತ್ಮನಿಗೆ – ಮಾತ್ರ ಸಲ್ಲುತ್ತದೆ. ಪೂರ್ಣ ಕೊಟ್ಟರೆ ಪೂರ್ಣ ದೊರಕುವುದು. ಅಖಂಡ ಪರಿಪೂರ್ಣ ಪರಬ್ರಹ್ಮಸ್ವರೂಪವುಳ್ಳ ಆ ಪರಮಾತ್ಮನ ದರ್ಶನವನ್ನು ಪಡೆಯಬೇಕಾದರೆ, ಕಾಯಾವಾಚಾಮನಸಾ ಶ್ರದ್ಧಾಪೂರ್ವಕ ಆತನಿಗೆ ತನ್ನೆಲ್ಲವನ್ನು

ಅರ್ಪಿಸಿಕೊಳ್ಳಬೇಕು. ಅವನಲ್ಲೇ ತನ್ಮಯನಾಗಿ ಸಾಧನೆ ಭಜನೆಯಲ್ಲಿ ನಿರತನಾದರೆ ನಿಮ್ಮಿಷ್ಟ ಸಿದ್ಧಿಸುವುದು.

೨೦೮. ಎಲ್ಲರಿಗೂ ಒಂದೇ ಸಮನಾದ ಶಕ್ತಿಸಾಮರ್ಥ್ಯಗಳಿಲ್ಲ. ಒಬ್ಬ ಗಟ್ಟಿಮುಟ್ಟಾದ ಬುದ್ಧಿವಂತ ಯುವಕ. ಪ್ರಪಂಚ ಸಂಬಂಧವನ್ನು ಕಿತ್ತೊಗೆದು ಬಂದಿರುತ್ತಾನೆ. ಹಗಲು ರಾತ್ರಿ ಏಕಾಂತ ವಾಸಮಾಡಿ ಮನಸ್ಸನ್ನು ಅಂಕೆಯಲ್ಲಿಟ್ಟುಕೊಳ್ಳಲು, ಚಿತ್ತವೃತ್ತಿಯನ್ನು ಶಾಂತಮಾಡಲು ಯೋಗಾಭ್ಯಾಸ ಮಾಡುತ್ತಾನೆ. ಭಿಕ್ಷಾನ್ನದಿಂದ ಊಟ ಸಿಕ್ಕಿದರೆ ಸಿಕ್ಕಿತು, ಇಲ್ಲದಿದ್ದರೆ ಗೆಡ್ಡೆಗೆಣಸು ಹಣ್ಣುಹಂಪಲದಲ್ಲಿರುತ್ತಾನೆ. ಅಂಥಹವನಿಗೆ ಸಾಕ್ಷಾತ್ಕಾರ ಅಥವಾ ಸಮಾಧಿ ಬಹು ಸುಲಭ. ಆದರೆ ಮತ್ತೆ ಕೆಲವರಿಗೆ ಅವರು ಎಷ್ಟೇ ತೀವ್ರವಾದ ಆಕಾಂಕ್ಷೆ ಹೊಂದಿ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿದರೂ, ಅವರ ಪರಿಸ್ಥಿತಿ ತೀರ ಪ್ರತಿಕೂಲವಾಗಿರುತ್ತದೆ. ಅವರು ತಮ್ಮ ವೃದ್ಧ ಅಸಹಾಯ ಮಾತಾಪಿತೃಗಳಿಗಾಗಿ ಪ್ರಪಂಚದಲ್ಲಿ ತೊಡಗಬೇಕಾಗುತ್ತದೆ. ಇಲ್ಲವೆ ಹೆಂಡತಿ ಮಕ್ಕಳ ನಿರ್ವಹಣೆಗಾಗಿ ಬೆನ್ನುಮೂಳೆ ಮುರಿಯುವಂತೆ ದುಡಿಯಬೇಕಾಗುತ್ತದೆ. ಇನ್ನೂ ಕೆಲವು ಭಕ್ತರು ಗುಣವಾಗದ ವ್ಯಾಧಿಯಿಂದ ಪೀಡಿತರಾಗಿ ಹಾಸಿಗೆ ಹಿಡಿದು ಆಧ್ಯಾತ್ಮಿಕ ಸಾಧನೆಯನ್ನು ಸರಿಯಾಗಿ ಮಾಡಲು ಅಶಕ್ತರಾಗುತ್ತಾರೆ. ಅಂಥಹವರಿಗೆ ಮುಕ್ತಿಗವಕಾಶವೇ ಇಲ್ಲವೇ? ಅವರು ಈ ತುಮುಲದಿಂದ ಕೂಡಿದ ಕಾರ್ಯಕಾರಣ ಸಾಗರದಲ್ಲಿ ಪ್ರಚಂಡ ಬಿರುಗಾಳಿಯಲ್ಲಿ ಸಿಕ್ಕಿದ ಸಣ್ಣ ದೋಣಿಯಂತೆ, ಬಂಡೆಗಳಿಗೆ ಅಪ್ಪಳಿಸುತ್ತಾ ತೂರಾಡುತ್ತಾ ನಿರಂತರ ಹೋರಾಡುತ್ತಿರಬೇಕೇ? ಅವರಿಗೆ ಬಿಡುಗಡೆಯ ಭರವಸೆಯೇ ಇಲ್ಲವೇ? ಕ್ರಿಮಿಕೀಟಗಳೋಪಾದಿ ಕಾರ್ಯಕಾರಣ ಚಕ್ರದಡಿಯಲ್ಲಿ ಪೂರ್ವಜನ್ಮದ ಪಾಪಶೇಷದಿಂದ ನುಚ್ಚುನೂರಾಗಬೇಕೆ? ಇಲ್ಲ. ಕರುಣಾಮಯ ಭಗವಂತನ ರಾಜ್ಯದಲ್ಲಿ ಇದು ಖಂಡಿತವಾಗಿಯೂ ಇಲ್ಲ. ಅವರ ಹೃದಯ ವಿದ್ರಾವಕ ಆರ್ತನಾದ ಅವನಿಗೆ ಕೇಳುವುದು. ಭರವಸೆ ಸಮಾಧಾನದಿಂದ ಕೂಡಿರುವ ಪ್ರಶಾಂತ ಗಂಭೀರ ವಾಣಿಯೊಂದು ಅವರ ಹೃದಯ ಗಹ್ವರದಲ್ಲಿ ಕೇಳುವುದು. ಮುಕ್ತಿಯ ಆಕಾಂಕ್ಷೆ ತೀವ್ರವಾಗಿದ್ದರೆ, ತಮ್ಮ ಶಕ್ತಿಯಿದ್ದಷ್ಟು ವ್ಯಾಕುಲ ಹೃದಯದಿಂದ ದೇವರಲ್ಲಿ ಶರಣಾದರೆ, ತಮ್ಮ ಬಂಧುಬಳಗವೆಲ್ಲಾ ದೇವರಿಗೆ ಸೇರಿದ್ದೆಂದು ತಿಳಿದು, ಕರ್ತವ್ಯ ಚಿತ್ತ ಮತ್ತು ವಿವೇಕದಿಂದ ತಮ್ಮ ಕೆಲಸದಲ್ಲಿ ನಿರತರಾಗಿ ಸಂಸಾರ ಜೀವನ ನಡೆಸುತ್ತಿದ್ದರೆ, ಅವರು ಯಾವ

ಕರ್ಮ ಬಂಧನಕ್ಕೂ ಸಿಲುಕದೆ, ಯಾವ ವ್ಯಕ್ತಿಯ ಪ್ರೇಮ ಮೋಹಕ್ಕೂ ಬೀಳದೆ ಇದ್ದರೆ ಅವರ ಸ್ಥಿತಿ ಎಷ್ಟೇ ವಿಷಮವಾಗಿರಲಿ ಅವರು ಈ ಜನ್ಮ ದಲ್ಲಿಯೇ ಆ ದೀನರಕ್ಷಕನಾದ ಆ ಭಗವಂತನ ಕೃಪೆಯಿಂದ ಶಾಂತಿ ಪಡೆದು ಮುಂದೆ ಪರಮ ಪದವಿಯನ್ನು ಹೊಂದುವರು.

೨೦೯. ಎಲ್ಲಾ ಮನಸ್ಸಿನ ಆಟ. ಎಲ್ಲಾ ಮನಸ್ಸನ್ನೇ ಅವಲಂಬಿ ಸಿದೆ. ಮನಸ್ಸಿನಲ್ಲೇ ಬಂಧನ, ಮನಸ್ಸಿನಲ್ಲೇ ಮುಕ್ತಿ. ಮತಿ ಇದ್ದಂತೆ ಗತಿ. ಯೋಗಿ ಎಲ್ಲಾವಿಧದಲ್ಲಿಯೂ ಅನುಕೂಲವಾದ ವಾತಾವರಣದಲ್ಲಿ ಕಠಿಣ ತಪಸ್ಸನ್ನು ಮಾಡುತಿದ್ದರೂ ಅಂತರ್ನಿಹಿತ ಪೂರ್ವಸಂಸ್ಕಾರಗಳಿಗೆ ವಶನಾಗಿ ವಿಷಯಸುಖ, ಹೆಸರು ಕೀರ್ತಿ ಆಸೆಗೆ ಬಲಿಯಾದರೆ, ಅವನ ಸಾಧನೆ ಭಜನೆ ತಪಸ್ಸೆಲ್ಲಾ ಬೂದಿಯಲ್ಲಿ ಮಾಡಿದ ಹೋಮದಂತೆ ನಿಷ್ಫಲ ವಾಗುವುದು. ಆದರೆ ತ್ರಿತಾಪದಗ್ಧ ಜೀವಿ ಸಂಸಾರದ ಅಸಾರತೆಯನ್ನು ಹೃತ್ಪೂರ್ವಕ ಮನಗಂಡು, ವಿರಾಗಿಯಾದರೆ ಸಮಸ್ತ ಮನಪ್ರಾಣಪೂರ್ವಕ ಪರಮೇಶ್ವರನಲ್ಲಿ ಶರಣಾಗತನಾದರೆ ಅವನನ್ನು ಜನ್ಮ ಮೃತ್ಯುರೂಪದಂತೆ ಇರುವ ದುಃಖದಿಂದ ಪಾರುಮಾಡುವನು.

೨೧೦. ನೀನು ಸನ್ಯಾಸಿಯಾಗಿರು, ಗೃಹಸ್ಥನಾಗಿರು, ಯಾರೇ ಆಗಲಿ ನಿನ್ನ ದಾರಿಯಲ್ಲಿ ನೀನು ಪ್ರಾಣದಾಸೆ ತೊರೆದು ಶ್ರಮಪಡಬೇಕು. ನಿನ್ನ ಆಧ್ಯಾತ್ಮಿಕ ಹಾದಿಗನುಗುಣವಾಗಿ ನಿನ್ನ ಜೀವನವನ್ನು ರೂಢಿಸಬೇಕು. ಖಂಡಿತವಾಗಿ ಚಾತುರ್ಯ ಅಥವಾ ಉಪಾಯದಿಂದ (ಕೃತ್ರಿಮ) ಸಾಕ್ಷಾತ್ಕಾರ ಲಭಿಸುವುದಿಲ್ಲ. ಮೋಸದಿಂದ ನಿನ್ನನ್ನು ನೀನೇ ವಂಚಿಸಿಕೊಳ್ಳುವೆ. ಎಲ್ಲ ವನ್ನು ಸರಿಯಾಗಿ ಪರ್ಯಾಲೋಚಿಸಿದರೆ ದೇವರು ಗೃಹಸ್ಥರಿಗೆ ಸನ್ಯಾಸಿಗಿಂತ ಹೆಚ್ಚು ಅನುಗ್ರಹಿಸುತ್ತಾನೆ. ಸನ್ಯಾಸಿ ಕೇವಲ ದೇವರ ಪ್ರಾರ್ಥನೆಗಾಗಿ ಎಲ್ಲವನ್ನು ತ್ಯಾಗಮಾಡಿ ಬಂದಿರುತ್ತಾನೆ. ಅವನು ಅದನ್ನು ಮಾಡದಿದ್ದಲ್ಲಿ ನಿಜವಾಗಿಯೂ ಪಾಪಿಷ್ಟ. ಆದರೆ ಪವಿತ್ರವಾದ ಹಿಂಜರಿಯದ ಗೃಹಸ್ಥ ಭಕ್ತರು ಈ ಜಗತ್ತಿನ ಕಠಿಣವಾದ ಹಾದಿಯಲ್ಲಿ ಭಾರವಾದ ಹೊರೆಯನ್ನು ಹೊತ್ತು ಹೋಗುತ್ತಿರುವಾಗಲೂ ದೇವರನ್ನು ಸ್ಮರಣೆಮಾಡಿ ಆತನ ಕೃಪೆಗಾಗಿ ಪ್ರಾರ್ಥಿಸುತ್ತಾರೆ. ಅದೂ ಅಲ್ಲದೆ ಅವರು ಸನ್ಯಾಸಿಗಳು, ದೈವಭಕ್ತರು ಇವರನ್ನು ಗೌರವಿಸಿ, ಸನ್ಮಾನಿಸಿ ಸೇವೆ ಮಾಡುತ್ತಾರೆ. ಭಿಕ್ಷೆ ನೀಡುವುದು, ಅನಾಥಾಶ್ರಮ, ವಿಶ್ರಾಂತಿಗೃಹ ಕಟ್ಟಿಸುವುದು ಮುಂತಾದ ಪುಣ್ಯಕೆಲಸಮಾಡುತ್ತಾರೆ.

೨೧೧. ಪ್ರತಿಯೊಬ್ಬರಿಗೂ ಈ ಜನ್ಮದಲ್ಲೇ ಸಾಕ್ಷಾತ್ಕಾರ ಹೊಂದುವ ಭಾಗ್ಯ ದೊರಕುವುದಿಲ್ಲ. ಯಾರು ಜನ್ಮ ಜನ್ಮಗಳಿಂದಲೂ ಉಗ್ರಸಾಧನೆ ಮಾಡಿರುತ್ತಾರೋ ಯಾರಿಗೆ ಕೇವಲ ಸ್ವಲ್ಪ ಕರ್ಮಮಾತ್ರ ಉಳಿದಿರುತ್ತದೆಯೋ, ಅಂತಹವರು ತಮ್ಮ ಪೂರ್ವಜನ್ಮದ ಪುಣ್ಯ ವಿಶೇಷದಿಂದ ಒಳ್ಳೆಯ ಪ್ರವೃತ್ತಿ ಇಚ್ಛೆಗಳನ್ನು ಹೊಂದಿರುತ್ತಾರೆ. ಈ ಜನ್ಮದಲ್ಲಿ ಅವರಿಗೆ ಆಧ್ಯಾತ್ಮಿಕ ಸಾಧನೆಗೆ ಯೋಗ್ಯ ವಾತಾವರಣ ದೊರೆತ ಕೂಡಲೆ ಅವರು ಉಳಿದ ಕರ್ಮವನ್ನು ಪೂರೈಸಿ ಜನನ ಮರಣಾತೀತವಾದ ಪರಮ ಪದವಿಯಲ್ಲಿ ಲೀನವಾಗುತ್ತಾರೆ.

೨೧೨. ಪ್ರತಿಯೊಂದು ಕರ್ಮಕ್ಕೂ ಫಲವುಂಟು. ಯಾವುದೂ ವ್ಯರ್ಥವಾಗುವುದಿಲ್ಲ, ನಾಶವಾಗುವುದಿಲ್ಲ. ಫಲ ಒಂದಲ್ಲ ಒಂದು ದಿನ ಸಿಕ್ಕಿಯೇ ಸಿಕ್ಕುವುದು. ಆದ್ದರಿಂದ ಎಲ್ಲಾ ಬಗೆಯ ಸತ್ಕರ್ಮವನ್ನು ಖಂಡಿತ ಮಾಡು. ಈ ಕರ್ಮಗಳು ಒಂದು ಬಂಡವಾಳವಾಗಿ ಇದರಿಂದ ಪೂರ್ವ ಕೃತ ಕುಕರ್ಮ ಮತ್ತು ಪಾಪರಾಶಿ ಋಣವನ್ನು ತೀರಿಸಬಹುದು.

೨೧೩. ಒಳ್ಳೆಯ ಕೆಲಸದ ಫಲ ಅಕ್ಷಯವಾಗುವುದು. ಅದನ್ನು ಹೆಚ್ಚುಗಳಿಸಿದಷ್ಟೂ ಈ ಜನ್ಮ ಮತ್ತು ಮುಂದಿನ ಜನ್ಮದಲ್ಲಿ, ಅಪಾಯ ಒದಗಿದಾಗ, ಅಂಧಕಾರ ಭಯ ನಿರಾಶೆಗಳಲ್ಲಿ ಹೆಚ್ಚು ಸಹಾಯ ಮಾಡುವುದು. ಇತರ ವಸ್ತುಗಳು ಅಶಾಶ್ವತ. ಅವುಗಳ ಸಂಪಾದನೆಗೆ ಹೆಚ್ಚು ಶ್ರಮ ಪಡಬೇಕು. ನಷ್ಟ ಅಥವಾ ಕೆಟ್ಟು ಹೋದರೆ ವ್ಯಥೆಪಡುತ್ತೇವೆ. ಯಾರೂ ಸತ್ತ ಮೇಲೆ ತನ್ನೊಡನೆ ಅದನ್ನು ತೆಗೆದುಕೊಂಡು ಹೋಗಲಾರರು. ಇಷ್ಟಕ್ಕೆ ಇದು ಮುಗಿಯುವುದಿಲ್ಲ. ಆ ವಸ್ತುವಿನ ಮೇಲಿನ ವ್ಯಾಮೋಹದಿಂದುಂಟಾದ ಅತೃಪ್ತಿ ಆಕಾಂಕ್ಷೆಗಳು ಸಂಸ್ಕಾರ ರೂಪದಲ್ಲಿ ನಮ್ಮ ಮುಂದಿನ ಜನ್ಮಕ್ಕೂ ಹಿಂಬಾಲಿಸುವುವು. ಹೊಸ ಹೊಸ ಕರ್ಮ ಮತ್ತು ಅದರ ಫಲಕ್ಕೆ ಸಿಕ್ಕಿಸಿ ಅಪಾರವಾದ ವ್ಯಥೆಗೀಡುಮಾಡಿ ಹೆಚ್ಚು ಹೆಚ್ಚು ಬಂಧನದಲ್ಲಿ ಬೀಳಿಸುವುವು.

೨೧೪. ಈ ಜಗತ್ತಿನಲ್ಲಿ ಬದ್ಧನಾಗಿರುವ ಜೀವಿ ಶ್ರೀರಾಮಕೃಷ್ಣರು ಹೇಳುತ್ತಿದ್ದ ಹಸಿ ಅಡಿಕೆ ಅಥವಾ ತೆಂಗಿನಕಾಯಿಯಂತೆ– ಅದರ ತಿರುಳು ಒಳಗಿನ ಕರಟಕ್ಕೆ ಅಂಟಿಕೊಂಡಿರುವುದರಿಂದ ಅವನ್ನು ಬೇರ್ಪಡಿಸಲಾಗುವುದಿಲ್ಲ. ಅದು ಹಣ್ಣಾದಾಗ, ಒಣಗಿರುವುದರಿಂದ ಬೇಗ ಬೇರೆಯಾಗುತ್ತದೆ. ಹಾಗೆ ನಾವು ಎಲ್ಲಿಯವರೆಗೆ ದೇಹಾತ್ಮ ಭಾವವನ್ನು ಹೊಂದಿರುತ್ತೇವೆಯೋ,

ನಮ್ಮ ಶರೀರದ ಸುಖದುಃಖವನ್ನು ಅನುಭವಿಸುತ್ತೇವೆಯೋ, ಅಲ್ಲಿಯ ವರೆಗೆ ಮಾಯಾ ಪಾಶಕ್ಕೆ ಸಿಲುಕಿ ತಾಪತ್ರಯಕ್ಕೀಡಾಗುತ್ತೇವೆ. ಯಾವಾಗ ಜೀವನು ಭಗವತ್ಕೃಪೆಯಿಂದ ದೇಹಾಭಿಮಾನವನ್ನು ತೊರೆಯುವನೋ ಆಗ ಅವನು ಮುಕ್ತಾತ್ಮನಾಗುವನು. ಯೋಗಸಾಧನೆ, ಭಕ್ತಿ, ಕರ್ಮದಿಂದ ನಿತ್ಯ ಶುದ್ಧ ನಿತ್ಯ ಮುಕ್ತ, ನಿತ್ಯಜ್ಯೋತಿರ್ಮಯ, ಅಖಂಡ ಪರಬ್ರಹ್ಮನ ಆತ್ಮಸಾಕ್ಷಾತ್ಕಾರವಾಗುವುದು.

೨೧೫. ಕರ್ಮಯೋಗದಿಂದ ಮನಸ್ಸು ಶುದ್ಧವಾಗಿ ಆತ್ಮಜ್ಞಾನ ವನ್ನು ಪಡೆಯಬಹುದು. ಕರ್ಮಯೋಗದಂತೆ ನಾವು ಕೆಲಸಮಾಡುವು ದಿಲ್ಲ. ಅದಕ್ಕೆ ನಾವು ಕರ್ಮ ಶೃಂಖಲೆಗೆ ಸಿಕ್ಕಿ ವ್ಯಥೆಗೀಡಾಗುವೆವು. ಈ ವಿಚಾರವನ್ನು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳುತ್ತಾನೆ. "ನಿನಗೆ ಕೆಲಸ ಮಾಡುವುದಕ್ಕೆ ಮಾತ್ರ ಹಕ್ಕಿದೆ ಅದರ ಫಲಕ್ಕಲ್ಲ. ಯಾರು ಫಲಾ ಪೇಕ್ಷಿಗಳೋ ಅವರು ಅಧಮರು". ಎಂದರೆ ಯಾರು ಕೇವಲ ತಮ್ಮ ಆಸೆಯ ತೃಪ್ತಿಗಾಗಿ ಕರ್ಮ ಮಾಡುವರೋ ಅವರು ಕೀಳು ಮನುಷ್ಯರು, ಹೀನ ಜನರು. ಕೆಲಸಮಾಡು, ನೀನೇನು ಮಾಡಿದರೂ ನಿಸ್ವಾರ್ಥತೆ, ನಿರ್ವ್ಯಾಮೋಹದಿಂದ ಮಾಡು. ಕರ್ಮಕ್ಕೋಸುಗ ಕರ್ಮಮಾಡು. ಪ್ರತಿ ಫಲಾಪೇಕ್ಷೆ ಇಲ್ಲದಿರಲಿ. ಆಗ ನೀನು ದಾಸ್ಯ ವಿಮುಕ್ತನಾಗುವೆ. ಕರ್ತವ್ಯ ಪರಿಪಾಲನೆಯನ್ನು ಮಾಡುವೆ, ಸುಖದುಃಖಾತೀತವಾದ ಪರಮಾನಂದ ವನ್ನು ಪಡೆದು ನಿನ್ನ ಬಾಳ ಗುರಿಯನ್ನು ಸೇರುವೆ.

೨೧೬. ಅನೇಕರಿಗೆ ಫಲದಾಸೆಯಿಲ್ಲದೆ, ಸ್ಫೂರ್ತಿ ಇಚ್ಛೆಯಾದರೂ ಹೇಗೆ ಬರುವುದೆಂಬುದೇ ಒಂದು ಸಮಸ್ಯೆ. ನಮ್ಮ ಮನಸ್ಸು ಶಕ್ತಿ ಎಲ್ಲ ವನ್ನೂ ವಿನಿಯೋಗಿಸಿ ಅದರಲ್ಲೇ ಹೇಗೆ ಮಗ್ನರಾಗುವೆವು! ಲಾಭರಹಿತ ಕರ್ಮವನ್ನು ನಾವೇಕೆ ಮಾಡಬೇಕು ಎಂಬ ಯೋಚನೆ ಶುದ್ಧ ತಪ್ಪು. ಮನುಷ್ಯರು ಸುಖಕ್ಕೆ ದುಡಿಯುವರೆಂಬುದೇನೋ ನಿಜ. ಆದರೆ ಇದರಿಂದ ಎಷ್ಟು, ಯಾವರೀತಿ "ಸುಖ" ಪಡೆಯಬಹುದು? ಹತ್ತರಲ್ಲಿ ಒಂಬತ್ತು ಭಾಗ ದುಃಖ, ಒಂದು ಭಾಗ ಅಥವಾ ಅದಕ್ಕೂ ಕಡಿಮೆ ಸುಖ. ಈ ಸುಖವೂ ಅಶಾಶ್ವತ, ದುಃಖಪೂರಿತವಾದುದು. ಇದಲ್ಲದೆ ನಮ್ಮ ಸ್ವಾರ್ಥ ಸಾಧನೆಗಾಗಿ, ಸಾಧಾರಣವಾಗಿ, ಮತ್ತೊಬ್ಬರಿಗೆ ವ್ಯಥೆ ನೋವು ಹಿಂಸೆಯನ್ನು ಕೊಟ್ಟು ಸುಖವನ್ನು ಪಡೆಯಬೇಕು. ಆದರೆ ಈ ಪ್ರಪಂಚ ದಲ್ಲಿ ಶಾಶ್ವತ ಸುಖವನ್ನು ಗಳಿಸಿರುವವರು ಸ್ವಾರ್ಥತ್ಯಾಗಿಗಳು ಮತ್ತು ವಿರ

ಕ್ತರು ಮಾತ್ರ. ಶ್ರೀ ಕೃಷ್ಣ, ಬುದ್ಧ, ಚೈತನ್ಯ, ಜೀಸಸ್ ಕ್ರೈಸ್ತ, ಶ್ರೀ ರಾಮ ಕೃಷ್ಣ ಮತ್ತು ವಿವೇಕಾನಂದರಂಥಹ ಎಷ್ಟುಮಂದಿ ನಮಗೆ ಚರಿತ್ರೆಯಲ್ಲಿ ಸಿಗಬಹುದು? ಬಹು ಅಪೂರ್ವ. ಅತಿ ಪ್ರಾಚೀನ ಕಾಲದಿಂದಲೂ, ಅಸಂಖ್ಯಾತ ಸ್ತ್ರೀಪುರುಷರ ಅಸಹನೀಯವಾದ ಬಾಳಹೊರೆಯನ್ನು ತಾವು ಹೊತ್ತು ಉದ್ಧಾರ ಮಾಡುವರು. ಅಜ್ಞಾನಾಂಧಕಾರದಲ್ಲಿ ಆವೃತರಾಗಿ ತಾಪತ್ರಯ ಪಾಪರಾಶಿಯಲ್ಲಿ ಮುಳುಗಿದ್ದ ಅಸಂಖ್ಯಾತ ಜನರಿಗೆ ಭರವಸೆ ಶಾಂತಿಯನ್ನು ನೀಡುವರು. ಅವರೇ ಆದರ್ಶ ಪುರುಷರು. ಅವರ ಬೋಧನೆ ಧ್ಯೇಯಗಳಿಂದ ಸ್ಫೂರ್ತಿಗೊಂಡು ಲಕ್ಷಾಂತರ ಜನ ತಮ್ಮ ಬಾಳನ್ನು ತೃಣದಂತೆ ಭಾವಿಸಿ ಇತರರಿಗಾಗಿ ನಿರ್ಭಯದಿಂದ ಜೀವ ತೆತ್ತು ಅಮರತ್ವ ವನ್ನು ಪಡೆದಿರುವರು.

೨೧೭. ಎಲ್ಲಾ ಧರ್ಮಗಳ ಮೂಲಮಂತ್ರವೆ ನಿರ್ಲಿಪ್ತತೆ, ವಿಷಯ ವಸ್ತುಗಳಮೇಲೆ ಅನಾಸಕ್ತಿ, ಸಮಸ್ತ ಜೀವ ಕೋಟಿಗೆ ಪ್ರೇಮ. ಇದನ್ನು ಹೊಂದಿರುವವರು ಈ ದೇಹ, ಇಂದ್ರಿಯಗಳ ದಾಸರಲ್ಲ. ಹೆಸರು, ಕೀರ್ತಿ, ಅಧಿಕಾರ ಲಾಲಸೆಗೆ ಆಸೆಪಡುವುದಿಲ್ಲ. ಅವರಲ್ಲಿ "ನಾನು, ನನ್ನದು" ಎಂಬ ಅಹಂಭಾವವಿರುವುದಿಲ್ಲ. ತಮ್ಮ ಬಂಧುಗಳು ಇತರರೆಂಬ ಭೇದ ಭಾವನೆ ಇರುವುದಿಲ್ಲ. ಎಲ್ಲಾ ಜೀವಗಳನ್ನು–ಬಡವ ಬಲ್ಲಿದ, ಬ್ರಾಹ್ಮಣ ಹೊಲೆಯ, ಉತ್ತಮ ಅಧಮ, ಶತ್ರು ಮಿತ್ರ, ಪ್ರಾಣಿ ಪಕ್ಷಿ ಕ್ರಿಮಿ— ಎಲ್ಲವನ್ನು ಸಮದೃಷ್ಟಿಯಿಂದ ನೋಡುತ್ತಾರೆ. ಹೊಗಳಿಕೆ ತೆಗಳಿಕೆ, ಲಾಭ ನಷ್ಟ, ಜಯ ಅಪಜಯ, ಸುಖ ದುಃಖ, ಯಾವುದರಿಂದಲೂ ವಿಚಲಿತ ರಾಗುವುದಿಲ್ಲ. ಹಿಗ್ಗುವುದೂ ಇಲ್ಲ ತಗ್ಗುವುದೂ ಇಲ್ಲ. ಅವರು ಕರ್ಮ ಮಾಡುತ್ತಿರುವಾಗಲೂ ಮಾಡುವುದಿಲ್ಲ. ಕರ್ಮ ಮಾಡದೆ ಇರುವಾಗಲೂ ಮಾಡುತ್ತಾರೆ. ಅವರೇ ನಿಜವಾದ ಆದರ್ಶ ಕರ್ಮಯೋಗಿ.

೨೧೮. ಪ್ರಾಣವನ್ನು ನಿಗ್ರಹಿಸುವುದೇ ಪ್ರಾಣಾಯಾಮದ ಗುರಿ. ಇದು ನಮ್ಮ ದೇಹದ ಅತಿ ಮುಖ್ಯ ಶಕ್ತಿ. ಶ್ವಾಸಕೋಶಗಳ ಚಲನೆಯೇ ಪ್ರಾಣದ ಆವಿರ್ಭಾವನೆ. ಇದು ಸಮನಾಗಿ ಹರಿದರೆ ಚಂಚಲಚಿತ್ತ ಸ್ತಬ್ಧ ವಾಗಿ ಶಾಂತವಾಗುವುದು. ಮನಸ್ಸು ಅನೇಕ ವಸ್ತುಗಳಲ್ಲಿ ಚದುರಿರುವುದ ರಿಂದ ಅದರ ಶಕ್ತಿ ವ್ಯರ್ಥವಾಗಿದೆ. ಒಂದೇ ವಸ್ತುವಿನ ಮೇಲೆ ಕೇಂದ್ರೀ ಕರಿಸಿದಾಗ ಮನಸ್ಸು ಅನಂತ ಶಕ್ತಿಯನ್ನು ಪಡೆಯುವುದು. ಯೋಗ ಶಾಸ್ತ್ರದ ಪ್ರಕಾರ ಅಂತಹ ಮನಸ್ಸಿಗೆ ಮೀರಿದ ಶಕ್ತಿ ಈ ಭೂಮಂಡಲ

ದಲ್ಲೇ ಇಲ್ಲ. ಆಧ್ಯಾತ್ಮಿಕ ರಾಜ್ಯದಲ್ಲಿ ಈ ಕೇಂದ್ರೀಕೃತ ಶಕ್ತಿಯನ್ನು ಧ್ಯಾನದ ಮೂಲಕ ಪರಮಾತ್ಮನೆಡೆಗೆ ತಿರುಗಿಸಿದರೆ, ಅತೀಂದ್ರಿಯಾವಸ್ಥೆಯಾದ ನಿರ್ವಿಕಲ್ಪ ಸಮಾಧಿಯ ಮೂಲಕ ಪರಬ್ರಹ್ಮನಲ್ಲಿ ಜೀವಾತ್ಮ ಐಕ್ಯವಾಗುವನು. ಹೃತ್ಪದ್ಮದಲ್ಲಿ ಸಾಕಾರರೂಪಿ ಭಗವಂತನ ಧ್ಯಾನದಲ್ಲಿ ಪೂರ್ಣ ಮಗ್ನನಾದರೆ ನಮ್ಮ ಇಷ್ಟದೇವತೆಯ ದರ್ಶನ ಲಭಿಸಿ ಭಗವತ್ ಸಾಕ್ಷಾತ್ಕಾರವಾಗುವುದು. ಇದನ್ನು ಸ್ವಾಭಾವಿಕ ಅಥವಾ ಅಲೌಕಿಕಕ್ಕೆ ತಿರುಗಿಸಿದರೆ ಅನೇಕ ಗಹನ, ಅದ್ಭುತ ಸತ್ಯಗಳು ಗೋಚರಿಸುವುವು. ಅಣಿಮಾದಿ ಅಷ್ಟಸಿದ್ಧಿಗಳು ಗೋಚರಿಸುವುವು.

೨೧೯. ಈ ಸಿದ್ಧಿಗಳು ಯಾವುವೆಂದರೆ (೧) ಅಣಿಮಾ – ಅಣುವಿನಷ್ಟು ಚಿಕ್ಕದಾಗುವ ಶಕ್ತಿ (೨) ಲಘಿಮಾ – ನಮ್ಮಿಚ್ಛೆ ಬಂದಷ್ಟು ಹಗುರವಾಗುವ ಶಕ್ತಿ. (೩) ಪ್ರಾಪ್ತಿ – ಇಚ್ಛೆ ಬಂದಾಗ ಸರ್ವ ವ್ಯಾಪಿಯಾಗುವ ಶಕ್ತಿ. (೪) ಪ್ರಾಕಾಮ್ಯ – ಅದ್ಭುತ ಇಚ್ಛಾಶಕ್ತಿ. (೫) ಮಹಿಮಾ – ಮನಬಂದಾಗ ದಪ್ಪನಾಗುವ ಶಕ್ತಿ. (೬) ಈಶಿತ್ವ - ಸಾರ್ವಭೌಮತ್ವ (೭) ವಶಿತ್ವ – ಸಂಕಲ್ಪದಂತೆ ಮತ್ತೊಬ್ಬರನ್ನು ದಾಸರನ್ನಾಗಿ ಮಾಡಿಕೊಳ್ಳುವ ಶಕ್ತಿ. (೮) ಕಾಮಾವಸಾಯಿತಾ — ನಾವಿಚ್ಛಿಸಿದಂತೆ ವರ್ತಿಸುವ ಅಥವಾ ನಾವು ಇಚ್ಛೆ ಪಟ್ಟ ವಸ್ತುವನ್ನು ಇಷ್ಟ ಬಂದಾಗ ಪಡೆಯುವ ಶಕ್ತಿ.

೨೨೦. ಈ ಸಿದ್ಧಿಗಳು ಪ್ರಚಂಡ ಪ್ರಲೋಭನೆಯನ್ನುಂಟುಮಾಡುವುವು. ಯೋಗಾಭ್ಯಾಸದಿಂದ ಸವಿಕಲ್ಪ ನಿರ್ವಿಕಲ್ಪ ಸಮಾಧಿ ಸ್ಥಿತಿಯನ್ನು ಹೊಂದುವಾಗ ಮಧ್ಯೆ ಈ ಸಿದ್ಧಿಗಳು ಘೋರ ಆತಂಕಗಳಾಗಿ ಪರಿಣಮಿಸುತ್ತವೆ. ಈ ಶಕ್ತಿಗೆ ಮರುಳಾದ ಸಾಧಕನು ಯೋಗಚ್ಯುತನಾಗಿ, ಆಸೆಯಿಂದ ಕೆಳಗುರುಳಿ ಅದನ್ನು ದುರುಪಯೋಗ ಪಡಿಸಿಕೊಂಡು ಭ್ರಷ್ಟನಾಗುವನು. ಕಾಮತೃಷೆಯಲ್ಲಿ ಮುಳುಗುವನು. ತನ್ನ ಅವನತಿಗೆ ಕಾರಣನಾಗಿ ದುರ್ಬಲನಾಗುತ್ತಾನೆ.

೨೨೧. ಯೋಗಾಭ್ಯಾಸ ಬಹು ಕಠಿಣ. ಸಾಧಾರಣ ಮನುಷ್ಯರಿಗೆ ಇದು ಯೋಗ್ಯವಲ್ಲ. ಈ ಕಾಲಸ್ಥಿತಿಯಲ್ಲಿ ಅವಶ್ಯಕವಾದುವನ್ನು ಅಂದರೆ ಸಾತ್ತ್ವಿಕ ಮತ್ತು ಸರಳವಾದ ಆಹಾರ ( ಹಣ್ಣು, ಗೆಡ್ಡೆ, ಹಾಲು ಮುಂತಾದುವು ) ಮಿತವಾದ ವ್ಯಾಯಾಮ, ನಿದ್ರೆ, ನಿರ್ಮಲ ಗಾಳಿ ಬೆಳಕಿರುವ ಏಕಾಂತಸ್ಥಳ, ಕ್ಲೇಶವಿಲ್ಲದ ಜೀವನ, ಎಲ್ಲಾ ವಿಚಾರದಲ್ಲೂ

ಒಂದು ನಿಯಮ ಮತ್ತು ಮಿತಿ, ಎಲ್ಲಕ್ಕಿಂತ ಹೆಚ್ಚಾಗಿ ಕಠಿಣ ಬ್ರಹ್ಮಚರ್ಯ ಮತ್ತು ಇಂದ್ರಿಯ ಸಂಯಮ, ಯೋಗಾಭ್ಯಾಸ ಪಾರಂಗತನಾದ ಗುರುವಿನ ಹತ್ತಿರ ವಾಸ—ಇದೆಲ್ಲವನ್ನೂ ಪಾಲಿಸಬೇಕಾದರೆ ಬಹಳ ಕಷ್ಟ. ಇವುಗಳಲ್ಲಿ ಒಂದು ಬಿಟ್ಟು ಹೋದರೂ ಯಶಸ್ವಿಯಾಗುವುದು ಕಷ್ಟ. ಗುರುವಿನ ಉಪದೇಶಕ್ಕೆ ಭಂಗ ಬಂದರೂ, ಕೊರತೆಯಾದರೂ ಅಥವಾ ಪುಸ್ತಕ ಜ್ಞಾನದಿಂದ ಇಚ್ಛಾನುಸಾರ ಯೋಗಾಭ್ಯಾಸ ಮಾಡಿದರೆ ಹೃದ್ರೋಗ ಅಥವಾ ಮತ್ತಾವುದಾದರೂ ಗುಣವಾಗದ ಖಾಯಿಲೆಗೆ ತುತ್ತಾಗುವ ಸಂಭವವಿದೆ. ಮೆದುಳು ಕೆಟ್ಟು ಹುಚ್ಚು ಹಿಡಿಯುವ ಸಂಭವವೂ ಇದೆ.

೨೨೨. ಶ್ವಾಸೋಚ್ಛ್ವಾಸಗಳ ಗತಿ ಅಸಮ ಎಂದರೆ ಅತಿ ವೇಗವಾಗಿ ಅಥವಾ ಕ್ಷೀಣವಾಗಿ ಏತಕ್ಕೆ ಆಗುವುದು? ನಾವು ಯಾವಾಗ ಕಾಮ ಕ್ರೋಧಾದಿ ಮನೋವಿಕಾರಗಳಿಗೊಳಗಾಗುವೆವೋ ಭೋಗೇಚ್ಛೆಯಿಂದ ಪ್ರಾಪಂಚಿಕ ವಸ್ತುಗಳಹಿಂದೆ ಓಡುತ್ತೇವೆಯೋ, ನಾವಿಚ್ಛೆಪಟ್ಟ ವಸ್ತುವಿನ ಹಾದಿಯಲ್ಲಿ ಇತರರಿಂದ ಅಡ್ಡಿಯುಂಟಾದರೆ, ಸಮಾಧಾನವನ್ನು ಕಳೆದು ಕೊಳ್ಳುವೆವೋ, ಅದು ಸಿಗದಿದ್ದಲ್ಲಿ ವ್ಯಸನಾಕ್ರಾಂತರಾಗುವೆವೋ, ಜಯ ಶೀಲರಾದರೆ ಉಬ್ಬಿ ಭ್ರಾಂತಿಯುತರಾಗಿ ಮರ್ಯಾದೆಯನ್ನೂ ಮರೆಯು ತ್ತೇವೆಯೋ, ಇತರರ ಸದ್ಗುಣವನ್ನು ನೋಡಿಕರುಬುವೆವೋ, ಮುಂಬರುವ ಅಪಾಯದ ಹೆದರಿಕೆಯಿಂದ ಕುಗ್ಗಿ ಕಳವಳಿಸುತ್ತೇವೆಯೋ, ಆ ಭಾವದಿಂದ ನಿರಾಶರಾಗುತ್ತೇವೆಯೋ, ಹೆಂಡತಿ ಮಕ್ಕಳ ರಕ್ಷಣೆ ನಿರ್ವಹಣೆಗಾಗಿ ಚಿಂತಾಕ್ರಾಂತರಾಗುವೆವೋ, ಅನಾರೋಗ್ಯದಿಂದ ಚಂಚಲ ಚಿತ್ತರಾಗಿ ವಿಕ್ಷೋಭೆಗೊಳ್ಳುತ್ತೇವೆಯೋ ನಮ್ಮ ಬಂಧುಗಳ ಸಾವಿನಿಂದ ಎಲ್ಲವೂ ಅಂಧ ಕಾರಮಯವಾಗುವುದೋ, ಐಶ್ವರ್ಯಾದಿಗಳು ಮುಳುಗಿಹೋದಾಗ ಹುಚ್ಚ ರಂತಾಗುವೆವೋ— ಆಗ ಮನಸ್ಸು ಪ್ರಚಂಡಕ್ಷೋಭೆಗೊಳಗಾಗುವುದು. ಆಗ ಒತ್ತಿದ ತಿದಿಯಂತೆ ನಮ್ಮ ಶ್ವಾಸೋಛ್ವಾಸಗಳು ಬಹು ಜೋರಾಗು ವುವು, ಇಲ್ಲಾ ನಿಂತೇ ಹೋದಂತಾಗುವುದು. ಈ ಭಯಾನಕ ಉದ್ವೇಗ ಆಂತರಿಕಶಕ್ತಿಯನ್ನು ಉದ್ರೇಕಿಸುವುದು, ರಕ್ತಸಂಚಾರ ಬದಲಾವಣೆ ಯಾಗುವುದು. ಇದನ್ನು ಆಮೂಲಾಗ್ರವಾಗಿ ಕಿತ್ತುಹಾಕದಿದ್ದರೆ, ವಿಷಯ ವಾಸನೆಗಳಲ್ಲಿ ವೀತರಾಗನಾಗದಿದ್ದರೆ, ಪಾರಮಾರ್ಥಿಕ ಚಿಂತನೆ ಏಕಾಗ್ರ ತಾಪೂರ್ವಕ ಜಪಧ್ಯಾನ ಮಾಡಲು ಅಸಾಧ್ಯ. ಆಗ ಎಷ್ಟು ಪ್ರಾಣಾ ಯಾಮ ಮಾಡಿದರೂ ಪ್ರಯೋಜನವಿಲ್ಲ, ಪ್ರಾರ್ಥನೆ ಮಾಡಿದರೂ

ಪ್ರಯೋಜನವಿಲ್ಲ.

೨೨೩. ಅನೇಕರು ಶರೀರದ ಮೇಲೆ ನನಗೆ ಹೆಚ್ಚು ಆಸಕ್ತಿಯಿಲ್ಲ. ಹೆಂಡತಿ ಮಕ್ಕಳಮೇಲೆ ಹೆಚ್ಚು ಮಾಯಾ ಮಮತೆಯಿಲ್ಲ, ಯಾವುದಕ್ಕೂ ವಶವಾಗಿಲ್ಲ ಎಂದು ಭಾವಿಸುವರು. ಆದರೆ ಅದೃಷ್ಟಚಕ್ರದಡಿಯಲ್ಲಿ ಆಘಾತದಮೇಲೆ ಆಘಾತ ಆಂತರಿಕ ಮತ್ತು ಬಾಹ್ಯರೂಪದಲ್ಲಿ ಮುತ್ತಿದಾಗ, ಒಂದು ಪ್ರಚಂಡ ಸತ್ತ್ವ ಪರೀಕ್ಷೆಯ ಸಮಯ ಒದಗಿದಾಗ, ತಮ್ಮ ಭ್ರಾಂತಿಯಿಂದೆಚ್ಚೆತ್ತು ಮಾಯೆಯ ಶೃಂಖಲೆಯಿಂದ ಬಂಧಿತರಾಗಿ ಅಸಹಾಯರಾಗಿರುವುದರ ಅರಿವಾಗುವುದು. ಪೂರ್ವಜನ್ಮದ ಪುಣ್ಯವಿಶೇಷವುಳ್ಳವರಿಗೆ ಇದು ಅಸಹನೀಯವಾಗುವುದು. ಹೇಗಾದರೂ ಮಾಡಿ ಅದರಿಂದ ಪಾರಾಗಲು ಅವರು ಹೆಣಗಾಡುವರು. ಇವರೇ ಮುಮುಕ್ಷುಗಳು, ಅಂದರೆ ಹುಟ್ಟು ಸಾವಿನಿಂದ ಬಿಡುಗಡೆ ಹೊಂದಲು ಪ್ರಬಲವಾದ ಇಚ್ಛೆಯುಳ್ಳವರು.

೨೨೪. ಮತ್ತೊಂದು ವರ್ಗದ ಜನರಿರುವರು. ತಲೆತಲಾಂತರದಿಂದ ಗುಲಾಮರಾಗಿರುವರು. ಆ ಸ್ಥಿತಿ ಎಷ್ಟು ಸಹಜವಾಗಿದೆ ಎಂದರೆ ಅವರು ಸ್ವಾತಂತ್ರ್ಯದ ಹೆಸರನ್ನು ಕೇಳಲೂ ಹೆದರುವರು. "ನಾವು ಇರುವ ಸ್ಥಿತಿಯಲ್ಲೇ ಸುಖವಾಗಿರುವೆವು. ಅಜ್ಞಾನ, ಸಂದೇಹಯುಕ್ತವಾಗಿರುವ ಸ್ವಾತಂತ್ರ್ಯದ ಹಾದಿಯಲ್ಲಿ ನಮ್ಮ ಸರ್ವಸ್ವವನ್ನೂ ತ್ಯಾಗಮಾಡಬೇಕಾದರೆ ನಮಗೆ ಆ ಸ್ವಾತಂತ್ರ್ಯವೇ ಬೇಡ" ಎಂದು ಯೋಚಿಸುವರು. ತಿಪ್ಪೆಯಲ್ಲಿರುವ ಹುಳುವನ್ನು ಹೂವಿನ ರಾಶಿಯಲ್ಲಿ ಹಾಕಿದರೆ ಅದು ಉಸಿರುಕಟ್ಟಿ ಸಾಯುವುದು. ಇವರೇ ಬದ್ಧಜೀವಿಗಳು ಸರ್ವಕಾಲದಲ್ಲಿಯೂ ಪ್ರಪಂಚಕ್ಕೆ ಬದ್ಧರಾಗಿರುವರು.

೨೨೫. ಜಗತ್ತಿನಲ್ಲಿ ನಿತ್ಯಸುಖವಿದ್ದಲ್ಲಿ, ಖಾಯಿಲೆ, ದುಃಖ, ಅಭಾವ, ಅಪಾಯ, ವಿಪತ್ತು, ಭಯ, ಕಳವಳಗಳೊಂದೂ ಇಲ್ಲದಿದ್ದಲ್ಲಿ ಯಾರು ತಾನೆ ದೇವರನ್ನು ಪ್ರಾರ್ಥಿಸಲು ತವಕಿಸುತ್ತಿದ್ದರು? ನಮ್ಮನ್ನು ಪರೀಕ್ಷಿಸಲು, ಬುದ್ಧಿಕಲಿಸಲು ಇದನ್ನು ಕೊಟ್ಟಿರುವನು. ಇದರಿಂದ ಮನುಷ್ಯ ದೇವರನ್ನು ಮರೆಯಲಾರ. ತನ್ನ ಅಸಹಾಯತೆಯನ್ನು ಮನಗಂಡು ದೇವರಲ್ಲಿ ಮೊರೆಯಿಡುವನು. ಎಲ್ಲಾ ಸ್ಥಿತಿಯಲ್ಲೂ, ಸುಖದುಃಖಗಳಲ್ಲೂ ಆತನನ್ನೇ ಶರಣು ಹೋಗು. ಆತನನ್ನು ಹೃತ್ಪೂರ್ವಕ ಪ್ರೀತಿಸು. ಆತನೇ ನಿನ್ನ ಜೀವನದ ಗುರಿ, ಬಾಳಿನ ಊರುಗೋಲು,

ಆಧಾರ, ಅವನೇ ಸರ್ವಸ್ವ ಎಂದು ತಿಳಿ. ಆಗ ದುಃಖ, ಶೋಕ, ಎಷ್ಟೇ ಅಮಂಗಳವಿದ್ದರೂ ಎಲ್ಲಾ ಪಲಾಯನವಾಗುವುದು. ಮನಸ್ಸು ಯಾವುದ ರಿಂದಲೂ ವಿಚಲಿತವಾಗುವುದಿಲ್ಲ. ಆನಂದದಿಂದ ತುಂಬಿ ತುಳುಕಾಡು ವುದು.

೨೨೬. ಈಶ್ವರಾನುರಾಗವನ್ನು ಯಾಚಿಸು. ಆ ಪ್ರೇಮಮಯ ಮೂರ್ತಿಯ ದರ್ಶನಾಕಾಂಕ್ಷಿಯಾಗಿ ರೋದಿಸು. ಅವನಿಗಾಗಿ ಹುಚ್ಚ ನಾಗು, ಅವನಿಲ್ಲದೆ ಬಾಳುವುದಕ್ಕೆ ಅಸಾಧ್ಯವೆಂದು ತಿಳಿ. ತನ್ನ ಭಕ್ತನ ವೇದನೆಯನ್ನು ಅವನರಿಯುವಷ್ಟು ಮತ್ತಾರು ಅರಿಯಬಲ್ಲರು? ಅವ ನಷ್ಟು ನಿನಗೆ ಬೇಕಾದವರು ಮತ್ತಾರು ಇರುವರು? ಅವನಷ್ಟು ಆತ್ಮೀ ಯರು ಮತ್ತಾರು ಇರುವರು? ನೂರಾರು ತಪ್ಪುಗಳನ್ನು ಮಾಡಿದ್ದರೂ, ಪಶ್ಚಾತ್ತಾಪ ಪಟ್ಟರೆ ನಮ್ಮನ್ನು ಕ್ಷಮಿಸಿ ಪ್ರೇಮಾಲಿಂಗನವಿತ್ತು ಎತ್ತಿ ಕೊಳ್ಳುವನು. ಅವನ ಪ್ರೇಮ ಅಸೀಮ. ಅವನು ಅನಂತ ಸುಖಸಾಗರ. ಅವನು ಅಮೃತ ಸಾಗರ, ಆ ಸಾಗರಕ್ಕೆ ಧುಮುಕು. ನೀನೂ ಅಮೃತ ವನ್ನು ಪಡೆಯುವೆ. ಆನಂದದಿಂದ ಓತಪ್ರೋತನಾಗುವೆ. ಸಕ್ಕರೆಯ ಪಾಕದಲ್ಲಿರುವ ರಸಗುಳ್ಳೆಯಂತೆ ಅದರಲ್ಲಿ ಈಜಾಡುವೆ. ಭಕ್ತ, ಭಗ ವಂತನ ರಸಾಸ್ವಾದನೆಯನ್ನು ತೊರೆದು ಮುಕ್ತಿ ಅಥವಾ ನಿರ್ವಾಣವನ್ನು ಕೂಡ ಇಚ್ಛಿಸದೆ ಇರುವುದು ಸುಮ್ಮನೆ ಏನು?

೨೨೭. ದೈವೋನ್ಮತ್ತರಲ್ಲಿ ಕುಡುಕರಂತೆ ಎರಡು ಬಗೆ. ಕುಡಿದು ನಿಶೆಯಿಂದ, "ತಾಯಿ, ತಾಯಿ" ಎಂದು ಶ್ಯಾಮಸಂಗೀತ ಹಾಡಿ ಪ್ರೇಮಾಶ್ರುವನ್ನು ಸುರಿಸುವರು ಕೆಲವರು. ಮತ್ತೆ ಕೆಲವರು ಪ್ರಜ್ಞೆ ತಪ್ಪುವವರೆಗೆ ಕುಡಿದು ಅಚೇತನರಾಗಿ ಬಿದ್ದಿರುವರು. ಆ ಸ್ಥಿತಿಗೆ ಏರುವ ವರೆಗೆ ತೃಪ್ತಿಯೇ ಇರುವುದಿಲ್ಲ. ಇದರಲ್ಲಿ ಮೊದಲು ಹೇಳಿದವರು ಭಕ್ತ ವರ್ಗಕ್ಕೆ ಸೇರಿದವರು. ಎರಡನೆ ವರ್ಗದವರು ಜ್ಞಾನಿಗಳು. ಈ ಎರಡು ವರ್ಗದವರು ತಮ್ಮ ತಮ್ಮ ಮನೋಭಾವಕ್ಕೆ ತಕ್ಕಂತೆ ಆಧ್ಯಾತ್ಮಿಕ ಭಾವ ದಲ್ಲಿ ಮುಳುಗುವರು. ಭಕ್ತ, ನಾನು ಭಗವಂತನಿಗೆ ಸೇರಿದವನು ಎಂದು ಭಾವಿಸುವನು. ಜ್ಞಾನಿ, ತನ್ನ ಆತ್ಮವನ್ನು ಭಗವಂತನಲ್ಲಿ ಐಕ್ಯಗೊಳಿಸಿ "ನಾನೇ ಅವನು—ಆ ಅಖಂಡ ಸತ - ಚಿತ್ - ಆನಂದ - ಪರಬ್ರಹ್ಮಸ್ವರೂಪ" ಎಂದು ಯೋಚಿಸುತ್ತಾನೆ. ಇದರಲ್ಲಿ ಯಾರ ಆನಂದ ಅಧಿಕವೆಂದು ಹೇಳ ಬಲ್ಲೆಯಾ? ಜ್ಞಾನ ಮತ್ತು ಭಕ್ತಿಯ ಪರಮ ಗುರಿ ಒಂದೆ. ಅದೇ ಆತ್ಮದಲ್ಲಿ

ಪ್ರಯೋಜನವಿಲ್ಲ.

೨೨೩. ಅನೇಕರು ಶರೀರದ ಮೇಲೆ ನನಗೆ ಹೆಚ್ಚು ಆಸಕ್ತಿಯಿಲ್ಲ. ಹೆಂಡತಿ ಮಕ್ಕಳಮೇಲೆ ಹೆಚ್ಚು ಮಾಯಾ ಮಮತೆಯಿಲ್ಲ, ಯಾವುದಕ್ಕೂ ವಶವಾಗಿಲ್ಲ ಎಂದು ಭಾವಿಸುವರು. ಆದರೆ ಅದೃಷ್ಟಚಕ್ರದಡಿಯಲ್ಲಿ ಆಘಾತದಮೇಲೆ ಆಘಾತ ಆಂತರಿಕ ಮತ್ತು ಬಾಹ್ಯರೂಪದಲ್ಲಿ ಮುತ್ತಿದಾಗ, ಒಂದು ಪ್ರಚಂಡ ಸತ್ತ್ವ ಪರೀಕ್ಷೆಯ ಸಮಯ ಒದಗಿದಾಗ, ತಮ್ಮ ಭ್ರಾಂತಿ ಯಿಂದೆಚ್ಚೆತ್ತು ಮಾಯೆಯ ಶೃಂಖಲೆಯಿಂದ ಬಂಧಿತರಾಗಿ ಅಸಹಾಯ ರಾಗಿರುವುದರ ಅರಿವಾಗುವುದು. ಪೂರ್ವಜನ್ಮದ ಪುಣ್ಯವಿಶೇಷವುಳ್ಳ ವರಿಗೆ ಇದು ಅಸಹನೀಯವಾಗುವುದು. ಹೇಗಾದರೂ ಮಾಡಿ ಅದರಿಂದ ಪಾರಾಗಲು ಅವರು ಹೆಣಗಾಡುವರು. ಇವರೇ ಮುಮುಕ್ಷುಗಳು, ಅಂದರೆ ಹುಟ್ಟು ಸಾವಿನಿಂದ ಬಿಡುಗಡೆ ಹೊಂದಲು ಪ್ರಬಲವಾದ ಇಚ್ಛೆ ಯುಳ್ಳವರು.

೨೨೪. ಮತ್ತೊಂದು ವರ್ಗದ ಜನರಿರುವರು. ತಲೆತಲಾಂತರ ದಿಂದ ಗುಲಾಮರಾಗಿರುವರು. ಆ ಸ್ಥಿತಿ ಎಷ್ಟು ಸಹಜವಾಗಿದೆ ಎಂದರೆ ಅವರು ಸ್ವಾತಂತ್ರ್ಯದ ಹೆಸರನ್ನು ಕೇಳಲೂ ಹೆದರುವರು. "ನಾವು ಇರುವ ಸ್ಥಿತಿಯಲ್ಲೇ ಸುಖವಾಗಿರುವೆವು. ಅಜ್ಞಾನ, ಸಂದೇಹಯುಕ್ತ ವಾಗಿರುವ ಸ್ವಾತಂತ್ರ್ಯದ ಹಾದಿಯಲ್ಲಿ ನಮ್ಮ ಸರ್ವಸ್ವವನ್ನೂ ತ್ಯಾಗಮಾಡ ಬೇಕಾದರೆ ನಮಗೆ ಆ ಸ್ವಾತಂತ್ರ್ಯವೇ ಬೇಡ" ಎಂದು ಯೋಚಿಸುವರು. ತಿಪ್ಪೆಯಲ್ಲಿರುವ ಹುಳುವನ್ನು ಹೂವಿನ ರಾಶಿಯಲ್ಲಿ ಹಾಕಿದರೆ ಅದು ಉಸಿರುಕಟ್ಟಿ ಸಾಯುವುದು. ಇವರೇ ಬದ್ಧಜೀವಿಗಳು ಸರ್ವಕಾಲ ದಲ್ಲಿಯೂ ಪ್ರಪಂಚಕ್ಕೆ ಬದ್ಧರಾಗಿರುವರು.

೨೨೫. ಜಗತ್ತಿನಲ್ಲಿ ನಿತ್ಯಸುಖವಿದ್ದಲ್ಲಿ, ಖಾಯಿಲೆ, ದುಃಖ, ಅಭಾವ, ಅಪಾಯ, ವಿಪತ್ತು, ಭಯ, ಕಳವಳಗಳೊಂದೂ ಇಲ್ಲದಿದ್ದಲ್ಲಿ ಯಾರು ತಾನೆ ದೇವರನ್ನು ಪ್ರಾರ್ಥಿಸಲು ತವಕಿಸುತ್ತಿದ್ದರು? ನಮ್ಮನ್ನು ಪರೀಕ್ಷಿಸಲು, ಬುದ್ಧಿಕಲಿಸಲು ಇದನ್ನು ಕೊಟ್ಟಿರುವನು. ಇದರಿಂದ ಮನುಷ್ಯ ದೇವರನ್ನು ಮರೆಯಲಾರ. ತನ್ನ ಅಸಹಾಯತೆಯನ್ನು ಮನಗಂಡು ದೇವರಲ್ಲಿ ಮೊರೆಯಿಡುವನು. ಎಲ್ಲಾ ಸ್ಥಿತಿಯಲ್ಲೂ, ಸುಖ ದುಃಖಗಳಲ್ಲೂ ಆತನನ್ನೇ ಶರಣು ಹೋಗು. ಆತನನ್ನು ಹೃತ್ಪೂರ್ವಕ ಪ್ರೀತಿಸು. ಆತನೇ ನಿನ್ನ ಜೀವನದ ಗುರಿ, ಬಾಳಿನ ಊರುಗೋಲು,

ಆಧಾರ, ಅವನೇ ಸರ್ವಸ್ವ ಎಂದು ತಿಳಿ. ಆಗ ದುಃಖ, ಶೋಕ, ಎಷ್ಟೇ ಅಮಂಗಳವಿದ್ದರೂ ಎಲ್ಲಾ ಪಲಾಯನವಾಗುವುದು. ಮನಸ್ಸು ಯಾವುದರಿಂದಲೂ ವಿಚಲಿತವಾಗುವುದಿಲ್ಲ. ಆನಂದದಿಂದ ತುಂಬಿ ತುಳುಕಾಡುವುದು.

೨೨೬. ಈಶ್ವರಾನುರಾಗವನ್ನು ಯಾಚಿಸು. ಆ ಪ್ರೇಮಮಯ ಮೂರ್ತಿಯ ದರ್ಶನಾಕಾಂಕ್ಷಿಯಾಗಿ ರೋದಿಸು. ಅವನಿಗಾಗಿ ಹುಚ್ಚನಾಗು, ಅವನಿಲ್ಲದೆ ಬಾಳುವುದಕ್ಕೆ ಅಸಾಧ್ಯವೆಂದು ತಿಳಿ. ತನ್ನ ಭಕ್ತನ ವೇದನೆಯನ್ನು ಅವನರಿಯುವಷ್ಟು ಮತ್ತಾರು ಅರಿಯಬಲ್ಲರು? ಅವನಷ್ಟು ನಿನಗೆ ಬೇಕಾದವರು ಮತ್ತಾರು ಇರುವರು? ಅವನಷ್ಟು ಆತ್ಮೀಯರು ಮತ್ತಾರು ಇರುವರು? ನೂರಾರು ತಪ್ಪುಗಳನ್ನು ಮಾಡಿದ್ದರೂ, ಪಶ್ಚಾತ್ತಾಪ ಪಟ್ಟರೆ ನಮ್ಮನ್ನು ಕ್ಷಮಿಸಿ ಪ್ರೇಮಾಲಿಂಗನವಿತ್ತು ಎತ್ತಿಕೊಳ್ಳುವನು. ಅವನ ಪ್ರೇಮ ಅಸೀಮ. ಅವನು ಅನಂತ ಸುಖಸಾಗರ. ಅವನು ಅಮೃತ ಸಾಗರ, ಆ ಸಾಗರಕ್ಕೆ ಧುಮುಕು. ನೀನೂ ಅಮೃತವನ್ನು ಪಡೆಯುವೆ. ಆನಂದದಿಂದ ಓತಪ್ರೋತನಾಗುವೆ. ಸಕ್ಕರೆಯ ಪಾಕದಲ್ಲಿರುವ ರಸಗುಳ್ಳೆಯಂತೆ ಅದರಲ್ಲಿ ಈಜಾಡುವೆ. ಭಕ್ತ, ಭಗವಂತನ ರಸಾಸ್ವಾದನೆಯನ್ನು ತೊರೆದು ಮುಕ್ತಿ ಅಥವಾ ನಿರ್ವಾಣವನ್ನು ಕೂಡ ಇಚ್ಛಿಸದೆ ಇರುವುದು ಸುಮ್ಮನೆ ಏನು ?

೨೨೭. ದೈವೋನ್ಮತ್ತರಲ್ಲಿ ಕುಡುಕರಂತೆ ಎರಡು ಬಗೆ. ಕುಡಿದು ನಿಶೆಯಿಂದ, "ತಾಯಿ, ತಾಯಿ" ಎಂದು ಶ್ಯಾಮಸಂಗೀತ ಹಾಡಿ ಪ್ರೇಮಾಶ್ರುವನ್ನು ಸುರಿಸುವರು ಕೆಲವರು. ಮತ್ತೆ ಕೆಲವರು ಪ್ರಜ್ಞೆ ತಪ್ಪುವವರೆಗೆ ಕುಡಿದು ಅಚೇತನರಾಗಿ ಬಿದ್ದಿರುವರು. ಆ ಸ್ಥಿತಿಗೆ ಏರುವವರೆಗೆ ತೃಪ್ತಿಯೇ ಇರುವುದಿಲ್ಲ. ಇದರಲ್ಲಿ ಮೊದಲು ಹೇಳಿದವರು ಭಕ್ತವರ್ಗಕ್ಕೆ ಸೇರಿದವರು. ಎರಡನೆ ವರ್ಗದವರು ಜ್ಞಾನಿಗಳು. ಈ ಎರಡು ವರ್ಗದವರು ತಮ್ಮ ತಮ್ಮ ಮನೋಭಾವಕ್ಕೆ ತಕ್ಕಂತೆ ಆಧ್ಯಾತ್ಮಿಕ ಭಾವದಲ್ಲಿ ಮುಳುಗುವರು. ಭಕ್ತ, ನಾನು ಭಗವಂತನಿಗೆ ಸೇರಿದವನು ಎಂದು ಭಾವಿಸುವನು. ಜ್ಞಾನಿ, ತನ್ನ ಆತ್ಮವನ್ನು ಭಗವಂತನಲ್ಲಿ ಐಕ್ಯಗೊಳಿಸಿ "ನಾನೇ ಅವನು—ಆ ಅಖಂಡ ಸತ - ಚಿತ್ - ಆನಂದ - ಪರಬ್ರಹ್ಮಸ್ವರೂಪ" ಎಂದು ಯೋಚಿಸುತ್ತಾನೆ. ಇದರಲ್ಲಿ ಯಾರ ಆನಂದ ಅಧಿಕವೆಂದು ಹೇಳಬಲ್ಲೆಯಾ? ಜ್ಞಾನ ಮತ್ತು ಭಕ್ತಿಯ ಪರಮ ಗುರಿ ಒಂದೆ. ಅದೇ ಆತ್ಮದಲ್ಲಿ

ಲೀನವಾಗುವ ಭಾವನೆ. ಅಲ್ಲಿ ಎರಡೂ ಒಂದಾಗುವುದು. ಒಂದನ್ನು ಮತ್ತೊಂದರಿಂದ ಬೇರ್ಪಡಿಸಲಾಗುವುದಿಲ್ಲ.

೨೨೮. ನಿರಾಕಾರಬ್ರಹ್ಮ ಭೌತಿಕ ಆಕಾಶದಂತೆ ವಿರಾಟವಲ್ಲ. ಅದು ಅಖಂಡ ಚೈತನ್ಯಸ್ವರೂಪ. ಅದು ಸರ್ವವ್ಯಾಪಿ ಓತಪ್ರೋತ ವಾಗಿದೆ. ಬ್ರಹ್ಮನ ಸತ್ಯಸ್ವರೂಪದಿಂದ ಅದರ ಅಸ್ತಿತ್ವದಿಂದ ಸಮಸ್ತ ವಸ್ತು ಗಳಿರುವುದು. ಅವನ ಚಿತ್ ಪ್ರಭೆಯಿಂದ, ಅವನ ಜ್ಞಾನ ಪ್ರಭೆಯಿಂದ ಜಗತ್ತಿನಲ್ಲಿ ಜ್ಞಾನವಿರುವುದು. ಅವನ ಆನಂದದಿಂದ ಜಗತ್ತಿನಲ್ಲಿ ಯತ್ಕಿಂಚಿತ್ ಆನಂದ ಪ್ರವಹಿಸುವುದು. ಬ್ರಹ್ಮ ಈ ದೃಷ್ಟಿಯಿಂದ ವಿರಾಟ ಸ್ವರೂಪನು. ಧ್ಯಾನಾನುಕೂಲಕ್ಕೆ ಮಾತ್ರ ಅವನು ಆಕಾಶದಂತೆ ಎಂಬ ಉಪಮೆ ಕೊಟ್ಟಿರುವರು.

೨೨೯. ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮ ಣಾಹುತಂ । ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ಗೀತಾ ॥ ೪—೨೪.

ಅಗ್ನಿಯೊಳಕ್ಕೆ ಹವಿಸ್ಸನ್ನು ಅರ್ಪಿಸುವುದು ಬ್ರಹ್ಮ, ಹವಿಸ್ಸಿನ ಬೆಣ್ಣೆ ಬ್ರಹ್ಮ, ಬ್ರಹ್ಮನೇ ಹವಿಸ್ಸನ್ನು ಬ್ರಹ್ಮಾಗ್ನಿಗೆ ಅರ್ಪಿಸುವನು. ಯಾರು ಕರ್ಮಮಾಡುವಾಗ ಬ್ರಹ್ಮನನ್ನು ಅದರಲ್ಲಿ ನೋಡುವರೋ ಅವರು ಬ್ರಹ್ಮತ್ವ ಪಡೆಯುವರು (ಗೀತಾ IV ಅಧ್ಯಾಯ ೨೪). ಈ ಶ್ಲೋಕದ ಅರ್ಥವೇನೆಂದರೆ, ನಾವು ಮಾಡುವುದನ್ನೆಲ್ಲಾ ಬ್ರಹ್ಮಬುದ್ಧಿಯಿಂದ ಬ್ರಹ್ಮನೇ ನಾನು ಎಂದು ತಿಳಿದು ಮಾಡಬೇಕು. ಆಗ ಸಮಸ್ತ ಜೀವನ ಒಂದು ಅಖಂಡ ಯಜ್ಞವಾಗುವುದು. ಕರ್ತ, ಕರ್ಮ, ಕರಣ, ಅಭೀಷ್ಟ ಎಲ್ಲವೂ ಬ್ರಹ್ಮಮಯವೆಂದು ತಿಳಿ. ಇಡೀ ಜೀವನವೇ ಒಂದು ಯಜ್ಞ ವಾಗುವುದು. ಕರ್ಮವನ್ನು ಯಜ್ಞದಂತೆ, ಭಗವಂತನ ಪೂಜೆಯಂತೆ ನೋಡು. ಊಟಮಾಡುವಾಗ ಅವನೇ ಆಹಾರ, ಊಟಮಾಡುವ ಕ್ರಿಯೆಯೂ ಅವನೇ, ಆತನೇ ಊಟಮಾಡುತ್ತಿರುವ ಸಾಧನ, ಅಂದರೆ ಊಟಮಾಡಲು ಉಪಯೋಗಿಸುವ ಅಂಗಗಳು. ಆತನೇ ಊಟಮಾಡು ತ್ತಿರುತ್ತಾನೆ, ಆದರಿಂದ ಆನಂದಪಡುತ್ತಿರುವನು ಎಂದು ಭಾವಿಸು. ಊಟಮಾಡುತ್ತಿರುವಾಗ ಬ್ರಹ್ಮನೇ ಆದ ಜಠರಾಗ್ನಿಗೆ ನೀನು ಆಹಾರ ವನ್ನು ಹವಿಸ್ಸಿನಂತೆ ಸುರಿಯುತ್ತಿರುವೆ ಎಂದು ಊಟಮಾಡು. ಊಟ ವೊಂದೇ ಏಕೆ? ಈ ಬ್ರಹ್ಮ ಅಥವಾ ದೇವರ ಭಾವನೆಯನ್ನು ಪ್ರಪಂಚದ

ಎಲ್ಲಾ ವಸ್ತು, ಕೆಲಸ, ಯೋಚನೆಗೂ ಉಪಯೋಗಿಸು. ಹೀಗೆ ಮಾಡಿದಲ್ಲಿ ಕೆಲಸಮಾಡುವವನ ಕರ್ಮವೆಲ್ಲಾ ಕ್ಷಯವಾಗುವುದು. ಏಕೆಂದರೆ ಬ್ರಹ್ಮ ಪ್ರಾಪ್ತಿಯೇ ಅವನ ಕರ್ಮದ ಫಲ. ನಮ್ಮ ಎಲ್ಲಾ ಕರ್ಮಧ್ಯೇಯ ದಲ್ಲಿಯೂ ದೇವರನ್ನು ಪ್ರತಿಷ್ಠಿಸಬಹುದು. ಯಾವಾಗಲೂ ಎಲ್ಲಾ ವಸ್ತು ಗಳಲ್ಲೂ ಆತನ ದಯಾಹಸ್ತ, ಕರುಣಾಪೂರಿತ ದೃಷ್ಟಿಯನ್ನು ನೋಡ ಬಹುದು. ನಮ್ಮ ಕರ್ಮದ ಫಲವೆಲ್ಲವನ್ನೂ, ಒಳ್ಳೆಯದಾಗಲಿ ಕೆಟ್ಟು ದಾಗಲಿ, ದೇಹಾಭಿಮಾನವನ್ನು ತೊರೆದು ಆತನಿಗೆ ಅರ್ಪಿಸಬಹುದು. ಇದೇ ಗೀತೆಯಲ್ಲಿ ಶ್ರೀ ಕೃಷ್ಣನ ಸಂದೇಶ. ಬೇಲೂರು ಮಠದ ಎಲ್ಲಾ ಶಾಖೆಗಳಲ್ಲೂ ಊಟಕ್ಕೆ ಮುಂಚೆ ಎಲ್ಲರೂ ಇದನ್ನು ಪಠಿಸುತ್ತಾರೆ.

೨೩೦. ಈ ಭಾವನೆಯನ್ನೊಳಗೊಂಡ ಸೊಗಸಾದೊಂದು ಹಾಡನ್ನು ರಾಮಪ್ರಸಾದನು ಹಾಡಿದ್ದಾನೆ

"ಎಲೆ ಮನಸ್ಸೇ ಈ ಗುರುದತ್ತ ಶಕ್ತಿಪೂರಿತ ಮಹಾಮಂತ್ರವನ್ನು ಹಗಲು ರಾತ್ರಿ ಉಚ್ಚರಿಸುತ್ತಾ ಕಾಳಿಮಾತೆಯನ್ನು ನಿನಗೆ ತೋರಿದ ರೀತಿ ಯಲ್ಲಿ ಅರ್ಚಿಸು. ಮಲಗಿದಾಗ ಜಗನ್ಮಾತೆಗೆ ನಮಿಸುತ್ತಿರುವೆನೆಂದು ಭಾವಿಸು. ಊರಿನಲ್ಲಿ ಸಂಚರಿಸುತ್ತಿರುವಾಗ ಜಗನ್ಮಾತೆಗೆ ಪ್ರದಕ್ಷಿಣೆ ಮಾಡುತ್ತಿರುವೆನೆಂದು ಭಾವಿಸು. ನಿನ್ನ ಕಿವಿಗೆ ಬೀಳುವುದೆಲ್ಲ ನಿಜ ವಾಗಿಯೂ ಜಗನ್ಮಾತೆಯ ಮಂತ್ರ. ಕಾಳಿಮಾತೆ ಐವತ್ತೆರಡು ಅಕ್ಷರ ಗಳಿಂದಾಗಿರುವಳು. ಪ್ರತಿಯೊಂದು ಅಕ್ಷರವೂ ಅವಳ ಹೆಸರೇ. ಪ್ರಪಂಚದಲ್ಲಿರುವ ಎಲ್ಲಾ ಬಗೆಯ ಆಹಾರವನ್ನೂ, ಅದು ಅಗಿಯುವು ದಾಗಲಿ, ಹೀರುವುದಾಗಲಿ, ನೆಕ್ಕುವುದಾಗಲಿ, ಕುಡಿಯುವುದಾಗಲಿ ಎಲ್ಲ ವನ್ನು ಸ್ವೀಕರಿಸು. ಜಗನ್ಮಾತೆಗೆ ಇದನ್ನು ಅರ್ಪಿಸುವೆನೆಂದು ಭಾವಿಸು."

೨೩೧. ಈ ಶರೀರ ನಶ್ವರ. ಸತ್ತಮೇಲೆ ಕ್ರಿಮಿಯಾಗಿ ಬೂದಿ ಯಾಗುವುದು. ಇದು ಅಪವಿತ್ರ, ಅಸಹ್ಯ ಮತ್ತು ಹೊಲಸಾದ ವಸ್ತುವಿ ನಿಂದ ಕೂಡಿದೆ. ಮಲಮೂತ್ರ, ಶ್ಲೇಷ್ಮ, ರಕ್ತ, ಕೊಬ್ಬು, ಮಜ್ಜೆ, ಮಾಂಸ ಮುಂತಾದವುಗಳಿಂದ ಆಗಿದೆ. ಆದರೂ ಈ ಮೂರ್ಖ ಜೀವಿ ಈ ಮಾಂಸ ಮೂಳೆಯ ಪಂಜರದಲ್ಲಿ ಬಂಧಿತನಾಗಿ ಭ್ರಾಂತನಾಗಿರುವನು; ಶರೀರ ವ್ಯಾಮೋಹದಿಂದ, ಆತ್ಮಾಭಿಮಾನದಿಂದ ಕೂಡಿ ಪ್ರತಿಯೊಂದು ಗಳಿಗೆಯಲ್ಲೂ ದಾರುಣ ವ್ಯಥೆಗೀಡಾಗುವನು. ಆದರೂ ಅವನಿಗೆ ಬುದ್ಧಿ ಬರುವುದಿಲ್ಲ. ವಿಶ್ವಭ್ರಮಣಕಾರಿಯಾದ ಮಹಾ ಮಾಯೆ ಬೀಸಿರುವ

ಮಹಾ ಜಾಲ! ಎಲ್ಲರಿಗೂ ಎಂತಹ ಭ್ರಾಂತಿಯನ್ನೊಡ್ಡಿರುವಳು. ಯಾರು ಮೋಕ್ಷಗಳಿಸಲು ಹೊರಟಿರುವರೋ, ಅವರು ಈ ದೇಹೇಂದ್ರಿಯ ಸುಖವೆಲ್ಲಾ ಅಶಾಶ್ವತ ಅಸತ್ಯವೆಂದು ನಾಶಕಾರಿಯಾದ ಮಾಯಾ ಬಲೆಯನ್ನು ಕಿತ್ತೆಸೆದು, ಅವಿನಾಶಿಯಾದ ಭಗವಂತನಲ್ಲಿ ಶರಣಾಗಬೇಕು.

೨೩೨. ವಂಗಸಾಧಕ ಕವಿ ಹೀಗೆ ಬರೆಯುತ್ತಾನೆ:

ಮಹಾ ಮಾಯೆಯ ಇಂದ್ರಜಾಲವಿದು; ಎಲ್ಲವನ್ನು ಎಂತಹ ಭ್ರಾಂತಿಗೀಡುಮಾಡಿರುವಳು.

ಸುರಾಸುರರು, ಬ್ರಹ್ಮ ವಿಷ್ಣು ಮಹೇಶ್ವರರು, ಆಕೆಯ ಭ್ರಾಂತಿಗೊಳಗಾಗಿ, ಆಕೆಯ ಮಾಯಾಪಾಶಕ್ಕೆ ಸಿಕ್ಕಿ, ಆಕೆಯನ್ನು ತಿಳಿದುಕೊಳ್ಳಲಾರದೆ ನರಳುತ್ತಿರುವರು. ಇನ್ನು ಸಾಧಾರಣ ಮನುಷ್ಯರ ಪಾಡೇನು? ಕೆಸರಿನಲ್ಲಿ ಕೆರೆಯಿಂದ ನೀರು ಹೋಗುವ ಕಡೆಯೇ ಬಲೆಯನ್ನು ಬೀಸಿರುವರು. ಸಣ್ಣ ಮೀನುಗಳು ಪ್ರವೇಶಿಸುವುವು. ಹೊರಗೆ ಬರುವುದಕ್ಕೆ ದಾರಿ ಯಾವಾಗಲೂ ತೆರೆದಿರುವುದು. ಆದರೂ ಅವು ಬರಲಾರವು. ರೇಶ್ಮೆಯ ಹುಳು ತನ್ನ ಗೂಡನ್ನು ತಾನೆ ಹೆಣೆಯುವುದು. ಇಚ್ಛೆಪಟ್ಟರೆ ತಾನು ಇದರಿಂದ ಬಿಡುಗಡೆಯಾಗಬಹುದು. ಆದರೆ ಮಹಾ ಮಾಯೆಯ ಭ್ರಾಂತಿಗೊಳಗಾಗಿ ತನ್ನ ಗೂಡಿನಲ್ಲೇ ತಾನು ಸಾಯುವುದು. ತಾನೇ ಸೃಷ್ಟಿಸಿದ ಸೆರೆಮನೆಯಲ್ಲಿ ನಾಶವಾಗುವುದು.

೨೩೩. ಉಪಾಸನೆ ಎಂದರೆ ಈಶ್ವರನ ಸಮೀಪದಲ್ಲಿರುವುದು; ಅವನ ಅತ್ಯಂತ ನಿಕಟ ಸಾನ್ನಿಧ್ಯವನ್ನು ಪಡೆಯುವುದು. ವ್ಯರ್ಥ ಯೋಚನೆ ಮತ್ತು ಕ್ರಿಯೆ ನಮಗೆ ಸಹಾಯಮಾಡುವ ಬದಲು ಹಾನಿಕರ. ಅವುಗಳಲ್ಲಿ ತೊಡಗಿ ಆತ್ಮಹಾನಿಯನ್ನುಂಟುಮಾಡಿಕೊಳ್ಳುವೆವು. ಅವು ನಮ್ಮನ್ನು ದೇವರಿಂದ ವಿಮುಖರನ್ನಾಗಿ ಮಾಡಿ ಪ್ರಾಪಂಚಿಕ ಕಸದಗುಂಡಿಗೆ ಒಯ್ಯುತ್ತವೆ. ಎಲ್ಲಿ ಬಿಡುವುವೋ ಯಾರಿಗೂ ಗೊತ್ತಿಲ್ಲ. ನಾವು ವ್ಯರ್ಥ ಆಲೋಚನೆ, ಕ್ರಿಯೆ ಅಶಾಶ್ವತ ಪ್ರಾಪಂಚಿಕ ವಸ್ತುಗಳಿಂದ ದೂರವಾದಷ್ಟೂ, ದೇವರ ಸ್ಮರಣೆ, ಧ್ಯಾನ, ಪೂಜೆ, ಭಜನೆ, ಪರೋಪಕಾರ, ಜನತಾಸೇವೆ ಮುಂತಾದ ಕೆಲಸದಲ್ಲಿ ತೊಡಗಿದಷ್ಟೂ ನಾವು ದೇವರ ಸಮೀಪಕ್ಕೆ ಹೋಗುವೆವು. ಆತನಂತೆ ರೂಪಿನಲ್ಲಿ ಬದಲಾವಣೆ ಹೊಂದುವೆವು, ಹೃದಯ ಆನಂದಾಬ್ಧಿಯಲ್ಲಿ ಮುಳುಗುವುದು. ಇದನ್ನು ಬಿಟ್ಟರೆ, ಪ್ರಪಂಚವನ್ನು ಜಯಿಸಲು, ಮಾನಸಿಕ ಅಶಾಂತಿಯಿಂದ ಪಾರಾಗಲು, ಬೇರಾವ ಹಾದಿಯೂ ಇಲ್ಲ.

೨೩೪. ಬಾರಾನಗರದ ಮಠದಲ್ಲಿ ನಾನು ಸ್ವಾಮಿ ಪ್ರೇಮಾನಂದ ರಿಂದ ಶ್ರೀ ರಾಮಕೃಷ್ಣರು ಹೇಳುತ್ತಿದ್ದ ಒಂದು ಉಪಮಾನವನ್ನು ಕೇಳಿದೆ. ಆ ಉಪಮಾನ ಮತ್ತೆಲ್ಲಿಯೂ ಪ್ರಕಟವಾಗಿರುವುದು ಕಾಣಲಿಲ್ಲ. ಮೊದ ಲನೆಯದು, ಭಗವಂತನಿಂದ ಪ್ರತ್ಯಕ್ಷ ಅಧಿಕಾರವನ್ನು ಪಡೆದುಬಂದ ಆಚಾರ್ಯರು, ಗುರುಗಳು, ಪರಿಶುದ್ಧರು ; ಚದುರಂಗದಾಟದಲ್ಲಿ ನುರಿತ ಆಟ ಗಾರರಂತೆ ಅವರು ನಡೆಸುವಾಗ ಬೇಗ ಗುರಿಯನ್ನು ಸೇರುತ್ತಾರೆ. ಅವರು ಬೇಕೆಂದು ಗುರಿಯಿಂದ ಕೆಳಕ್ಕೆ ಬಂದು ಆಡುವರು. ತಮ್ಮ ಪ್ರಾವೀಣ್ಯತೆ ಯಿಂದ ತಮ್ಮಿಚ್ಛೆಬಂದಾಗ ಎರಡು, ನಾಲ್ಕು, ಆರು, ಎಂಟು, ಹತ್ತು ಯಾವ ಗರವನ್ನಾದರೂ ಎಸೆಯಬಹುದೆಂದು ಗೊತ್ತಿದೆ. ಆದರೂ ಅವರು ಇತರ ಹಣ್ಣಾಗದ ಕಾಯಿಗಳೊಡನೆ ನೇರಿ ಗುರಿ ಎಡೆಗೊಯ್ಯುವುವು. ಆದ್ದರಿಂದ ಜೊತೆಗಾರನೊಡನೆ ಸೇರಲು ಪ್ರಯತ್ನಿಸು. ವಗಡೆಯಾಟದಲ್ಲಿ ಯಾರೂ ಜೋಡಿಯನ್ನು ಕೊಲ್ಲಲಾಗುವುದಿಲ್ಲ. ಅದರಂತೆ ನಾವು ಗುರು ಒಬ್ಬನನ್ನು ಪಡೆದರೆ ಮತ್ತಾವ ಭಯವೂ ಇಲ್ಲ.

೨೩೫. ಎರಡನೆ ದೃಷ್ಟಾಂತ ಹೀಗಿದೆ: ಒಬ್ಬ ಮುದಿ ಮಾಟಗಾತಿ ಕೊಟ್ಟೆ ಬಟ್ಟೆ ಕಟ್ಟೆ ತನ್ನ ಕೈಗೆ ಒಂದು ಜೊತೆ ಕಡಗವನ್ನು ಮಾಡಿಸಿ ಕೊಂಡಳು. ಆದರೆ ಯಾರೂ ಅದನ್ನು ಹತ್ತಿರ ಬಂದು ನೋಡಿಹೋಗಲಿಲ್ಲ. ನಿರಾಶೆಗೊಂಡ ಮುದುಕಿ ತನ್ನ ಗುಡಿಸಿಲಿಗೆ ಬೆಂಕಿ ಹಚ್ಚಿದಳು. ಇದರಿಂದ ದೊಡ್ಡ ಗುಂಪೊಂದು ಇವಳನ್ನು ಮುತ್ತಿತು. ಮುದುಕಿ ಜೋರಾಗಿ ಅಳುತ್ತ ಕಣ್ಣೀರು ಸುರಿಸಿಕೊಂಡು ತನ್ನ ಕೈ ನೀಡಿ "ಅಯ್ಯೋ ನೋಡಿ ನನ್ನ ಗುಡಿಸಿಲಿಗೆ ಬೆಂಕಿ ಬಿದ್ದಿದೆ. ನನ್ನ ದುರ್ದೈವವೇ! ಎಲ್ಲಾ ವಸ್ತುಗಳು ಸುಟ್ಟು ಭಸ್ಮವಾಯಿತು. ಇದೊಂದು ಕಡಗ ಮಾತ್ರ ಉಳಿದಿದೆ" ಎಂದು ತೋರಿಸಿಕೊಂಡು ಗೋಳಾಡಿದಳು ; ಅಂತೆಯೇ, ಕೀಳುಮನಸ್ಸಿನ ಮನ ಷ್ಯರು ತಾವು ಹೊಂದಿರುವ ಅತ್ಯಲ್ಪವನ್ನು, ತಮ್ಮ ಅಲ್ಪಬುದ್ಧಿವಂತಿಕೆ ಮತ್ತು ಶಕ್ತಿಯನ್ನು ಇದರಿಂದ ಅವರಿಗೆ ನಷ್ಟವಾದರೂ ಸರಿಯೆ ತೋರಿಸಿ ಕೊಳ್ಳಲು ಆತುರ ಪಡುವರು.

೨೩೬. ಮಾನವನ ಇಡೀ ಜೀವನ ಒಂದು ಮೋಹದ ಕಂತೆ. ಕಾಮವೇ ಮುಂತಾದ ಅರಿಷಡ್ವರ್ಗಗಳಿಂದ ಕೂಡಿರುವುದು. ಸರ್ವದಾ ಯಾವ ಮನುಷ್ಯನು ತಮ್ಮ ಬಲೆಗೆ ಬೀಳುತ್ತಾನೆ ಎಂದು ಕಾದಿದ್ದು ಅವನ ಮೇಲೆ ಹೇರಿಕೊಳ್ಳುತ್ತವೆ. ಆದ್ದರಿಂದ ನಾವು ಯಾವಾಗಲೂ ಜಾಗ

ರೂಕರಾಗಿದ್ದು ನಿತ್ಯಾನಿತ್ಯವಿವೇಕ ಜ್ಞಾನವನ್ನರಿತು ದೇವರನ್ನು ಪ್ರಾರ್ಥಿಸುತ್ತಿರಬೇಕು. ಕಳ್ಳನು ಕೊಟಡಿಯಲ್ಲಿ ದೀಪ ಉರಿಯುತ್ತಿದ್ದಾಗ ಆ ಮನೆಗೆ ಪ್ರವೇಶಿಸದೆ, ಬೇರೆಡೆಗೆ ಹೋಗುತ್ತಾನೆ. ಯಾವ ಘಳಿಗೆ ಯಲ್ಲಿ, ನೀನು ಉದಾಸೀನನಾಗಿ ಅಜಾಗರೂಕನಾಗಿರುವೆಯೋ, ದುರ್ಬಲ ನಾಗಿರುವೆಯೋ, ನಿನ್ನ ಶತ್ರುಗಳು ಆ ಬಾಗಿಲಿನಿಂದ ಒಳನುಗ್ಗಿ ಪ್ರಬಲ ವಾಗಿ ಎಲ್ಲಾ ಬಗೆಯ ತಂತ್ರದಿಂದಲೂ ನಿನ್ನನ್ನು ಕೆಳಗೆಳೆಯಲು ಯತ್ನಿಸು ವರು. ಅವರಿಗೆ ಮರಳಿ ಮರಳಿ ಸೋಲುಂಟಾದರೂ ಅವರು ಸೋಲುವು ದಿಲ್ಲ, ಹಿಂತಿರುಗುವುದಿಲ್ಲ. ಆದರೆ ಇದಕ್ಕಾಗಿ ಖಂಡಿತ ಎದೆಗೆಡಬೇಡ. ಪುನಃ ಪುನಃ ಅಧಃಪತನವಾದರೂ ಚಿಂತೆಯಿಲ್ಲ. ಪ್ರತಿಬಾರಿಯೂ ಹೆಚ್ಚು ಸ್ಫೂರ್ತಿಯಿಂದ ಶಕ್ತಿಯನ್ನೆಲ್ಲಾ ಉಪಯೋಗಿಸಿ ಹೋರಾಡಬೇಕು. ಅಪಜಯವೂ ಒಳ್ಳೆಯದಕ್ಕೆಂದೇ ಭಾವಿಸುವೆ. ಪ್ರತಿಬಾರಿಯೂ ಇದು ನಿನ್ನನ್ನು ಹೆಚ್ಚು ಮುಂದುವರಿಯುವಂತೆ ಮಾಡಬಲ್ಲದು. ಯಾರು ನಿಜ ವಾಗಿಯೂ ಮುಂದುವರಿಯಲಿಚ್ಛಿಸುವರೋ ಅವರಿಗೆ ದೇವರೇ ಸಹಾಯ ಮಾಡುವನು. ಬಗೆ ಬಗೆಯ ಕಷ್ಟ ಅಡ್ಡಿ ಆತಂಕಗಳೊದಗಿದರೂ ಅದನ್ನು ಹೋಗಲಾಡಿಸಿ ದಾರಿಯನ್ನು ಸುಗಮವನ್ನಾಗಿ ಮಾಡುವನು. ಯಾವಾಗ ಅವಿಶ್ರಾಂತ ಶ್ರಮದಿಂದ ವಿಪರೀತ ದಣಿವುಂಟಾಗಿ, ವ್ಯಾಕುಲ ಹೃದಯ ದಿಂದ ದೇವರಲ್ಲಿ ಮೊರೆ ಹೋಗುವನೋ ಆಗ ದೇವರು ಅವನನ್ನು ತೊಡೆಯ ಮೇಲೆತ್ತಿಕೊಳ್ಳುವನು. ಅವನ ಹೆಸರೇ, "ಶರಣಾಗತ ವತ್ಸಲ".

೨೩೭. ಭಕ್ತ ದೇವರನ್ನು ಸೇವಿಸುವನೋ? ದೇವರೇ ಭಕ್ತನನ್ನು ಸೇವಿಸುವನೋ? ಭಕ್ತನು ದೇವರಿಗೆ ತಾನು ಮಾಡುವುದು ತೀರ ಅಲ್ಪ, ಇಲ್ಲವೆಂದೇ ಹೇಳಬಹುದು. ದೇವರೇ ತನ್ನನ್ನು ನಿಜವಾಗಿ ಸೇವಿಸುತ್ತಿರು ವನು ಎನ್ನಿಸುತ್ತದೆ. ಭಕ್ತನ ಸೇವೆ ಎಂದರೆ, ಗಂಗಾನದಿಯ ನೀರಿನಿಂದ ಗಂಗಾಮಾತೆಯನ್ನು ಪೂಜಿಸಿದಂತೆ. ಅಂದರೆ ಆತನ ವಸ್ತುಗಳನ್ನೇ ಆತನಿಗರ್ಪಿಸುವುದು. ಸ್ವಾರ್ಥ ಚಿಂತನೆ ಸ್ವಲ್ಪವೂ ಇರುವುದಿಲ್ಲ. ನಾವು ಯಾರನ್ನು ಭಕ್ತನೆಂದು ಕರೆಯುತ್ತೇವೆ? ಯಾರಿಗೆ ದೇವರಲ್ಲಿ ಪವಿತ್ರವಾದ ನಿರಪೇಕ್ಷೆಯಿಂದ ಕೂಡಿದ ಅಖಂಡ ಪ್ರೇಮವಿದೆಯೋ, ಯಾರು ಭಗವತ್ ಪ್ರೇಮದಲ್ಲಿ ಹುಚ್ಚರಾಗಿರುವರೋ ಅವರನ್ನು. ಅವರ ಹೊಣೆಯನ್ನು ದೇವರೇ ಹೊತ್ತುಕೊಳ್ಳುತ್ತಾನೆ. ಭಕ್ತನ ದೇಹಾತ್ಮವೆಲ್ಲವೂ ಯಾವಾಗಲೂ ದೇವರಲ್ಲೇ ನೆಲಸಿರುವುದರಿಂದ ಆತನಿಗೆ ಜೀವನಾಧಾರವನ್ನು ಅವನೇ

ಒದಗಿಸುತ್ತಾನೆ. ಗೀತೆಯಲ್ಲಿ, "ಇಂತಹವರಿಗೆ ಏನು ಇಲ್ಲವೊ ಅದನ್ನು ಕೊಡುವೆ, ಇರುವುದನ್ನು ರಕ್ಷಿಸುವೆನು" ಎಂದು ಹೇಳಿದೆ. ಅಂತಹ ಭಕ್ತರು ಅತಿ ವಿರಳ. ಪುರಾಣ ಇತಿಹಾಸಗಳಲ್ಲಿ ಇವರ ಕಥೆ ಬರುತ್ತವೆ. ಪ್ರಹ್ಲಾದ, ಶುಕದೇವ, ವಿದುರ, ಶ್ರೀ ರಾಧ, ಬೃಂದಾವನದ ಗೋಪ ಗೋಪಿಯರು, ಉದ್ಧವ, ಹನುಮಂತ ಮುಂತಾದ ಪೌರಾಣಿಕ ವ್ಯಕ್ತಿಗಳು ಚೈತನ್ಯ ದೇವ, ಮೀರಾಬಾಯಿ, ರಾಮಾನುಜ, ತುಕಾರಾಂ, ರಾಮಪ್ರಸಾದ, ರಾಮಕೃಷ್ಣ, ವಿವೇಕಾನಂದ, ಪವ್ಹಾರಿಬಾಬ, ನಾಗಮಹಾಶಯ ಮುಂತಾದವರು ಚಾರಿತ್ರಿಕ ವ್ಯಕ್ತಿಗಳು. ಇವರಲ್ಲಿ ಶ್ರೀ ರಾಧ, ಶ್ರೀ ಚೈತನ್ಯ ದೇವ ಇವರನ್ನು ಅವತಾರ ಪುರುಷರೆಂದು ಪೂಜಿಸುವರು.

೨೩೮. ಭಕ್ತನ ಪವಿತ್ರತಮ ಭಕ್ತಿ ಪ್ರೇಮಕ್ಕೆ ಮಾತ್ರ ಭಗವಂತನು ಒಳಗಾಗುವನು. ಆ ಪ್ರೇಮಕ್ಕೋಸುಗ ತನ್ನನ್ನೇ ಭಕ್ತನಿಗೆ ಮಾರಿಕೊಳ್ಳುವನು. ಭಕ್ತನ ಅಂತಃಕರಣ ಪೂರ್ವಕವಾದ ಪ್ರೇಮದ ಮುಂದೆ ಸೋಲನ್ನೊಪ್ಪಿಕೊಳ್ಳುವನು. ಭಕ್ತನ ಹೃದಯದಲ್ಲೇ ಪ್ರೇಮಪಾಶದಿಂದ ಬಂಧಿತನಾಗಿ ವಾಸಿಸುವನು. ನಿಜವಾಗಿ ಆತನು ಭಕ್ತನಿಗೆ ಅನುಗ್ರಹಿಸದ ವಸ್ತುವಾವುದೂ ಇಲ್ಲ.

೨೩೯. ಭಕ್ತನು ಹೇಗೆ ದೇವರನ್ನು ಬಿಟ್ಟು ಜೀವಿಸಲಾರನೋ ಹಾಗೆಯೇ ದೇವರೂ ಭಕ್ತನನ್ನು ಬಿಟ್ಟು ಜೀವಿಸಲಾರ – ಪ್ರೀತಿಸುತ್ತಿರುವ ತರುಣ ತರುಣಿಯರಂತೆ. ಆದರೆ ಆ ತರುಣ ತರುಣಿಯರ ಪ್ರೇಮ, ಸೌಂದರ್ಯ, ವಿದ್ಯೆ ಮುಂತಾದ ಆಕರ್ಷಣೆಗಳಿಂದ ಉದ್ಭವಿಸಿದೆ. ಕಾಮ ಮೋಹದಿಂದ ಕೂಡಿರುವುದು. ಕಾಮ ಕಲೆಯಿಂದಾಚ್ಛಾದಿತವಾಗಿದೆ. ಸ್ವಾರ್ಥ ಸುಖ ಎಂಬ, "ಮೀನಿನ" ವಾಸನೆಯಿಂದ ಹೊಗೆಯಾಡುವುದು. ಇದರಲ್ಲಿ ಸ್ವಲ್ಪ ವ್ಯತ್ಯಾಸವಾದರೂ, ಗುಣವಿರುದ್ಧವಾದರೂ, ಅದು ನಶಿಸಿ ಹೋಗುವುದು. ಹೃದಯದಲ್ಲೊಂದು ಕಹಿ ನೆನಪನ್ನು ಬಿಟ್ಟು ಹೋಗುವುದು. ಭಗವಂತನ ಪ್ರೇಮಾಮೃತವನ್ನು ಪಾನ ಮಾಡಿದಷ್ಟು ನಮ್ಮ ತೃಷೆ ವೃದ್ಧಿಯಾಗುವುದು. ಇದಕ್ಕೆ ತೃಪ್ತಿಯೆಂಬುದೇ ಇಲ್ಲ. ಇಲ್ಲಿ ಪ್ರೇಮ ಪ್ರೇಮಕ್ಕೆ ಪಾತ್ರನಾದ ದೇವರು – ಪ್ರೇಯಸಿ ಪ್ರಿಯ ಇಬ್ಬರೂ ಭೇದವಿಲ್ಲದೆ ಐಕ್ಯವಾಗುವರು. ಆಗ ಉಳಿಯುವುದು ಅಖಂಡ ಆನಂದ ಮಾತ್ರ.

೨೪೦. ಮಾತೆ ನಿನ್ನನ್ನು ಯಾವ ಬಗೆಯ ಜೀವನ ಅಥವಾ ವಾತಾ

ವರಣದಲ್ಲಿಟ್ಟಿದ್ದರೂ, ಅದು ನಿನಗೆ ಗೊತ್ತಾಗಲಿ, ಗೊತ್ತಾಗದಿರಲಿ, ಅದು ನಿನ್ನ ಒಳ್ಳೆಯದಕ್ಕೇ ಎಂದು ತಿಳಿ. ಸುಖ ದುಃಖ ಎರಡೂ ಆಕೆಯ ಕರ ಕಮಲಗಳ ಅಮೃತಸ್ಪರ್ಶದಿಂದ ಉಂಟಾದವು. ಆಕೆಯ ಲೀಲೆಯನ್ನರಿಯ ಬಲ್ಲವರಾರು? ಆಕೆ ನಿನ್ನನ್ನು ಸುಖದಲ್ಲಿಡಲಿ, ಕಷ್ಟದಲ್ಲಿಡಲಿ, ಕ್ಷೇಮದಲ್ಲಿ ಡಲಿ, ವಿಪತ್ತಿನಲ್ಲಿಡಲಿ, ಎಲ್ಲವನ್ನೂ ಆಕೆಯ ಆಶೀರ್ವಾದವೆಂದು ತಲೆಬಾಗಿ ಸ್ವೀಕರಿಸು. ಜಗನ್ಮಾತೆಯ ಹಸ್ತಗಳಿಂದ ಬೀಳುವ ಪೆಟ್ಟು ಮಧುರವೆ. ಎಷ್ಟಾದರೂ ಬೆನ್ನುಮೇಲೆ ಬೀಳಲಿ. ಈ ದೃಷ್ಟಿಯಿಂದ ಯಾರು ನೋಡು ವರೋ ಅವರೇ ಧೈರ್ಯಶಾಲಿಗಳು. ಅವರೇ ಜಗನ್ಮಾತೆಯ ನಿಜವಾದ ಮಕ್ಕಳು.

ತಾಯಿಪೆಟ್ಟಿಗೆ ಮಗು ಸಾಯುವುದಿಲ್ಲ. ಅವಳ ಕೋಪಕ್ಕೆ ಮಗು ಅಂಜುವುದಿಲ್ಲ. ತಾಯಿ ಎಲ್ಲಿಟ್ಟರೆ ಅಲ್ಲಿ ಸಮಾಧಾನದಿಂದ ಇರುವುದು. ಅದಕ್ಕೆ ತಾಯಿಯಲ್ಲದೆ ಬೇರೊಂದು ಗೊತ್ತಿಲ್ಲ.

೨೪೧. ಶಾಸ್ತ್ರಚರ್ಚಾ, ತರ್ಕವಿಚಾರ ಮತ್ತು ಯುಕ್ತಿ ಇವು ಗಳನ್ನು ಕೂಡಿದ ಎರಡು ಕವಡೆ ಬಾಳುವ ಬುದ್ಧಿ ಶಕ್ತಿಯಿಂದ ದೇವರನ್ನು ತಿಳಿದುಕೊಳ್ಳಬಲ್ಲೆಯೇನು? ಈ ಹಾದಿಯಿಂದ ಅವನನ್ನು ಗ್ರಹಿಸಿಕೊಳ್ಳ ಲೆತ್ನಿಸಿದರೆ ನಿನಗೆ ಕಕ್ಕಾಬಿಕ್ಕಿಯಾಗುವ ಸಂಭವವಿದೆ. ನಿನ್ನ ಬಾಳಿನ ಮೇಲೆಯೇ ಸಂದೇಹ ಹುಟ್ಟುವುದು. ಬಹಳ ಅಪರೂಪವಾದ ಈ ಮನುಷ್ಯ ಜನ್ಮ ಪಡೆದಿರುವೆ. ನಿನ್ನ ದಿನವನ್ನೆಲ್ಲಾ ಕೇವಲ ಮಾವಿನ ಮರದ ಎಲೆ ರೆಂಬೆಗಳ ಮೇಲೆ ಅದ್ಭುತ ಸಂಶೋಧನೆ ನಡೆಸುವುದರಲ್ಲೆ ಕಳೆಯುವೆ ಯೇನು? ಇಲ್ಲ, ಮಾವಿನ ಹಣ್ಣುಗಳನ್ನು ತಿಂದು ತೃಪ್ತಿಪಡುವೆಯೊ? ಯಾರಿಗೆ ಇಷ್ಟವುಂಟೋ ಅವರು ಸಂಶೋಧನೆ ನಡೆಸಲಿ. ಆದರೆ, ನನ್ನ ಪ್ರಿಯವತ್ಸ, ನೀನು ನಿನ್ನ ಹೊಟ್ಟೆ ತುಂಬುವಷ್ಟು ಮಾವಿನ ಹಣ್ಣನ್ನು ತಿನ್ನು.

೨೪೨. ನಿಜವಾಗಿ ಜ್ಞಾನ ಚರ್ಚಾವಿಚಾರ, ಸಂಶೋಧನೆ ಇವು ಗಳು ಬುದ್ಧಿಶಕ್ತಿಯನ್ನು ವೃದ್ಧಿಮಾಡಿ ಅನೇಕ ಗಹನ ವಿಷಯಗಳನ್ನು ಬೆಳಕಿಗೆ ತರುವುವು. ಜಗತ್ ಕಲ್ಯಾಣಕರವಾದ ಅನೇಕ ಸತ್ಯಗಳನ್ನು ಶೋಧನೆ ಮಾಡಬಹುದು. ಆದರೆ ಇದೇ ಜ್ಞಾನ ಸ್ವಾರ್ಥಪರರು, ಪ್ರಪಂಚ ವೆಲ್ಲಾ ತಮ್ಮದೇ ಎಂದು ತಿಳಿದಿರುವ ಜನಾಂಗದ ಕೈಯಲ್ಲಿ ಸಿಕ್ಕಿ, ಕೊನೆ ಯಿಲ್ಲದ ದುಃಖ, ಜನರ ಹಾನಿಗೆ ಕಾರಣವಾಗುವುದು. ಜನರನ್ನು ಕಾಡು

ಪ್ರಾಣಿಗಳಂತೆ ಮಾಡಿ ಪ್ರಪಂಚವನ್ನು ಮತ್ತೊಂದು ನರಕ ಕುಂಡವನ್ನಾಗಿ ಮಾಡುವುದು.

೨೪೩. ಪ್ರಾರ್ಥನೆಯೆಂದರೆ, ನಮ್ಮ ಅಂತರ್ಯಾಮಿಗೆ ನಮ್ಮ ಆಂತರಿಕ ವೇದನೆ ಮತ್ತು ಅಭಾವವನ್ನು ಭಾವ ಅಥವಾ ಭಾಷೆಯ ಮೂಲಕ ವ್ಯಕ್ತಗೊಳಿಸಿ ಅದನ್ನು ಹೋಗಲಾಡಿಸುವುದಕ್ಕೆ ಅವನನ್ನು ಬೇಡುವುದು. ಸ್ವಾರ್ಥ ಪ್ರಾರ್ಥನೆ ಹೀಗಿರುವುದು: "ಓ! ದೇವರೆ, ನಾನೀ ಜೀವನದ ಕೋಟಲೆ, ರೋಗ, ವಿರಹ, ಆಸೆ, ಬಡತನವನ್ನು ಸಹಿಸಲಾರೆ. ನನ್ನನ್ನು ಸುಖಿಯಾಗಿ, ಆರೋಗ್ಯವಂತನಾಗಿ, ಎಲ್ಲಾ ಅಭಾವ ವ್ಯಥೆಗಳಿಂದ ದೂರವಾಗುವಂತೆ ಅನುಗ್ರಹಿಸು." ಸ್ವಾರ್ಥರಹಿತವಾದ ಪ್ರಾರ್ಥನೆ, "ಓ, ದೇವರೆ, ನಿನಗಿಷ್ಟ ಬಂದಷ್ಟು ಭಾರವನ್ನು ಹೆಗಲ ಮೇಲೆ ಹೊರಿಸು. ನನ್ನನ್ನು ಸಂಕಟಕ್ಕೀಡುಮಾಡು, ಅಪಾಯಕ್ಕೆ ತಳ್ಳು. ಇವುಗಳಿಂದೇನು ಆಗುವುದಿಲ್ಲ. ಆದರೆ ತಂದೆ ಇದೊಂದನ್ನು ಮಾತ್ರ ದಯಪಾಲಿಸು. ನಾನು ಯಾವುದರಿಂದಲೂ ವಿಚಲಿತನಾಗದೆ, ನಿನ್ನನ್ನು ಮರೆಯದೆ ಸಕಲ ಭಯನಿವಾರಣ ನಿನ್ನ ಪಾದಪದ್ಮಗಳಲ್ಲಿ ನಿರಂತರ ಭಕ್ತಿಯುಂಟಾಗುವಂತೆ, ಶಕ್ತಿಸಾಮರ್ಥ್ಯವನ್ನು ಅನುಗ್ರಹಿಸು."

೨೪೪. ಮಾನವ ಜೀವನದ ಮುಖ್ಯ ಗುರಿ ಭಗವತ್ಸಾಕ್ಷಾತ್ಕಾರ, ಮುಕ್ತಿಲಾಭ. ಕೇವಲ ಮಾನವನೊಬ್ಬನಿಗೆ ಮಾತ್ರ ಈ ಜೀವನದ ಮುಖ್ಯ ಗುರಿಯನ್ನು ಪಡೆಯುವ ಹಕ್ಕು ಯೋಗ್ಯತೆ ಇದೆ. ಉಳಿದವರಾರಿಗೂ, ಪ್ರಾಣಿಗಳಿಗಾಗಲಿ, ಸ್ವರ್ಗದಲ್ಲಿರುವ ದೇವತೆಗಳಿಗಾಗಲಿ ಇದನ್ನು ಹೊಂದಲಾಗುವುದಿಲ್ಲ. ಪ್ರಾಣಿಗಳಿಗೆ, ನಿತ್ಯಾನಿತ್ಯ ವಸ್ತುವಿವೇಕವಿಲ್ಲದಿರುವುದರಿಂದ ಈ ತಿಳುವಳಿಕೆ ಇರುವುದಿಲ್ಲ. ದೇವತೆಗಳು ಸ್ವರ್ಗಲೋಕದ ಸ್ವರ್ಗೀಯ ಸುಖದ ನಿರಂತರ ಲೋಲಾಪ್ತಿಯಲ್ಲಿ ಮುಳುಗಿರುವುದರಿಂದ ಅವರಿಗೆ ಮುಕ್ತಿ ದುರ್ಲಭ. ಅವರಿಗೆ ವಿಚಾರ ಮಾಡಲು ಸಾಧನೆಮಾಡಲು ಕಾಲವೆಲ್ಲಿದೆ? ಇದರಿಂದ ಯಾರಿಗೆ ತುಂಬಾ ಐಶ್ವರ್ಯ ಆಸ್ತಿ ಇದೆಯೋ ಅವರಿಗೆ ಮುಕ್ತಿ ಸಿಗುವುದು ಬಹು ಕಷ್ಟ. ಯಾರು ಕಡು ಬಡವರಾಗಿ, ನಿರ್ಗತಿಕರಾಗಿ, ಕಿತ್ತು ತಿನ್ನುವ ಹಸಿವು ಅಭಾವದಿಂದ ಪೀಡಿತರಾಗಿ ತಲ್ಲಣಗೊಂಡಿದ್ದಾರೋ, ಅಂತಹವರಿಗೆ ಆಧ್ಯಾತ್ಮಿಕತೆ ಗಳಿಸುವುದು ಕಷ್ಟ. ಯಾರು ಸಾಧಾರಣ ಸ್ಥಿತಿಯಲ್ಲಿರುವರೋ ಅವರಿಗೆ ಸಾಕ್ಷಾತ್ಕಾರ ಬಹುಮಟ್ಟಿಗೆ ಸುಲಭ. ಏಕೆಂದರೆ ಅವರು ಈ ಎರಡು ಅತಿಗಳ

ಮಧ್ಯೆ ಇದ್ದಾರೆ. ನೀವು ಚರಿತ್ರೆ ನೋಡಿದರೆ, ಸುಮಾರು ಎಲ್ಲಾ ಉಜ್ವಲ ವ್ಯಕ್ತಿಗಳೂ, ಯಾರು ಧರ್ಮ, ಸಮಾಜ, ರಾಜನೀತಿ, ಇತರ ಕೆಲಸ ಮತ್ತು ಆಲೋಚನೆಯ ಕ್ಷೇತ್ರದಲ್ಲಿ ಅಳಿಸಲಾಗದ ಪ್ರಭಾವವನ್ನು ಬಿಟ್ಟು ಹೋಗಿರುವರೋ ಅವರು ಹೆಚ್ಚು ಶ್ರೀಮಂತರೂ ಅಲ್ಲ, ಕಡು ಬಡವರೂ ಅಲ್ಲ. ಸಾಧಾರಣ ವರಮಾನವುಳ್ಳ ತಾಯಿತಂದೆಯರಿಗೆ ಜನಿಸಿದವರು.

೨೪೫. ಇಂದು ನಾವು ನಮ್ಮ ಶಕ್ತಿಯನ್ನೆಲ್ಲಾ ಪೋಲುಮಾಡಿ ನಾಳೆ ಬರಬಹುದಾದ ಫಲಕ್ಕಾಗಿ ಇಂದೇ ನಮ್ಮ ನಮ್ಮಲ್ಲೇ ಕದನನಾಡಿದರೆ, ನಾವು ಇಂದಿನ ಮತ್ತು ನಾಳೆಯ ಲಾಭವನ್ನು ಕಳೆದುಕೊಳ್ಳುವೆವು.

೨೪೬. ವಿದ್ಯಾ, ಬುದ್ಧಿ, ಧನ, ಶಾಸ್ತ್ರ, ಜ್ಞಾನ, ತರ್ಕವಿಚಾರ, ದಾನ, ಪುಣ್ಯ, ಯಾಗ, ಯಜ್ಞ, ತಪಸ್ಸು– ಇದಾವುದರಿಂದಲಾಗಲಿ ಅಥವಾ ಇವೆಲ್ಲಾ ಒಟ್ಟಾಗಿ ಸೇರಿದರೂ ಭಗವತ್ ಸಾಕ್ಷಾತ್ಕಾರವಾಗುವುದಿಲ್ಲ. ಇವುಗಳಲ್ಲಿ ಯಾವುದಾದರೂ ಒಂದರಿಂದ ಅಥವಾ ಎಲ್ಲವೂ ಸೇರಿದರೂ ಅವನನ್ನು ಹಿಡಿಯಲಾಗುವುದಿಲ್ಲ, ಅಂದರೆ ಗ್ರಹಿಸಲಾಗುವುದಿಲ್ಲ. ಕೇವಲ ಪವಿತ್ರ ಪ್ರೇಮ, ಅಂತಃಕರಣ ಪೂರ್ವಕವಾದ ಭಕ್ತಿ ಇವುಗಳೇ ಆತನನ್ನು ಗ್ರಹಿಸಲು ಸಾಧನ. "ಅವನು ಅನಿರ್ವಚನೀಯ ಪ್ರೇಮ ಸ್ವಭಾವವುಳ್ಳವನು," ಅದರ ಮೂಲಕ ಮಾತ್ರ ಅವನು ಗೋಚರಿಸುವನು. ಅವನು ಇನ್ನು ಅವಿತಿಟ್ಟುಕೊಳ್ಳಲಾರನು. ಕರು ತಾಯ ಕೆಚ್ಚಲನ್ನು ಯಾವಾಗ ಝಾಡಿಸುವುದೋ ಆಗ ಹಸು ಹಾಲನ್ನು ಧಾರಾಕಾರವಾಗಿ ಕೊಡುವಂತೆ ಇರುವುದು.

೨೪೭. ವೇದಗಳು ದೇವರನ್ನು ಗುಣಾತೀತನೆಂದು ಸಾರಿವೆ. ನಾಮ, ರೂಪ, ಕಾಲ, ದೇಶ, ಕಾರಣಗಳ ಎಲ್ಲೆಯಿಲ್ಲ. ಭಾಷೆ, ಮನಸ್ಸು, ಬುದ್ಧಿಗೆ ನಿಲುಕುವುದಿಲ್ಲ. ಆದಿ ಅಂತ್ಯರಹಿತ ಸರ್ವವ್ಯಾಪಿ, ಅತೀಂದ್ರಿಯ. ಆದರೆ ಭಕ್ತನ ಹೃದಯ ತಾನಾಗಿ ಇದೆಲ್ಲವನ್ನೂ ಒಪ್ಪಿಕೊಂಡರೂ ಧೃತಿಗೆಡುವುದಿಲ್ಲ. ಭಕ್ತ, "ದೇವರು ಕೇವಲ ಅಷ್ಟೇ ಅಲ್ಲ. ಹಾಗಿದ್ದರೆ ಆತನ ಇರುವಿಕೆ, ಇಲ್ಲದಿರುವಿಕೆಗೂ ಏನು ವ್ಯತ್ಯಾಸ? ಆತನನ್ನು ನಾನು ನೋಡಲಿಕ್ಕೂ ಆಗುವುದಿಲ್ಲ, ಆತನನ್ನು ನನ್ನವನನ್ನಾಗಿ ಮಾಡಿಕೊಳ್ಳಲು ಆಗುವುದಿಲ್ಲ, ಎಂದಮೇಲೆ ಆತನಿಂದ ನನಗೇನುತಾನೆ ಪ್ರಯೋಜನ? ಹಾಗಾದರೆ ಆಧ್ಯಾತ್ಮಿಕ ಸಾಧನ ಸಂಸ್ಕಾರವೆಲ್ಲ ವ್ಯರ್ಥ. ನಾನೇ ವ್ಯರ್ಥ, ಮಾನವ ಜನ್ಮವೂ ವ್ಯರ್ಥ. ಹಾಗಾದರೆ ಜೀವಿಸುವುದರಲ್ಲಿ

ತಾನೇ ಏನು ಉದ್ದೇಶವಿದೆ? ಏನೇ ಆಗಲಿ, ನೀನು ಈ ಜನ್ಮದಲ್ಲಿ ಅವನ ಸಾಕ್ಷಾತ್ಕಾರ ಪಡೆಯಲೇಬೇಕು" ಎನ್ನುವನು. ಭಕ್ತನ ಹೃದಯ ವಿದ್ರಾವಕ ಹಂಬಲ ಕಣ್ಣೀರು ದೇವರ ಸಿಂಹಾಸನವನ್ನೇ ಅಲ್ಲಾಡಿಸುವುದು. ಇನ್ನು ಆತನು ತನ್ನ ಪೀಠದಲ್ಲಿ ಕುಳಿತು ಸ್ವಲ್ಪವೂ ವಿಚಲಿತನಾಗದೆ ಇರಲಾರ. ನಿಜವಾಗಿ ಆತನು ಸರ್ವಜ್ಞ, ಸರ್ವ ಜೀವಿಗಳಲ್ಲೂ ಇರುವ ಪರಮಾತ್ಮ. ಎಲ್ಲರ ಹೃದಯದ ಮಾರ್ಗದರ್ಶಕ. ಅನಿರ್ಬಂಧ, ನಿರ್ಹೇತುಕ, ಕರುಣಾಸಾಗರ, ಭಕ್ತವತ್ಸಲ, ಭಕ್ತರಲ್ಲಿ ಅಪಾರ ಪ್ರೇಮವುಳ್ಳವನು. ಆದ್ದರಿಂದ ಭಕ್ತನ ಆಸೆಯನ್ನು ಸಫಲಗೊಳಿಸುವ ಸಲುವಾಗಿ ತನ್ನ ನೈಜ ಸ್ಥಿತಿಯನ್ನು ಒತ್ತಟ್ಟಿಗಿಟ್ಟು, ಭಕ್ತನ ಹೃದಯ ದೇಗುಲದಲ್ಲಿ ಅವನು ತನ್ನನ್ನು ಯಾವ ರೂಪಿಂದ ಪೂಜಿಸುವನೋ ಅದೇ ರೂಪದಲ್ಲಿ ದರ್ಶನ ಕೊಡುವನು. ಭಕ್ತನ ಬಹುಕಾಲದ ಬಯಕೆ ಮತ್ತು ಗುರಿಯನ್ನು ಪೂರ್ಣಗೊಳಿಸುವನು. ಕಾಲಕಾಲಕ್ಕೆ ಮಾನವರೂಪು ಧಾರಣೆಮಾಡಿ, ಮಾನವರು ತನ್ನ ನಿಜಸ್ಥಿತಿಯನ್ನು ಅರಿಯಲವಕಾಶವಾಗುವಂತೆ ಈ ಜಗತ್ತಿಗೆ ಬರುತ್ತಾನೆ. ಯಾವಾಗ ಭಗವಂತ ಅವತಾರಪುರುಷನಾಗಿ ಜನರ ಮಧ್ಯೆ ವಾಸಿಸುವನೋ, ಆಗ ಪಾಪಿಗಳು, ದುಃಖಿಗಳು ಎಲ್ಲರೂ ಆತನ ಕೃಪೆಯಿಂದ ಯಾವ ಕಠೋರ ಸಾಧನೆಯೂ ಇಲ್ಲದೆ ಮುಕ್ತಿ ಹೊಂದುವರು.

೨೪೮. ದೇವರು ಭಕ್ತನ ಮೇಲಿನ ದಯೆಯಿಂದ ತನ್ನ ಪೂಜೆ ಸುಲಭವಾಗುವುದಕ್ಕೆ ಸಾಕಾರನಾಗಿ ಬರುತ್ತಾನೆ. ಗುಣಾತೀತ, ಅಚಿಂತ್ಯ ಸ್ವರೂಪವನ್ನು ಗ್ರಹಿಸುವುದಾಗಲಿ, ಸಕಲಗುಣ ಸಂಪನ್ನನೆಂದು ಭಾವಿಸುವುದಾಗಲಿ ಅಸಾಧ್ಯ. ಈಶ್ವರನ ಪ್ರತಿಮೆ ಮಾಡುವುದಕ್ಕೆ ಹೋಗಿ ಮಂಗನ ಪ್ರತಿಮೆಯನ್ನು ಮಾಡಿದಂತಾಗುತ್ತದೆ. ನಾವು ಎಲ್ಲಿಯವರೆಗೆ ಮನುಷ್ಯರಾಗಿರುವೆವೊ, ದೇಹಭಾವ, ದ್ವೈತಭಾವನೆ ಇರುವುದೋ, ಅಲ್ಲಿಯವರೆಗೆ ಭಗವಂತನನ್ನು ಅನಂತ ಕಲ್ಯಾಣಗುಣಗಳುಳ್ಳ ಒಬ್ಬ ಆದರ್ಶ ಪುರುಷನೆಂದು ಯೋಚಿಸದೆ ವಿಧಿಯಿಲ್ಲ.

೨೪೯. ದೇವರನ್ನು ನಿರಾಕಾರನೆಂದು ಧ್ಯಾನಿಸಲು ಯತ್ನಿಸಿದರೆ ಅನಂತ ಆಕಾಶ, ಅಪಾರ ಕಡಲು, ಇದನ್ನು ಯೋಚಿಸಬಹುದು. ಪ್ರಾರಂಭದಲ್ಲಿ ನಿರಾಕಾರ ಧ್ಯಾನಮಾಡಬೇಕಾದರೆ ಶೂನ್ಯವನ್ನು ಕುರಿತು ಯೋಚಿಸಬೇಕು. ಯಾವುದನ್ನೂ ಅಲ್ಲಿಡಲಾಗದು. ಅದು ಕತ್ತಲೆಯಲ್ಲಿ

ಕಲ್ಲನ್ನೆಸೆದ ಸಮಾಚಾರದಂತೆ. ನಿರಾಕಾರ ಪಿತ ಅಥವಾ ನಿರಾಕಾರ ಮಾತೆಯ ಧ್ಯಾನ ಕಷ್ಟ. ಅದು ಕಲ್ಪನಾರಹಿತದ ದಾರಿ. ನೀರಸ, ಅರ್ಥ ವಿಲ್ಲದ ಪದ ಪುಂಜ. ನಾವು ಹೆಚ್ಚುಕಾಲ ನಿರಾಕಾರ ಬ್ರಹ್ಮನ ಧ್ಯಾನ ಮಾಡಲಾಗುವುದಿಲ್ಲ. ಏಕೆಂದರೆ ಅದು ಧೂಳಿನಷ್ಟು ನಿಸ್ಸಾರವಾಗಿ ನಾವು ಹಿಡಿದುಕೊಳ್ಳಲು ಯಾವ ಆಸರೆಯೂ ಇರುವುದಿಲ್ಲ. ದೇಹಾತ್ಮಭಾವನೆ ಯಿಲ್ಲದ ಭಗವಂತನನ್ನು ಎಲ್ಲೆಲ್ಲಿಯೂ ನೋಡುವನು ಮುಕ್ತ. ಪರಮ ಹಂಸನು ಮಾತ್ರ ಅವ್ಯಕ್ತ ನಿರ್ಗುಣ ಬ್ರಹ್ಮನನ್ನು ಕುರಿತು ಧ್ಯಾನ ಮಾಡಬಲ್ಲ.

೨೫೦. ಗೀತೆಯಲ್ಲಿ ಶ್ರೀಕೃಷ್ಣ, "ಯಾವಾಗ ಪ್ರಪಂಚದಲ್ಲಿ ಧರ್ಮವು ನಶಿಸಿ ಹೋಗುವುದೊ, ಆಗ ನಾನು ದುಷ್ಟ ಶಿಕ್ಷಣ, ಶಿಷ್ಟ ರಕ್ಷಣೆ ಗಾಗಿ, ಧರ್ಮೋದ್ಧಾರಕ್ಕಾಗಿ ಪ್ರತಿಯೊಂದು ಯುಗದಲ್ಲಿಯೂ ಅವತಾರ ಮಾಡುತ್ತೇನೆ" ಎಂದು ಸಾರುವನು. ಈಶ್ವರ ಸರ್ವ ಶಕ್ತಿಮಯ. ಅವನು ಅವತಾರ ಪುರುಷನಾಗಿ ಬಂದು ಇಷ್ಟೊಂದು ಕಷ್ಟಪಡದೆ ತನ್ನ ಇಚ್ಛಾ ಮಾತ್ರದಿಂದ ಇವೆಲ್ಲವನ್ನು ಸಾಧಿಸಬಹುದಾಗಿತ್ತು. ಆದ್ದರಿಂದ ಕೇವಲ ಇದೊಂದೇ ದೇವರ ಅವತಾರಕ್ಕೆ ಕಾರಣವೆಂದು ಹೇಳಲಾಗುವುದಿಲ್ಲ. ಶ್ರೀಕೃಷ್ಣನು ಅಧರ್ಮ ತತ್ಪರರಾಗಿದ್ದ ಕಂಸ, ಶಿಶುಪಾಲರ ವಧೆಗೋಸುಗ ಅವತಾರ ಮಾಡಿದನೆಂದು ಹೇಳಲಾಗುವುದಿಲ್ಲ. ಚರಿತ್ರೆಯಲ್ಲಿ ಅಂತಹ ಪ್ರಜಾಹಿಂಸಕರೆಷ್ಟೊ ಮಂದಿ ಕೊಲ್ಲಲ್ಪಟ್ಟು ಪ್ರಜೆಗಳು ದಬ್ಬಾಳಿಕೆಯಿಂದ ಪಾರಾದ ಸಂಗತಿ ಹೇರಳವಾಗಿವೆ. ಯೋಗವಿದ್ಯಾ ಪಾರಂಗತರಾದ ಅನೇಕ ಮಹಾಪುರುಷರ, ಮಹಾಜ್ಞಾನಿಗಳ ಜೀವನದಲ್ಲಿ ಅನೇಕ ಅಲೌಕಿಕ ಕೃತ್ಯಗಳು ನಡೆದಿರುವ ವಿಷಯಗಳಿವೆ. ಅವರು ಪವಾಡಗಳನ್ನು ಮೆರೆಯು ವರು. ಅವರಿಗೆ ಅಸಾಧ್ಯವೆಂಬುದೇ ಇಲ್ಲ. ಶ್ರೀ ಕೃಷ್ಣಾವತಾರವನ್ನು ಅವನು ದ್ವಾರಕೆಯ ದೊರೆಯಾಗಿ ಮಾಡಿದ ಕೆಲಸ ಅಥವಾ ಕುರುಕ್ಷೇತ್ರ ಯುದ್ಧರಂಗದಲ್ಲಿ ಪಾಂಡವರ ಸಹಾಯಕನಾಗಿ ಮಾಡಿದ ಕೆಲಸ ಇವು ಗಳಿಂದಲೂ ಸಿದ್ಧಾಂತ ಪಡಿಸಲಾಗುವುದಿಲ್ಲ. ಅವರ ಇಷ್ಟಾರ್ಥ ಸಿದ್ಧಿಗಾಗಿ ಅವನು ಅನೇಕವೇಳೆ ಅನುಮಾನಾಸ್ಪದವಾದ ಸಾಹಸಕ್ಕೆ ಕೈಹಾಕಬೇಕಾ ಯಿತು. ಆ ಅದ್ಭುತ ಕೆಲಸಗಳು ಖಂಡಿತ ನಮ್ಮಲ್ಲಿ ಗೌರವ ಮತ್ತು ಶ್ರದ್ಧೆಯನ್ನುಂಟುಮಾಡುವುವು. ಅವನ ಬಹುಮುಖದ ಪ್ರತಿಭೆ ಇದರಿಂದ ವ್ಯಕ್ತವಾಗುವುದು. ಇವೆಲ್ಲಾ ಕೇವಲ ತಾತ್ಕಾಲಿಕ ಪ್ರಯೋಜನವಾಗುವ

ಕಾರ್ಯಗಳು. ಇದರಿಂದ ಮಾನವ ಜೀವನದ ಮೇಲೆ ಶಾಶ್ವತ ಪ್ರಭಾವ ಕಾಣುವುದಿಲ್ಲ.

೨೫೧. ಶ್ರೀಕೃಷ್ಣ ಒಬ್ಬ ಅವತಾರವೆಂಬುದಕ್ಕೆ ಕಾರಣ ಆತನ ಬೃಂದಾವನದ ಲೀಲೆಯಲ್ಲಿ ಸ್ಪಷ್ಟವಾಗಿದೆ. ಏಕೆಂದರೆ ಕೇವಲ ಅಲ್ಲಿ ಮಾತ್ರ ಅವನು ತನ್ನ ಅನಿರ್ವಚನೀಯ ಪ್ರೇಮ ಸಾರವನ್ನು ತೋರ್ಪಡಿಸಿ ಕೊಂಡಿರುವನು. ಎಷ್ಟುಮಟ್ಟಿಗೆ ಭಕ್ತಿ ಪ್ರೇಮವು ದೇವರನ್ನು ಭಕ್ತನ ನ್ನಾಗಿ ಮಾಡುತ್ತದೆ, ಎಷ್ಟು ಮಟ್ಟಿಗೆ ಭಗವಂತನನ್ನು ಭಕ್ತ ತನ್ನವನನ್ನಾಗಿ ಮಾಡಿಕೊಳ್ಳಬಲ್ಲ, ಇವನ್ನು ಬೃಂದಾವನದ ಲೀಲೆಯಲ್ಲಿ ಚೆನ್ನಾಗಿ ಗ್ರಹಿಸ ಬಹುದು. ಆ ಲೀಲೆಯಲ್ಲಿ ಜ್ಞಾನ, ಬುದ್ಧಿ ಶಕ್ತಿಗೆ ಮೀರಿದ ಪ್ರೇಮ ಶಿಖರ ವನ್ನು ಪ್ರಪಂಚಕ್ಕೆ ತೋರಿದ್ದಾನೆ. ಆ ಪರಮ ಪ್ರೇಮದಿಂದ ಆಕರ್ಷಿತ ರಾಗಿ ಬೃಂದಾವನದ ಗೋಪಿಯರು ಆತನ ಕೊಳಲಿನ ಧ್ವನಿ ಕೇಳಿದ ಕೂಡಲೇ ಆತನನ್ನು ನೋಡಲು, ಸಮೀಪದಲ್ಲಿರಲು, ಹುಚ್ಚರಂತೆ ಯಮು ನೆಯ ಕಡೆಗೆ ಓಡಿ ಹೋಗುತ್ತಿದ್ದರು. ನಾಚಿಕೆ, ಭಯ, ಮನೆತನದ ಹೆಸರು, ಸಮಾಜದಲ್ಲಿನ ಗೌರವ, ಎಲ್ಲವನ್ನೂ ತೊರೆದು ತಮ್ಮ ದೇಹದ ವ್ಯಕ್ತಿತ್ವವನ್ನು ತೊರೆದು ಆತನಲ್ಲಿ ಐಕ್ಯವಾಗುತ್ತಿದ್ದರು. ಅಂಥಹ ನಿಸ್ವಾರ್ಥ ಪ್ರೇಮ ಕೇವಲ ಭಗವಂತನ ಪ್ರೇರಣೆಯಿಂದ ಮಾತ್ರ ಸಾಧ್ಯವಲ್ಲದೆ, ಸಾಧಾರಣ ಮನುಷ್ಯನಿಗೆ ಹುಟ್ಟಲು ಎಂದಿಗೂ ಸಾಧ್ಯವಿಲ್ಲ. ಆ ಅದ್ಭುತ ವಾದ, ನಿರಂತರವಾದ, ಎಂದೂ ಭಾವಿಸಬಹುದಾದ ದೈವೀಪ್ರೇಮದ ಸುಮಧುರ ಆಧ್ಯಾತ್ಮಿಕ ಪ್ರೇರಣೆಯು ಅಸಂಖ್ಯಾತ ಸ್ತ್ರೀ ಪುರುಷರನ್ನು ಯುಗಯುಗಾಂತರಗಳಿಂದ ತಮ್ಮ ಪ್ರಿಯನೆಡೆಗೆ ಸೆಳೆಯುತ್ತಿರುವುದು. ಅವರ ಜೀವನದಲ್ಲಿ ಶಾಂತಿ ಆನಂದವನ್ನನುಭವಿಸಿ, ಭಗವಂತನ ಪೂಜೆ ಯಿಂದ ಮುಕ್ತಿ ಹೊಂದಲರ್ಹರಾಗುವಂತೆ ಮಾಡಿರುವುದು. ಶತಮಾನ ಗಳನಂತರ ಆ ಮಹಾಆಚಾರ್ಯ ಶ್ರೀ ಚೈತನ್ಯ ದೇವನು ಆ ದಿವ್ಯ ಪ್ರೇಮ ವನ್ನು ಪುನರುಜ್ಜೀವನಗೊಳಿಸಲು ಅವತಾರವೆತ್ತಿ ಬಂದನು. ಕೃಷ್ಣ ಮತ್ತು ಗೋಪಿಯರಲ್ಲಿ ಮುಖ್ಯರಾದ ರಾಧೆ ಇವರ ಕಾಮಗಂಧಹೀನ ಸುಮಧುರ ಲೀಲೆಯ ಧ್ಯಾನದ ಮೂಲಕ ಮಹಾಭಾವ ಅಂದರೆ ಸಮಾಧಿಯಲ್ಲಿ ಮೈ ಮರೆಯುತ್ತಿದ್ದನು. ಆ ದೈವೀಪ್ರೇಮ ಮತ್ತು ಸುಮಧುರ ಭಕ್ತಿಯನ್ನು ಪ್ರಪಂಚದ ಪ್ರತಿಯೊಬ್ಬರಿಗೂ ಉದಾರವಾಗಿ ಪ್ರಚಾರ ಮಾಡಿದನು. ಈಗಿನ ಕಾಲದಲ್ಲಿ ಶ್ರೀರಾಮಕೃಷ್ಣರು ರಾಧಾಕೃಷ್ಣ ಲೀಲೆಯ ವಿಚಾರವಾಗಿ

ಮಾತಾಡುತ್ತಿದ್ದರೆ ಅಥವಾ ಹಾಡುತ್ತಿದ್ದರೆ ಆನಂದದಿಂದ ಮಹಾ ಭಾವದಲ್ಲಿ ತನ್ಮಯರಾಗುತ್ತಿದ್ದರು. ಕೇವಲ ಶ್ರೀರಾಧ ಮತ್ತು ಶ್ರೀ ಚೈತನ್ಯ ದೇವನ ಜೀವನದಲ್ಲಿ ಆವಿರ್ಭಾವವಾದ ಅಪೂರ್ವವಾದ ದ್ವೈತ ಭಾವ ನೆಯ ಎಂಟು ಬಗೆಯ ಬಾಹ್ಯ ಚಿಹ್ನೆಗಳು ಅವರಲ್ಲಿ ಆಗ ಕಂಡು ಬರುತ್ತಿದ್ದವು.

೨೫೨. ಕೇವಲ ನಮ್ಮದನ್ನು ಮಾತ್ರ ನಾವು ತ್ಯಜಿಸಬಲ್ಲೆವು. ನಮ್ಮದಲ್ಲದುದನ್ನು ತ್ಯಜಿಸಲು ಹೇಗೆ ಸಾಧ್ಯ? ಒಂದು ವಸ್ತುವನ್ನು ತ್ಯಜಿಸಬೇಕಾದರೆ ಅದನ್ನು ಮೊದಲು ಹೊಂದಿರಬೇಕು. ಇದರಿಂದುಂಟಾ ಗುವ ತೊಂದರೆ ಜವಾಬ್ದಾರಿಗಾಗಿ ಹಿಂಜರಿಯಕೂಡದು. ಗಾಳಿ ಬೀಸಿ ಹಾರಿಹೋದ ಅವಲಕ್ಕಿಯನ್ನು ಗೋವಿಂದನಿಗೆ ಅರ್ಪಿಸಿದರೆ ಏನೂ ಪ್ರಯೋ ಜನವಿಲ್ಲ. ಶಾಸ್ತ್ರ ಭೋಗವನ್ನು ನಿಷೇಧಿಸುವುದಿಲ್ಲ. ತ್ಯಾಗದ ಮೂಲಕ ಭೋಗಿಸು ಎನ್ನುವುದು. ನಾನು ನನ್ನದು ಎಂಬ ಭಾವನೆಯನ್ನು ತ್ಯಜಿಸಿ ಭೋಗಿಸು. ಈ ಪ್ರಪಂಚದಲ್ಲಿ ಎಲ್ಲಾ ವಸ್ತುಗಳಲ್ಲಿಯೂ ಭಗವಂತ ನಿದ್ದಾನೆ, ಎಲ್ಲವೂ ಅವನದು. ಇದನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟು "ನಾನು ನನ್ನದು" ಎಂಬ ಭಾವನೆಯನ್ನು ತ್ಯಜಿಸಿ ಕರ್ಮಮಾಡು. ಎಲ್ಲವನ್ನೂ ಭೋಗಿಸು. ಅನ್ಯಥಾ ಭೋಗ ದುರ್ಭೋಗದಲ್ಲಿ ಪರಿಣಮಿಸುವುದು. ಹೀಗೆ ಭೋಗಿಸಿದರೆ, ಯೋಗ ಸ್ವಾಭಾವಿಕವಾಗಿ ಸಿದ್ಧಿಸುವುದು.

೨೫೩. ಇಷ್ಟದೇವತಾ ಸ್ಮರಣ ಮನನವೆಂದರೆ ದೇವರೊಂದಿಗೆ ಸಂಬಂಧವನ್ನು ಬೆಳೆಸುವುದು ಎಂದು ಅರ್ಥ. ನಮ್ಮ ಯೋಚನಾ ತರಂಗ ಗಳು ಆತನ ಕಡೆ ಎಷ್ಟು ಗಾಢವಾಗಿ, ನಿರರ್ಗಳವಾಗಿ ಹರಿದರೆ ಅಷ್ಟು ಹೆಚ್ಚಾಗಿ ನಮ್ಮ ಅಂತಃಕರಣವನ್ನು ಕದಡುವ ಯೋಚನೆಗಳು ಶಾಂತ ವಾಗುವುವು. ಆ ಯೋಚನಾಪ್ರವಾಹ ಪಾತ್ರೆಗೆ ಸುರಿಯುವ ಎಣ್ಣೆಯಂತೆ ಅಖಂಡಧಾರೆಯಾಗಿರುತ್ತದೆ. ಆಗ ಮಾತ್ರ ಅದನ್ನು ಧ್ಯಾನವೆನ್ನ ಬಹುದು. ಧ್ಯಾನ ಇನ್ನೂ ಗಾಢವಾದಾಗ, ಮನಸ್ಸು ನಾವು ಧ್ಯಾನಿಸುವ ವಸ್ತುವಿನೊಡನೆ ಐಕ್ಯವಾಗುವುದು; ಆ ರೂಪದಲ್ಲೇ ತಲ್ಲೀನವಾಗುವುದು. ಆ ಸ್ಥಿತಿಗೆ ಸಮಾಧಿ, ಅತೀಂದ್ರಿಯಾವಸ್ಥೆ ಎನ್ನುವರು. ಆಗಲೇ ಆತ್ಮ ಪರಿ ಚಯ ಸಂಪೂರ್ಣವಾಗಿ ನಮಗೆ ಆಗುವುದು; ಇಷ್ಟದೇವತಾ ಸಾಕ್ಷಾ ತ್ಕಾರವಾಗುವುದು. ಯಾರಿಗೆ ಬ್ರಹ್ಮಸಾಕ್ಷಾತ್ಕಾರ ಲಭಿಸಿದೆಯೋ ಆತನ ಹೃದಯಗ್ರಂಥಿಗಳು ಕಡಿದು ಹಾಕಲ್ಪಟ್ಟವೆ ಎಂದು ಉಪನಿಷತ್ತು

ಹೇಳುವುದು. ಎಲ್ಲಾ ಆಕಾಂಕ್ಷೆಗಳು ನಾಶವಾಗಿ, ಸಂದೇಹ ಪರಿಹಾರ ವಾಗಿ, ಕರ್ಮಕ್ಷಯವಾಗುವುದು, — ದುಃಖ ಕೊನೆಗೊಳ್ಳುವುದು. ದೇವರ ಸಾಕ್ಷಾತ್ಕಾರಕ್ಕೆ ಮೊದಲ ಹಂತ ಆತ್ಮನನ್ನು ಕುರಿತು ಯಾವಾಗಲೂ ಯೋಚಿಸುವುದು. ಮನಸ್ಸನ್ನು ಶಾಂತಗೊಳಿಸುವುದು, ಎರಡನೆಯ ಹಂತ, ಧ್ಯಾನ, ಮೂರನೆಯ ಹಂತ, ಸಮಾಧಿ, ಕೊನೆಯ ಹಂತ ಅಥವಾ ಏಣಿಯ ಕೊನೆ. ಹಿಂದಿನ ಹಂತಗಳನ್ನು ಹತ್ತದೇ ನೆಗೆಯಲು ಯತ್ನಿಸಿದರೆ ಮೇಲೆ ಏರಲಾರೆವು. ಅನವರತ ಸ್ಮರಣ ಮನನವೇ ಭಗವತ್ಸಾಕ್ಷಾತ್ಕಾರಕ್ಕೆ ಕೊನೆಯ ಹಂತ.

೨೫೪. ಬಾರಿ ಬಾರಿ ಸ್ಮರಣೆ ಮೂಲಕ ಮನಸ್ಸನ್ನು ಧೃಢಮಾಡಲು ಜಪ ಧ್ಯಾನ ಆರಾಧನೆ ವಿಧಾನವಿದೆ. ಇಷ್ಟಮಂತ್ರವನ್ನು ಪ್ರತಿದಿನವೂ ಬಹು ಹೊತ್ತು ಮನನ ಮಾಡುವುದು ಅತ್ಯಾವಶ್ಯಕ. ನಾವು ಯಾವ ಕೆಲಸದಲ್ಲಿ ಸತತವಾಗಿ ನಿರತರಾಗಿರುವೆವೋ ಯಾವುದರ ವಿಚಾರವಾಗಿ ಯೋಚಿಸುತ್ತಿರುವೆವೋ ಅದರ ಪ್ರಭಾವ ಮನಸ್ಸಿನ ಮೇಲೆ ಬೀಳುವುದು. ಅವು ಅಲ್ಲಿ ಕರಗಿ ಹೋದಂತೆ ತೋರಿದರೂ ಅವು ಸಂಸ್ಕಾರರೂಪ ಅಥವಾ ಭೂತಕಾಲದ ಅವ್ಯಕ್ತರೂಪದಲ್ಲಿರುವುವು. ಯಾವಾಗ ಅನುಕೂಲ ಸಂದರ್ಭ ಒದಗುವುದೋ ಆಗ ಆ ಮನುಷ್ಯನಿಗರಿವಿಲ್ಲದೆಯೇ ಅವು ಕೆಟ್ಟ ಪ್ರವೃತ್ತಿ ಬಲವಾಗಿದ್ದರೆ ಕೆಟ್ಟ ಕೆಲಸಕ್ಕೂ, ಒಳ್ಳೆಯ ಪ್ರವೃತ್ತಿ ಬಲವಾಗಿದ್ದರೆ ಒಳ್ಳೆಯ ಕೆಲಸಕ್ಕೂ ಪ್ರೇರೇಪಿಸುತ್ತವೆ. ಆದ್ದರಿಂದ ಕೆಟ್ಟ ಕೆಲಸ ಮಾಡುವವರು ಅದರಲ್ಲೇ ನಿರತರಾಗಿರುವರು. ಅದೇ ಯಾರು ಆಧ್ಯಾತ್ಮಿಕ ಪ್ರಗತಿಗಾಗಿ ಶ್ರಮಿಸುತ್ತಿರುವರೋ ಅವರು ಬಹುಬೇಗ ಮುಂದುವರಿಯುವರು.

೨೫೫. ಭೂಮಂಡಲದಲ್ಲಿರುವ ಶಕ್ತಿಯ ಮೊತ್ತ ಯಾವಾಗಲೂ ಒಂದೇ ಆಗಿರುವುದು. ಅದು ಹೆಚ್ಚೂ ಆಗುವುದಿಲ್ಲ ಕಡಿಮೆಯೂ ಆಗುವುದಿಲ್ಲ. ನಾಶವಾಗುವುದೂ ಇಲ್ಲ. ಆದರೆ ಅದು ರೂಪಾಂತರ ಹೊಂದಬಹುದು. ಬದಲಾಯಿಸಬಹುದು, ಅನೇಕ ರೂಪು ತಾಳಬಹುದು—ಅಷ್ಟೆ. ನಾವು ಮಾಡುವ ಯಾವುದೇ ಕೆಲಸ ಯೋಚನೆ ಆಗಲಿ ಅದು ಕೆಟ್ಟದಾಗಲಿ ಅಥವಾ ಒಳ್ಳೆಯದಾಗಲಿ ನಾಶವಾಗುವುದಿಲ್ಲ. ಅದು ಸೂಕ್ಷ್ಮರೀತಿಯಲ್ಲಿ ಜಾಗ್ರತವಾಗಿರಲು ಪ್ರಯತ್ನಿಸುವುದು; ಅಥವಾ ಸಂಗ್ರಹವಾಗಿ ಅನುಕೂಲ ಸಮಯ ತಲೆದೋರಿದೊಡನೆ ತಲೆ ಎತ್ತುವುದು. ಹೀಗೆ ನಾವೇ

ನಮ್ಮ ಕರ್ಮ ಫಲವನ್ನು ಒಳ್ಳೆಯದಾಗಲಿ ಕೆಟ್ಟದಾಗಲಿ ಅನುಭವಿಸಬೇಕು. ಇಷ್ಟೇ ಅಲ್ಲ, ಈ ಸಂಗ್ರಹವಾದ ಯೋಚನೆ ಅಥವಾ ಕರ್ಮ ಇತರರನ್ನೂ ವ್ಯಾಪಿಸಿ ಅವರನ್ನೂ ದುಃಖಿ ಅಥವಾ ಸುಖಿಗಳನ್ನಾಗಿ ಮಾಡುತ್ತವೆ.

೨೫೬. ಸ್ವಾಮಿ ವಿವೇಕಾನಂದರು ಹೀಗೆ ಹೇಳುವರು ನಾವು ಈ ಪ್ರಪಂಚದಲ್ಲಿ ವೈಮರೆತು ಕಳುಹಿಸಿದ ಕ್ರಿಯಾಶಕ್ತಿ ಆಲೋಚನೆ ಶಕ್ತಿ ತರಂಗ ರೂಪದಲ್ಲಿ ಸೃಷ್ಟಿಯಲ್ಲಿ ಸಂಚರಿಸುತ್ತ ಇರುತ್ತವೆ. ಅದೇ ಬಗೆಯ ಮನಸ್ಸುಳ್ಳ ಮತ್ತೊಬ್ಬನು ಅದರ ಸ್ಪರ್ಶಮಾಡಿದರೂ ಅವನ ಮೇಲೆ ಪರಿಣಾಮವನ್ನುಂಟುಮಾಡುತ್ತದೆ. ಅವನಲ್ಲಿ ಅದೇ ಭಾವನೆಯನ್ನು ಉದ್ರೇಕಗೊಳಿಸುತ್ತದೆ, ಶಕ್ತಿ ತುಂಬುತ್ತದೆ, ತಾನೂ ಅದನ್ನು ಸಂಗ್ರಹಿಸುವುದು. ಒಂದು ವರ್ತುಲವನ್ನು ಪೂರ್ತಿಮಾಡಿದ ಮೇಲೆ ಅದೇ ಶಕ್ತಿ ತನ್ನ ಮೂಲಸ್ಥಾನಕ್ಕೆ ಇನ್ನೂ ದ್ವಿಗುಣಿತ ಶಕ್ತಿಯಿಂದ ಹಿಂತಿರುಗುತ್ತದೆ. ಈ ಕಾರಣದಿಂದಲೇ ನಾವು ಮತ್ತೊಬ್ಬರನ್ನು ಹಿಂಸಿಸಿದರೆ ಅಥವಾ ಅವರಿಗೆ ನೋವನ್ನುಂಟುಮಾಡಿದರೆ ನಾವು ಕೂಡ ಅದೇ ಫಲವನ್ನು ಒಂದಲ್ಲ ಒಂದು ಕಾಲದಲ್ಲಿ ಇದೇ ಜನ್ಮ ಅಥವಾ ಮುಂದಿನ ಜನ್ಮದಲ್ಲಿ ಅನುಭವಿಸಿಯೇ ತೀರಬೇಕು. ಇದು ಪ್ರಕೃತಿ ನಿಯಮ. ಯಾರೂ ಇದನ್ನು ತಪ್ಪಿಸಿಕೊಳ್ಳಲಾರರು.

೨೫೭. ಈ ಪ್ರಕೃತಿಯ ನಿಯಮವನ್ನು ಗ್ರಹಿಸಲಾಗದೆ ಇರುವುದರಿಂದ ನಮ್ಮ ದುಃಖಕ್ಕೆ ಪ್ರತ್ಯಕ್ಷ ಕಾರಣವನ್ನು ಕೊಡಲಾರೆವು. ಇವುಗಳನ್ನು ವಿವರಿಸಲು ಸಾಧಾರಣ ಬುದ್ಧಿ ಶಕ್ತಿಗೆ ಅಸಾಧ್ಯ. ಆದ್ದರಿಂದ ವಿಧಿ, ದೇವರು, ಅದೃಷ್ಟವೆಂದು ಆಕ್ಷೇಪಿಸುತ್ತೇವೆ. ದೇವರನ್ನು ಕ್ರೂರಿ ಪಕ್ಷಪಾತಿ ಎಂದು ದೂರುತ್ತೇವೆ. ನಾವು ಎಷ್ಟು ಮಾಯೆಯಲ್ಲಿ ಸಿಲುಕಿದ್ದೇವೆಂದರೆ ಒಂದು ಘಳಿಗೆಯೂ ನಮ್ಮ ಕರ್ಮ ಫಲವನ್ನು ಚಕ್ರ ಬಡ್ಡಿಸಮೇತ ಅನುಭವಿಸಬೇಕಾಗಬಹುದು ಎಂಬುದನ್ನು ಯೋಚಿಸುವುದಿಲ್ಲ. ಇವನ್ನೆಲ್ಲಾ ಯೋಚಿಸಿ ನಿನ್ನ ಕೆಲಸ ಯೋಚನೆಯನ್ನು ಹಿಡಿತದಲ್ಲಿಟ್ಟು ಒಳ್ಳೆಯ ದಾರಿಯನ್ನನುಸರಿಸು. ತಾತ್ಕಾಲಿಕ ಸುಖಲಾಭಕ್ಕಾಗಿ ಮತ್ತೊಬ್ಬರಿಗೆ ನೋವು ಅಥವಾ ವ್ಯಥೆಯನ್ನುಂಟುಮಾಡಬೇಡ. ನೀನು ಆಧ್ಯಾತ್ಮಿಕ ಹಾದಿಯಲ್ಲಿ ತಪ್ಪದೆ ನಡೆದರೆ ಗೀತೆಯಲ್ಲಿ ಹೇಳಿರುವ, "ದೈವೀಸಂಪತ್" ದೈವೀಕ ಗುಣಗಳನ್ನು ಸಂಪಾದಿಸುವೆ. ಮನಸ್ಸು ಪರಿಶುದ್ಧವಾಗುವುದು. ನಿನ್ನ ಹೃದಯದಲ್ಲೇ ದೈವೀಶಕ್ತಿಯನ್ನೀಕ್ಷಿಸುವೆ. ನೀನು ತಪ್ಪುಮಾಡ

ಬೇಕೆಂದರೂ ಆಗ ಮಾಡಲಾಗುವುದಿಲ್ಲ. ಗುರುಮಹಾರಾಜರು ಹೇಳು ತ್ತಿದ್ದಂತೆ, ಅವರ ಜೀವನದಲ್ಲೇ ಅಕ್ಷರಶಃ ಪರೀಕ್ಷಿಸಿದಂತೆ, "ನೀನೆಂದೂ ತಪ್ಪು ಹೆಜ್ಜೆಯನ್ನಿಡಲಾರೆ". ಅದೇ ಆಧ್ಯಾತ್ಮಿಕ ಜೀವನದಲ್ಲಿ ಮುಂದು ವರಿದವನ ಚಿಹ್ನೆ.

೨೫೮. ಅನೇಕರು ಯೋಗಾಭ್ಯಾಸ ಮಾಡದೆ ಜ್ಞಾನಮಾರ್ಗವನ್ನ ನುಸರಿಸದೆ ಹೋದರೆ ಸಮಾಧಿ ಪಡೆಯಲಾಗುವುದಿಲ್ಲವೆಂಬ ಭಾವನೆ ಹೊಂದಿದ್ದಾರೆ. ಪತಂಜಲಿ ಯೋಗಶಾಸ್ತ್ರದಲ್ಲಿ ಹೀಗೆ ಹೇಳಿದ್ದಾರೆ: "ಮಂತ್ರ ಜಪ ಅಥವಾ ಪವಿತ್ರನಾಮ ಪುನಶ್ಚರಣೆಯಿಂದ ಇಷ್ಟದೇವತಾ ಪ್ರಾಪ್ತಿಯಾಗುವುದು" ಎಂದರೆ ದೇವರ ಸಾಕ್ಷಾತ್ಕಾರವಾಗುವುದು. ಇದಾದ ಕೂಡಲೇ, "ಆತ್ಮಾರ್ಪಣೆಯಿಂದ ಸಮಾಧಿ ಪ್ರಾಪ್ತಿಯಾಗುವುದು" ಎಂದು ಸಾರಿದೆ. ಮತ್ತೊಂದು ಕಡೆ "ಅಥವಾ ದೇವರನ್ನು ಧ್ಯಾನಿಸು ವುದರಿಂದ" ಎಂದಿದೆ. ಎಂದರೆ ಸಮಾಧಿಯನ್ನು ಚಿತ್ತೈಕಾಗ್ರತೆಯಿಂದ ನಮ್ಮ ಕರ್ಮಫಲವನ್ನೆಲ್ಲಾ ದೇವರಿಗೆ ಅರ್ಪಿಸುವುದರಿಂದ ಪಡೆಯಬಹುದು. ಟೀಕಾಚಾರ್ಯ ವ್ಯಾಸಮಹರ್ಷಿಗಳು ಈ ಸಂದರ್ಭದಲ್ಲಿ, "ದೇವರು ತನ್ನನ್ನು ಅಗಾಧ ಭಕ್ತಿ ಪ್ರೇಮದಿಂದ ಧ್ಯಾನಿಸಿದರೆ ಸಂತೋಷಗೊಂಡು ತನ್ನ ಇಚ್ಛಾ ಮಾತ್ರದಿಂದಲೇ ಭಕ್ತನನ್ನು ಅನುಗ್ರಹಿಸುತ್ತಾನೆ. ಕೇವಲ ಆತನ ಇಚ್ಛೆ ಯಿಂದಲೇ ಯೋಗಿಗಳು ಸಮಾಧಿ ಫಲವನ್ನು ಪಡೆಯುತ್ತಾರೆ" ಎಂದು ಬರೆದಿದ್ದಾರೆ. ಎಂದರೆ ಅನಿರ್ಬಂಧವಾಗಿ ಎಂದಾಯಿತು. ಯೋಗದ ಎಂಟು ಹಂತಗಳನ್ನು ಸಾಧನೆ ಮಾಡದೆಯೇ ಸಮಾಧಿ ಸ್ಥಿತಿಯನ್ನು ಹೊಂದಬಹುದೆಂದಾಯಿತು. ಸಾಕಾರ ಬ್ರಹ್ಮನಲ್ಲಿ ತನ್ಮಯರಾಗುವುದೂ, ನಿರಾಕಾರ ಬ್ರಹ್ಮನಲ್ಲಿ ಸಮಾಧಿ ಹೊಂದುವುದೂ ಎರಡೂ ಒಂದೇ. ಭಾವ, ಸಾಧನಗಳಲ್ಲಿ ವ್ಯತ್ಯಾಸವಿದೆ. ಸತ್ಯ ಸಾಕ್ಷಾತ್ಕಾರ ಪರಿಣಾಮ ಎರಡರಲ್ಲೂ ಒಂದೇ. ನಿಜವಾಗಿ ನಿರ್ಗುಣಬ್ರಹ್ಮನೇ ಸಗುಣ ಬ್ರಹ್ಮ; ದೇಹಾಭಿ ಮಾನವಿರುವುದರಿಂದ ಸಗುಣ ಬ್ರಹ್ಮನ ಪೂಜೆಯೇ ಜೀವಿಗಳಿಗೆ ಸುಲಭ.

೨೫೯. ಪ್ರತಿಫಲಾಪೇಕ್ಷೆಯಿಂದ ಪೂಜೆಮಾಡುವುದು ಕೇವಲ ನಮ್ಮ ಸ್ವಾರ್ಥಪೂಜೆ – ದೇವರ ಪೂಜೆಯಲ್ಲ. ತೊಂದರೆ, ರೋಗರುಜಿನ, ದುರದೃಷ್ಟ, ಅಪಾಯ, ಅಭಾವ, ದುಃಖ, ಭಯ, ತಳಮಳ, ವಿರಹ ಮುಂತಾದುವುಗಳ ಬಿಡುಗಡೆಗಾಗಿ ದೇವರನ್ನು ಪ್ರಾರ್ಥಿಸಿದರೆ, ಅದು ಕೇವಲ ನಮ್ಮ ಸ್ವಾರ್ಥ ಲಾಭ; ಮತ್ತೊಬ್ಬರನ್ನು ಆಳುವುದು, ಸ್ವಂತ ಅನು

ಕೂಲ ಸುಖಕ್ಕೆ ಮಾತ್ರ ಆಯಿತು. ಶಾಸ್ತ್ರೋಕ್ತ ಸ್ನಾನ, ದಾನ, ಪೂಜೆ ಪುನಸ್ಕಾರ, ಹಬ್ಬ, ವ್ರತೋಪವಾಸಗಳು, ದಾನ ಪ್ರಾಯಶ್ಚಿತ್ತ ಇವು ನಮ್ಮ ಯೋಗಕ್ಷೇಮಕ್ಕೆ ಮತ್ತು ದುಃಖ ನಾಶಕ್ಕೆ; ತೀರ್ಥಯಾತ್ರೆ, ಮಹಾ ಪುರುಷರ ಸೇವೆ, ಚಂಡಿ ಮತ್ತು ಗೀತಾಪಾರಾಯಣ ಮುಂತಾದ ಆಚಾರವೆಲ್ಲಾ ಆಸೆಯಿಂದ ಪ್ರೇರೇಪಿತವಾದುವು. ಪಾಪ ಪರಿಹಾರ ಮತ್ತು ಪುಣ್ಯಗಳಿಸುವುದೇ ಇದರ ಗುರಿ. ಹಿಂದಿನ ಪಾಪವನ್ನು ಕಳೆದು ಕೊಳ್ಳುವುದೆಂದರೆ ಯಾವುದಾದರೊಂದು ಸುಲಭವಾದ ಮಾರ್ಗದಿಂದ ತಾವು ಹಿಂದೆ ಮಾಡಿದ ಪಾಪಕಾರ್ಯಗಳಿಂದುಂಟಾಗಬಹುದಾದ ತಪ್ಪಿಸಿ ಕೊಳ್ಳಲಾಗದ ಕೆಟ್ಟ ಪರಿಣಾಮಗಳಿಂದ ಎಂದರೆ ನರಕದ ದುರಂತವೇದನೆ, ನೋವಿನ ಕೋಟಲೆಯಿಂದ ಪಾರಾಗುವ ಅಪೇಕ್ಷೆಯಿಂದ ಮಾತ್ರ. ಪಾಪ ಮಾಡುವ ಪ್ರವೃತ್ತಿಯನ್ನೇ ಕಳೆದುಕೊಳ್ಳುವ ಇಚ್ಛೆಯಿಂದಲ್ಲ. ಪುಣ್ಯ ಗಳಿಸುವುದರ ಉದ್ದೇಶ ಈ ಜನ್ಮದಲ್ಲಿ ಸಂಸಾರ, ಮಕ್ಕಳು, ಬಂಧುಬಳಗ ಎಲ್ಲರೊಡನೆ ಸುಖವಾಗಿ ಭೋಗಿಸಿ ನಂತರ ಸ್ವರ್ಗದಲ್ಲಿಯೂ ಅನಂತ ಸುಖವನ್ನನುಭವಿಸಬೇಕೆಂಬುದು! ಈ ಎರಡು ಆಸೆಗಳೂ ಕೇವಲ ಭ್ರಮೆ! ವ್ಯರ್ಥ ನಿರೀಕ್ಷೆ. ಈ ಜಗತ್ತಿನಲ್ಲಿ ದುಃಖರಹಿತ ಸುಖವೆಂಬುದೂ ಇಲ್ಲ, ಸ್ವರ್ಗದಲ್ಲಿ ಶಾಶ್ವತ ಸುಖವೆಂಬುದೂ ಇಲ್ಲ. ಇವು ಕೇವಲ ಧರ್ಮ ಶಾಸ್ತ್ರ, ವೇದಪುರಾಣ ಮುಂತಾದುವುಗಳಲ್ಲಿ ಉಲ್ಲೇಖಿಸುವ ಪ್ರಶಂಸೆ, ಸಮಾಧಾನ ನುಡಿಗಳು, ಪ್ರೇರಣೆಗಳು – ಕೇವಲ ಕಟ್ಟು ಕಥೆ. ಯಾರಿಗೆ ಪುಣ್ಯಕೆಲಸವನ್ನು ಮಾಡಲು ಅಪೇಕ್ಷೆ ಇಲ್ಲವೋ ಅವರನ್ನು ಆಕರ್ಷಿಸಲು ಈ ರೀತಿ ಬೋಧಿಸಿರುವರು. "ನೀನು ಇಷ್ಟನ್ನು ಮಾತ್ರ ಮಾಡು, ನೀನು ಲಕ್ಷದಷ್ಟು ಪ್ರತಿಫಲಹೊಂದುವೆ". ಇದು ತಾಯಿ ಮಗುವಿಗೆ ಅನೇಕ ಅದ್ಭುತ ಕಥೆಗಳನ್ನು ಹೇಳುತ್ತಾ ಅದರ ಗಮನವನ್ನು ಬೇರೆ ಕಡೆ ತಿರುಗಿಸಿ ಹಾಲು ಕುಡಿಸುವಂತೆ ಅಥವಾ ಜೋಗುಳ ಹಾಡುತ್ತಾ ಅದನ್ನು ಮಲಗಿಸುವಂತೆ. ಗುರಿ ಒಳ್ಳೆಯದು, ಉದ್ದೇಶವೂ ಪೂರೈಸಿದ ಹಾಗಾಯಿತು.

೨೬೦. ಹಾಗಾದ ಪಕ್ಷಕ್ಕೆ ನಾವು ಆಸೆಯಿಂದ ಪ್ರೇರೇಪಿತರಾಗಿ ಈ ಶಾಸ್ತ್ರೋಕ್ತ ಪೂಜೆ, ಆಚಾರವನ್ನು ಬಿಟ್ಟು ಬಿಡಬೇಕೇನು? ನಾನು ಅದನ್ನು ನಿಮಗೆ ಬೇಡವೆಂದು ಹೇಳುತ್ತಿದ್ದೇನೆಯೇ? ಖಂಡಿತವಾಗಿಯೂ ಇಲ್ಲ. ಎಲ್ಲಿಯವರೆಗೆ ನಿನಗೆ ಆ ಕಡೆ ಇಚ್ಛೆ ಇದೆಯೋ ಅಲ್ಲಿಯವರೆಗೂ

ಮಾಡು. ಈ ಆಚರಣೆ ಮನಸ್ಸನ್ನು ವಿಶಾಲ ಮಾಡುವುದು. ಸಂತೋಷ ವನ್ನು ನೀಡುವುದು. ಸಾತ್ತ್ವಿಕ ಭಾವನೆ ಸದಾಲೋಚನೆ, ಸತ್ಕರ್ಮ ಮಾಡುವುದರಿಂದ ಬರುವುದು. ಅವು ಸತ್ಕರ್ಮ ಮತ್ತು ನಿಷ್ಕಾಮ ಕರ್ಮ ವನ್ನು ಮಾಡಲು ಶ್ರದ್ಧಾಸಕ್ತಿಯನ್ನುಂಟು ಮಾಡುತ್ತವೆ. ಆದರೆ ಅದು ನಿಜವಾಗಿಯೂ ವೇದದಲ್ಲಿದ್ದರೂ, ಆ ವಿಚಾರ ಹೋಮ ವಿಧಿಗಳನ್ನು ಹೇಳುವ ವೇದದ ಕರ್ಮಕಾಂಡಕ್ಕೆ ಸೇರಿದೆ– ಅವು ನಿಜವಾಗಿಯೂ ಭಕ್ತಿ ಅಥವಾ ಪ್ರಾರ್ಥನೆಗೆ ಸೇರಿಲ್ಲ. ಭಗವತ್ಪ್ರೇಮದಲ್ಲಿ ಕೊಂಡು ಮಾರುವ ವ್ಯಾಪಾರ, ವರ್ತಕನ ಲಾಭ ನಷ್ಟದ ಎಣಿಕೆ, ಕರ್ಮಕ್ಕೆ ಪ್ರತಿಫಲಾಪೇಕ್ಷೆ, ಇವುಗಳೊಂದೂ ಇಲ್ಲ. ಕೇವಲ ಹೃದಯದಲ್ಲಿರುವ ದೇವನಿಗೆ ಮನೋ ವಾಕ್ಕಾಯಗಳಿಂದ ಎಲ್ಲವನ್ನೂ ಅರ್ಪಿಸುವುದು— ಕೇವಲ ಆತನನ್ನು ಪ್ರೀತಿಸುವುದರಲ್ಲೇ ಸಂಪೂರ್ಣ ತೃಪ್ತಿ ಇದೆ. ಏಕೆಂದರೆ ಆತನನ್ನು ಪ್ರೀತಿ ಸಿದ ಮೇಲೆ ಹಾಗೆ ಪ್ರೀತಿಸಲರ್ಹವಾದ ಮತ್ತಾವ ವಸ್ತುವೂ ಈ ಪ್ರಪಂಚ ದಲ್ಲಿಲ್ಲ. ಇಲ್ಲಿ ಪ್ರೇಮ ಪ್ರೇಮಕ್ಕೋಸುಗವಾಗಿದೆ. ಅಂತಹ ಭಕ್ತನ ಸಹಜ ಸ್ವಭಾವವೇ ಪ್ರೇಮಮಯವಾಗಿರುವುದು. ಅವನ ಜೀವಿತ ಧ್ಯೇಯ "ಭಗವಂತನನ್ನು ಪ್ರೀತಿಸದೆ ಜೀವಿಸುವುದಾಗಲೀ, ಉಸಿರಾಡುವುದಾಗಲೀ ಅಸಹನೀಯ". ಇದೇ ಭಕ್ತಿಯ ಪರಾಕಾಷ್ಠೆ, ಪರಿಶುದ್ಧ ನಿಶ್ಚಲ ಭಕ್ತಿ. ಇಂತಹ ಭಕ್ತಿ ಬಹು ಅಪೂರ್ವ. ಪ್ರಾರಂಭದಲ್ಲಿ ಅದು ತಾನಾಗಿ ಬರುವು ದಿಲ್ಲ. ಅದಕ್ಕೇ ನಮ್ಮ ಶಾಸ್ತ್ರದಲ್ಲಿ ವೈಧೀ ಭಕ್ತಿ ವಿವರಿಸಲ್ಪಟ್ಟಿದೆ. ಮನಸ್ಸು ಕ್ರಮೇಣ ಭಗವತ್ಕೃಪೆಯಿಂದ ಪರಿಶುದ್ಧವಾಗಿ ಕಲ್ಮಷವೆಲ್ಲಾ ತೊಳೆದು ಹೋಗುವುದು. ಕ್ಷುದ್ರ ಫಲಾಪೇಕ್ಷೆ ತುಚ್ಛವಾಗಿಕಂಡು ಈ ಪ್ರಾಪಂಚಿಕ ನಶ್ವರ ವಸ್ತುಗಳ ಮೇಲೆ ತಿರಸ್ಕಾರ ಹುಟ್ಟುವುದು. ಹೃದಯ ಶಾಶ್ವತ ಪರಮ ಪದವನ್ನು ಪಡೆಯಲು ಹಂಬಲಿಸುವುದು. ಇದೇ ಶ್ರೇಷ್ಠ ಭಕ್ತಿ ಅಥವಾ ಜ್ಞಾನ.

೨೬೧. ಹನ್ನೆರಡು ವರ್ಷ ಬ್ರಹ್ಮಚರ್ಯ ಮತ್ತು ಸತ್ಯವನ್ನು ಸಾಧನೆ ಮಾಡಿದರೆ ವಾಕ್ ಸಿದ್ಧಿ ಲಭಿಸುವುದು. ದೈವೀ ಶಕ್ತಿಯ ಆವಿರ್ಭಾವನೆ ಯಾಗುವುದು. ಅಂತಹವನ ಮಾತು ಎಂದಿಗೂ ಸುಳ್ಳಾಗುವುದಿಲ್ಲ. ಅವನು ಯಾರಿಗೇ ಆಗಲಿ ಯಾವ ಮಾತನ್ನು ಆಡಿದರೂ ಅದು ಆಶೀರ್ವಾದವಾಗಲಿ, ಶಾಪವಾಗಲಿ ಸತ್ಯವಾಗುತ್ತದೆ. ಯಾವ ಸುಖಕ್ಕಾಗಿ ಅವನು ಇಚ್ಛಿಸಿದರೂ ಅವನದನ್ನು ಪಡೆಯುವನು. ಆತನ ಪವಿತ್ರ ಮನದಲ್ಲಿ ಯಾವ ಬಗೆಯ

ಸಂಕಲ್ಪವುಂಟಾದರೂ ಅದು ಈಡೇರುತ್ತದೆ.

೨೬೨. ಯಾರು ಭಗವತ್ಸಾಕ್ಷಾತ್ಕಾರವನ್ನು ಅಪೇಕ್ಷಿಸುವರೋ ಅವರು ಯಾವ ಸಂದರ್ಭದಲ್ಲೇ ಆಗಲಿ ಸತ್ಯವನ್ನು ಬಿಡಬಾರದು. ಸತ್ಯವನ್ನು ತ್ಯಜಿಸದೆ ಸಾವಿರ ಬಾರಿ ದುಃಖ ಕೋಟಲೆಯನ್ನು ಅನುಭವಿಸಿದರೂ ಒಳ್ಳೆಯದೆ. ಯಾರು ಇದನ್ನು ಮಾಡಲು ಸಿದ್ಧರಾಗಿರುವರೋ, ಎಲ್ಲವನ್ನೂ ನಗುಮುಖದಿಂದ ಎದುರಿಸುವರೋ, ಅವರು ಸತ್ಯಸ್ವರೂಪನಾದ ಭಗವಂತನ ಸಾಕ್ಷಾತ್ಕಾರ ಪಡೆಯುವರು. ಸತ್ಯಕ್ಕೆ ತಪ್ಪಿದರೆ ದೇವರನ್ನೇ ಕಳೆದುಕೊಂಡಂತೆ. ಸತ್ಯದ ಶಕ್ತಿ ಅಜೇಯವಾದುದು. ರಾಮನು ತಂದೆಯ ಆಣತಿ ಪರಿಪಾಲನೆಗಾಗಿ ಕಾಡಿಗೆ ಹೋದನು. ಪಂಚಪಾಂಡವರು ದ್ರೌಪದಿಯೊಡನೆ ಸತ್ಯಕ್ಕಾಗಿ ದೇಶಾಂತರವನ್ನೈದಿದರು. ಇದೇ ಕಾರಣಕ್ಕಾಗಿ ಹರಿಶ್ಚಂದ್ರ ಮಹಾರಾಜನು ಎಲ್ಲವನ್ನೂ ಕಳೆದುಕೊಂಡು ಬೀದಿಯ ಭಿಕ್ಷುಕನಾದನು. ಪುರಾಣಗಳಲ್ಲಿ ಇಂತಹ ಸತ್ಯಕ್ಕಾಗಿ ಪ್ರಾಣವನ್ನೇ ತೆತ್ತು ಸತ್ಯದಮೇಲೆ ಅಚಲ ಶ್ರದ್ಧೆಯುಳ್ಳವರಾಗಿದ್ದವರ ನೂರಾರು ನಿದರ್ಶನಗಳಿವೆ. ಗುರು ಮಹಾರಾಜರು ಸತ್ಯ ಸಾಕ್ಷಾತ್ಕಾರವಾದಮೇಲೆ ಜಗನ್ಮಾತೆ ಕಾಳಿಗೆ, ಜ್ಞಾನ ಅಜ್ಞಾನ, ಪವಿತ್ರತೆ ಅಪವಿತ್ರತೆ, ಒಳ್ಳೆಯದು ಕೆಟ್ಟದ್ದು, ನ್ಯಾಯ ಅನ್ಯಾಯ – ಎಂಬ ವಿರುದ್ಧ ಭಾವಗಳನ್ನು ಅರ್ಪಿಸಿ ತಮಗೆ ಶುದ್ಧ ಭಕ್ತಿ ನೀಡೆಂದು ಪ್ರಾರ್ಥಿಸುತ್ತಿದ್ದರು. ಆದರೆ ಅವರಿಗೆ 'ತಾಯಿ ಇದೋ! ಇಲ್ಲಿ ಸತ್ಯವಿದೆ ಇಲ್ಲಿ ಅಸತ್ಯವಿದೆ' ಎಂದು ಹೇಳಲಾಗಲಿಲ್ಲ. ಏಕೆಂದರೆ ಅವರು ಹೇಳಿದಂತೆ ಸತ್ಯವನ್ನೇ ಬಿಟ್ಟುಕೊಟ್ಟರೆ ಹಿಡಿದುಕೊಳ್ಳಲು ಮತ್ತಾವ ಆಸರೆಯಿದೆ?

೨೬೩. ಕಾಲ ಗಾಳಿಯಂತೆ ಓಡುತ್ತಿದೆ. ಆಯುಸ್ಸು ಪ್ರತಿಘಳಿಗೆ ಕ್ಷೀಣವಾಗುತ್ತಿದೆ. ಜೀವನ, ಸಾವಿನ ಮತ್ತೊಂದು ಹೆಸರು. ನಮ್ಮ ಶರೀರ ಎಂದು ಬಿದ್ದುಹೋಗುವುದೋ ಗೊತ್ತಿಲ್ಲ. ನೀನು ಯಾವಾಗಲೂ ಸಾವಿನ ಕರೆಗೆ ಸಿದ್ಧನಾಗಿರಬೇಕು. ವ್ಯರ್ಥವಾಗಿ ಕಾಲ ಕಳೆಯಬೇಡ. ಯಾವುದಾದರೂ ಅತ್ಯಾವಶ್ಯಕವಾದ ಕೆಲಸವಿದ್ದರೆ ಅದನ್ನು ಮುಂದೆ ಹಾಕಬೇಡ. ಈ ಘಳಿಗೆಯಿಂದಲೇ ನೀನು ನಿನ್ನ ಭವಿಷ್ಯ ಜೀವನಕ್ಕೆ ಸ್ವಲ್ಪವನ್ನಾದರೂ ಕೂಡಿಸಿಡಬೇಕು. ಸಿರಿ ಮತ್ತು ಆಸ್ತಿಗೆ ಈ ಪ್ರಪಂಚದಲ್ಲಿ ಮಾತ್ರ ಬೆಲೆ. ಸತ್ತಮೇಲೆ ಯಾವುದೂ ನಿನ್ನನ್ನು ಹಿಂಬಾಲಿಸಲಾರವು. ಆಧ್ಯಾತ್ಮಿಕ ಸಾಧನೆ ಪ್ರಾರ್ಥನೆ ಇವೇ ಮುಂದಿನ ಜನ್ಮಕ್ಕೆ ಆಧಾರ. ಅವೇ ನಿಜವಾಗಿ

ನಿನ್ನ ಆಸ್ತಿ, ನಿನ್ನೊಡನೆ ನೀನು ಅವನ್ನು ಒಯ್ಯಬಹುದು. ಆ ಸಂಪತ್ತು ಎಷ್ಟೇ ಅಲ್ಪವಾದರೂ ಅದರಲ್ಲಿ ಸ್ವಲ್ಪವೂ ವ್ಯರ್ಥವಾಗುವುದಿಲ್ಲ. ಅದರ ಸಹಾಯದಿಂದ ಸತ್ಯದ ಹಾದಿಯಲ್ಲಿ ಸ್ವಲ್ಪ ದೂರವಾದರೂ ಮುಂದುವರಿಯುವೆ.

೨೬೪. ಈ ಜನ್ಮದಲ್ಲಿ ಆಧ್ಯಾತ್ಮಿಕ ಸಾಧನೆಯನ್ನು ಎಲ್ಲಿ ನಿಲ್ಲಿಸಿರುವೆಯೋ ಅಲ್ಲಿಂದ ನಿನ್ನ ಮುಂದಿನ ಜನ್ಮದಲ್ಲಿ ಪ್ರಾರಂಭಿಸುವೆ. ಎಂದರೆ ನೀನು ಮುಂದಿನ ಜನ್ಮದಲ್ಲಿ, ಈ ಜನ್ಮದಲ್ಲಿ ಸಾಧನೆಯನ್ನು ಎಲ್ಲಿಯವರೆಗೆ ಮಾಡಿ ನಿಲ್ಲಿಸಿದ್ದೆಯೋ ಅಲ್ಲಿಂದ ಸರಿಯಾಗಿ ಪ್ರಾರಂಭಿಸಿ ನಿನ್ನ ಗುರಿ ಎಡೆಗೆ ವೇಗವಾಗಿ ಸಾಗಬಹುದು. ಈ ಕಾರಣದಿಂದಲೇ ನಾವು ಎಷ್ಟೋ ಮಂದಿ ಸ್ವಾಭಾವಿಕವಾಗಿ ದೇವರ ಭಕ್ತರಾಗಿರುವುದನ್ನು ನೋಡುವೆವು. ಕೇವಲ ಸ್ವಲ್ಪ ಸಾಧನೆಯಿಂದ ಅವರಿಗೆ ಚಿತ್ತೈಕಾಗ್ರತೆ ಬಂದು ಸತ್ಯಸಾಕ್ಷಾತ್ಕಾರ ಅಂತರ್ಯದಲ್ಲಿಯೇ ಆಗುವುದು. ಅವರ ಅಂತರ್ಜ್ಯೋತಿಯನ್ನು ಜಾಗ್ರತಗೊಳಿಸಲು ಸ್ವಲ್ಪ ಪ್ರೋತ್ಸಾಹ ಸಾಕು. ಗುರೂಪದೇಶವೇ ಈ ಜಾಗ್ರತಿಗೆ ಕಾರಣ. ಶ್ರೀ ರಾಮಕೃಷ್ಣರು ಅಂತಹವರನ್ನು "ಒಣಗಿದ ಸೌದೆ" ಎಂದು ಕರೆಯುತ್ತಿದ್ದರು. ಸ್ವಲ್ಪ ಊದಿದ ಕೂಡಲೇ ಅದು ದೊಡ್ಡ ಉರಿಯಾಗಿ ಹತ್ತಿಕೊಳ್ಳುವುದು. ಬೇಗ ಹತ್ತಿಕೊಳ್ಳದೇ ಇರುವುದನ್ನು, "ಹಸಿಸೌದೆ" ಎನ್ನುತ್ತಿದ್ದರು. ಇಂತಹವರಿಗೆ ಗುರು ಹೆಚ್ಚು ತೊಂದರೆ ವಹಿಸಿಕೊಳ್ಳಬೇಕು. ಇಂತವರಿಗೆ ಗುರು ಊದಿ ಊದಿ ಸಾಕಾಗುವನು; ಆದರೂ ಜಾಗ್ರತರಾಗುವ ಚಿಹ್ನೆಯೇ ತೋರುವುದಿಲ್ಲ. ಇವರು ತಾವು ಎಷ್ಟು ಇಷ್ಟಪಟ್ಟರೂ ಬಹುಕಾಲ ಕಷ್ಟಪಡಬೇಕು. ಸತ್ಯಸಾಕ್ಷಾತ್ಕಾರಕ್ಕೆ ಅನೇಕ ಜನ್ಮಗಳು ಬೇಕಾಗಬಹುದು.

೨೬೫. ಪ್ರತಿಯೊಬ್ಬರೂ ತಮ್ಮ ಪೂರ್ವ ಜನ್ಮದ ಕರ್ಮ ಫಲವನ್ನು ಅನುಭವಿಸಲೇ ಬೇಕು. ನಾವು ಸುಖದುಃಖಗಳ ಅನುಭವವನ್ನು ಪೂರ್ಣ ಪಡೆದು ಅದರ ಪಾಠವನ್ನು ಕಲಿಯುವವರೆಗೆ ನಮಗೆ ಮುಕ್ತಿ ಇಲ್ಲ. ಯಾರು ಅವತಾರ ಪುರುಷರಲ್ಲಿ, ದೇವರಿಂದ ವಿಶೇಷ ಅಧಿಕಾರ ಪಡೆದು ಬಂದ ಒಬ್ಬ ನಿರಂತರ ಪರಿಪೂರ್ಣಾತ್ಮನಲ್ಲಿ ಶರಣು ಹೊಂದುವರೋ ಅವರಿಗೆ ಆ ಮನುಷ್ಯನ ಕೃಪೆಯಿಂದ ಅಡಗಿದ್ದ ಅನೇಕ ಜನ್ಮಗಳಲ್ಲಿ ಕಳೆಯ ಬೇಕಾಗಿದ್ದ ಫಲಾಪೇಕ್ಷೆಯ ಪ್ರವೃತ್ತಿ ಎಲ್ಲಾ ಈ ಜನ್ಮದಲ್ಲೇ ತೀರಿ ಹೋಗುವುವು.

೨೬೬. ಸಾಧಾರಣವಾಗಿ ಈ ಜಗತ್ತಿನಲ್ಲಿ ಯಾರು ಸತ್ಯ ಪಥದಲ್ಲಿ

ನಡೆಯುತ್ತಿರುವರೋ ಅವರಿಗೆ ಎಣೆಯಿಲ್ಲದ ದುಃಖ ಕಷ್ಟಗಳು ಪ್ರಾಪ್ತ ವಾಗುವುವು. ತಪ್ಪು ಹಾದಿಯಲ್ಲಿ ನಡೆಯುತ್ತಾ ದುರ್ಗುಣಿಗಳಾಗಿರುವವರು ಸುಖಸಂತೋಷದಿಂದಿರುವುದು ಕಾಣಬರುತ್ತದೆ. ಏಕೆಂದರೆ ಇವ ರಲ್ಲಿ ಇಂದ್ರಿಯಲಾಲಸೆ ತೀವ್ರವಾಗಿದ್ದು ಅದೇ ಅವರ ಬದುಕಿನ ಆದಿ ಅಂತ್ಯವಾಗಿರುವುದು. ತಾವಿಚ್ಛಿಸುವ ವಸ್ತುವನ್ನು ಹೇಗೆ ಪಡೆದರೂ ಆಯಿತು; ತಾವೇ ಬಹು ಬುದ್ಧಿಶಾಲಿಗಳು, ಸುಖಿಗಳೆಂದು ಭಾವಿಸುವರು. ತಿಪ್ಪೆಯಲ್ಲಿ ವಾಸಿಸುವ ಹುಳುವಿಗೆ ತಿಪ್ಪೆಯಲ್ಲೇ ಸುಖ, ಅಲ್ಲೇ ಅದು ಪುಷ್ಟಿಗೊಳ್ಳುವುದು. ಈ ಮನುಷ್ಯರು ಎಷ್ಟು ಮೂರ್ಖರು ಭ್ರಾಂತರು ಎಂದರೆ ಅವರು ಒಮ್ಮೆಯಾದರೂ ತಾವು ಈ ಜನ್ಮದ ದುಷ್ಕೃತ್ಯಗಳಿಗಾಗಿ ಮುಂದಿನ ಜನ್ಮದಲ್ಲಿ ಭಯಂಕರ ನೋವು, ಸಂಕಟಕ್ಕೆ ಈಡಾಗಬಹುದೆಂದು ಯೋಚಿಸುವುದಿಲ್ಲ. ಯಾರಿಗೆ ಗೊತ್ತು ಅವರ ಪಶುಸ್ವಭಾವಕ್ಕೆ ಅವರು ಮುಂದಿನ ಜನ್ಮದಲ್ಲಿ ಇನ್ನೂ ಕೀಳಾದ ಪ್ರಾಣಿಯ ಶರೀರ ಹೊಂದಬೇಕಾಗ ಬಹುದು; ಇದನ್ನು ಯೋಚಿಸಿದರೆ ಯಾರು ತೀವ್ರ ಅಜ್ಞಾನದಲ್ಲಿ ಮುಳು ಗಿರುವರೋ ಯಾರಿಗೆ ಚಿತ್ತ ಸ್ವಲ್ಪವೂ ಅಂಜುವುದಿಲ್ಲವೋ ಅಂತಹವರು ಕೇವಲ ಮಾನವ ದೇಹಧಾರಣೆ ಮಾಡಿದ ಪಶುಗಳು.

೨೬೭. ಯಾರು ಸ್ವಾರ್ಥ ಚಿಂತನೆಯಿಂದ ಕುರುಡಾಗಿರುವರೋ, ಇಂದ್ರಿಯ ದಾಸರಾಗಿರುವರೋ, ದುರ್ಮಾರ್ಗದಿಂದ ಗಳಿಸಿದ ಹಣದ ಅಮಲಿನಲ್ಲಿ ಹುಚ್ಚಾಗಿರುವರೋ ಅವರು ಹೊರಗೆ ನೋಡಲು ಎಷ್ಟು ಹಸ ನ್ಮುಖಿಗಳಾಗಿ ಚಟುವಟಿಕೆಯಿಂದಿದ್ದರೂ ಅವರ ಹೃದಯದಲ್ಲಿ ಸುಖಶಾಂತಿ ಇದೆಯೆಂದು ಒಂದು ನಿಮಿಷವೂ ಎಣಿಸಬೇಡ. ಅದು ಇರುವವರೆಗೆ ಪ್ರಾಪಂಚಿಕ ಭೋಗ ಆನಂದದಾಯಕವಾಗಿರುವುದು. ಅದೇ ಅನಂತರ ದುಃಖ ಸಂಕಟಗಳನ್ನೂ ಕೊಡುವ ಶೂಲಪ್ರಾಯವಾಗುವುದು. ಸ್ವಾರ್ಥ ದಲ್ಲೇ ಮುಳುಗಿರುವ ಜೀವನ ಯಾವಾಗಲೂ ಭಯ, ಕಳವಳ, ನಿರಾಶೆಯ ಭಾರದಿಂದ ಕುಗ್ಗಿರುವುದು. ಅವರು ಕಡೆಗೆ ಮೃತ್ಯುವನ್ನಪೇಕ್ಷಿಸುವರು, ಅಥವಾ ಆತ್ಮಹತ್ಯ ಮಾಡಿಕೊಳ್ಳುವರು. ನಿಜವಾಗಿ ಅವರು ಕನಿಕರಕ್ಕೆ ಪಾತ್ರರು!

೨೬೮. ಚಿತ್ತ, ಒಳ್ಳೆ ಭವ್ಯವಾದ ಆಲೋಚನೆ, ಪವಿತ್ರಸಂಗ, ಸತ್ಕರ್ಮ, ಇವುಗಳಿಂದ ಪರಿಶುದ್ಧವಾಗುವುದು. ಆಗ ಅದು ಶಾಂತ ವಾಗಿ ಏಕಾಗ್ರವಾಗುವುದು. ಕೊಳಕಾದ ಕನ್ನಡಿಯಲ್ಲಿ ಪ್ರತಿಬಿಂಬ ಹೇಗೆ

ಕಾಣುವುದಿಲ್ಲವೋ ಹಾಗೆ ಮನಸ್ಸು ಅಪವಿತ್ರವಾಗಿದ್ದರೆ ದೈವೀ ಆಲೋಚನೆ ಭಾವನೆಯನ್ನು ಗ್ರಹಿಸಲಾಗುವುದಿಲ್ಲ. ಇದಕ್ಕೇ ಸಾಧನೆ ಪ್ರಾರ್ಥನೆ ಆವಶ್ಯಕ. ಆದಿಯಲ್ಲಿ ಮನಸ್ಸು ಇಚ್ಛಿಸದಿದ್ದರೂ ಬಲಾತ್ಕಾರವಾಗಿ ಇದನ್ನು ಮಾಡಬೇಕು. ಸಾಧನೆ ಮಾಡುತ್ತಾ ಹೋದ ಹಾಗೆಲ್ಲಾ ಅದರಲ್ಲಿ ಅಭಿರುಚಿ ಹುಟ್ಟಿ ಅವುಗಳನ್ನು ಪ್ರೀತಿಸತೊಡಗುವೆ. ರೋಗಿ ಔಷಧಿಯನ್ನು ಸೇವಿಸಲು ಇಚ್ಛಿಸದೇ ಇದ್ದರೆ ಆತನನ್ನು ಒಡಂಬಡಿಸಬೇಕು ಅಥವಾ ಬಲಾತ್ಕಾರವಾಗಿ ಕುಡಿಸಬೇಕು. ಆದರೆ ಔಷಧಿಯನ್ನು ಬಾಯೊಳಕ್ಕೆ ತುರಿಕಿದ ಮೇಲೂ ಅದನ್ನು ಉಗುಳಿಬಿಡುವಂಥಾ ರೋಗಿಗಳೂ ಇರುವರು. ಅಂತಹ ರೋಗ ವಾಸಿಯಾಗುವ ಬಗೆ ಹೇಗೆ?

೨೬೯. ನೀನು ಸಾಧನೆ ಮಾಡುತ್ತಾ ಹೋದರೆ ದೇವರ ಕೃಪೆ ನಿನ್ನ ಮೇಲಿರುವುದನ್ನು ನಿನ್ನ ಹೃದಯದಲ್ಲಿ ಆತನ ಸಾನ್ನಿಧ್ಯವನ್ನು ಅರಿಯುವೆ. ಅವನು, ನಿನಗೆ ಅನೇಕ ಬಗೆಯಲ್ಲಿ ಸಹಾಯ ಮಾಡುತ್ತಿರುವನು, ತಾನು ಹಿನ್ನೆಲೆಯಲ್ಲಿಯೇ ಇದ್ದು ಸಾಕ್ಷಾತ್ಕಾರಕ್ಕೆ ಬೇಕಾಗಿರುವುದನ್ನೆಲ್ಲಾ ಹೇಗೆ ಒದಗಿಸುತ್ತಾನೆ ಎಂಬುದು ನಿನಗೇ ಗೊತ್ತಾಗುವುದು. ಅವನು ಮನಸ್ಸನ್ನು ತನ್ನ ಕಡೆಗೆ ಸೆಳೆಯದಿದ್ದಲ್ಲಿ ಮನಸ್ಸು ತಾನೇ ಎಂದಾದರೂ ಹೋಗುವುದೇನು? ಯಾರ ಹೃದಯ ಕೇವಲ ಆತನು ಮಾತ್ರ ಬೇಕೆಂದು ಇಚ್ಛಿಸುವುದೋ, ಆತನಿಗಾಗಿ ಸಕಲವನ್ನೂ ತ್ಯಜಿಸುವುದೊ, ಯಾರ ಆತ್ಮ ಆತನ ದರ್ಶನಕ್ಕಾಗಿ ಹಂಬಲಿಸುವುದೋ, ಮತ್ತಾವುದರಿಂದಲೂ ಅದಕ್ಕೆ ತೃಪ್ತಿಯಾಗುವುದಿಲ್ಲವೋ ಅಂತಹ ಹೃದಯದಲ್ಲಿ ಭಗವಂತ ಪ್ರೇರಣೆಯನ್ನುಂಟು ಮಾಡುವನು. ಇದನ್ನೇ ಪ್ರೇಮೋನ್ಮಾದವೆನ್ನುವರು. ವ್ಯಾಕುಲತೆಯೇ ಅವನ ನಿಜ ಸ್ವರೂಪ. ವ್ಯಾಕುಲತೆ ಅವನ ಅಂತಃಪುರಕ್ಕೆ ಬೀಗದ ಕೈ.

೨೭೦. ಸ್ವಲ್ಪಕಾಲ ಜಪಧ್ಯಾನಮಾಡಿದ ಮೇಲೆ, "ನಾನು ಇಂದು ಇಷ್ಟು ಸಾಧನೆಮಾಡಿರುವೆ ಆದರೆ ಏನೂ ದೊರಕಲಿಲ್ಲ" ಎಂದು ಯೋಚಿಸಬೇಡ. ಬಹುಕಾಲದ ಸಾಧನೆಯಿಂದಲೂ ಏನೂ ಪರಿಣಾಮವಾಗದಿದ್ದಲ್ಲಿ ನಿನ್ನಲ್ಲಿ ಯಾವುದೋ ಒಂದು ನ್ಯೂನತೆ ಇರಬೇಕು; ಜಾಡಿಯಲ್ಲಿರುವ ನೀರು ಬಿರುಕಿನಿಂದ ಹೊರಟುಹೋಗುವಂತೆ ನಿನ್ನಲ್ಲಿರುವ ಯಾವುದೋ ಒಂದು ಬಿರುಕಿನಿಂದ ನಿನ್ನ ಸಾಧನೆ ವ್ಯರ್ಥವಾಗುತ್ತಿದೆ ಎಂದು ತಿಳಿ. ನಿನ್ನಲ್ಲಿಯೇ ಅದನ್ನು ಹುಡುಕಿ ಮುಚ್ಚು. ಆಗ ನಿನ್ನ ಹೂಜಿ ತುಂಬುವುದು. "ನಾನು ಎಷ್ಟೊಂದು ಕಷ್ಟಪಡುತ್ತಿರುವೆ, ಎಷ್ಟೊಂದು

ಸಾಧನೆ ಮಾಡುತ್ತಿರುವೆ"– ಈ ಭಾವನೆ ಕೇವಲ ಭ್ರಮೆ, ಅಹಂಭಾವದ ಚಿಹ್ನೆ! ಅದಕ್ಕೆ ಬದಲು ನಾನೆಷ್ಟು ಪ್ರಯಾಸಪಟ್ಟರೂ, "ಹೇ ತಂದೆ, ಅದೆಲ್ಲಾ ನಿನ್ನ ಸಾಕ್ಷಾತ್ಕಾರಕ್ಕೆ ಅಣುಮಾತ್ರ, ಕೇವಲ ಅಲ್ಪ. ನಿನ್ನನ್ನು ಕಾಣಲು ತಕ್ಕ ಅರ್ಹತೆ ನನಗೆಲ್ಲಿದೆ? ನೀನು ಅನುಗ್ರಹಿಸಿದರೆ ಮಾತ್ರ, ಕೇವಲ ನಿನ್ನ ದಯೆಯಿಂದ ಮಾತ್ರ ನಿನ್ನನ್ನು ನೋಡಬಹುದು. ನನಗಿನ್ನಾವ ಮಾರ್ಗವೂ ಇಲ್ಲ. ನಾನು ನಿನ್ನನ್ನೇ ಮರೆಹೊಕ್ಕಿರುವೆ. ನಿನ್ನ ಕರುಣೆಯಿಂದ ನನ್ನ ಮೇಲೆ ದಯೆತೋರು. ಕಾಪಾಡು ಓ, ತಂದೆ ಈ ಬದುಕಿನ ದಾಸ್ಯದಿಂದ ನನ್ನನ್ನು ಉದ್ಧಾರ ಮಾಡು" ಎಂದು ಪ್ರಾರ್ಥಿಸು.

೨೭೧. ಧ್ಯಾನ ಮತ್ತು ಜಪವನ್ನು ಎಲ್ಲಾ ಕಾಲದಲ್ಲಿ, ಎಲ್ಲಾ ಸ್ಥಳದಲ್ಲಿಯೂ ಎಲ್ಲಾ ಸ್ಥಿತಿಯಲ್ಲಿಯೂ ಮಾಡಬಹುದು. ಧ್ಯಾನಸಿದ್ಧರಿಗೆ ಚಿತ್ತೈಕಾಗ್ರತೆ ಸಂತೆಯ ಗದ್ದಲದಲ್ಲಿ ಕೂಡ ಸಾಧ್ಯ. ಯಾವುದೂ ಅವರ ಏಕಾಗ್ರತೆಗೆ ಭಂಗತರುವುದಿಲ್ಲ. ಅವರು ಸುಖದುಃಖ, ಸಿರಿ ದಾರಿದ್ರ್ಯ, ಹೊಗಳಿಕೆ ತೆಗಳಿಕೆ ಎಲ್ಲಕ್ಕೂ ಒಂದೇ ಸಮನಾಗಿರುವರು. ಇಂತಹವರನ್ನೇ ಗೀತೆಯಲ್ಲಿ "ಸ್ಥಿತಧೀ" ಅಥವಾ ಸ್ಥಿತಪ್ರಜ್ಞರು ಬ್ರಹ್ಮಜ್ಞಾನಿಗಳೆಂದು ಕರೆಯುವುದು.

೨೭೨. ಹಾಗೆಯೇ ಜಪಸಿದ್ಧರು ತಮ್ಮ ಪ್ರತಿ ಶ್ವಾಸೋಚ್ಛ್ವಾಸದಲ್ಲಿಯೂ ಜಪವನ್ನು ಸಹಜವಾಗಿ ಮಾಡುವರು. ಅದನ್ನು ಮಾಡಲು ಅವರಿಗೆ ಪ್ರಯಾಸವೇನೂ ಆಗುವುದಿಲ್ಲ. ಅದಕ್ಕೆ "ಅಜಪ ಜಪ" ಅಥವಾ ತನ್ನಷ್ಟಕ್ಕೆ ತಾನೇ ಆಗುವ ಮಂತ್ರ ಪುನಶ್ಚರಣೆ ಎನ್ನುವರು. ಅಭ್ಯಾಸಬಲದಿಂದ ಇವರಿಗೆ ಜಪದಲ್ಲಿ ಮನಸ್ಸು ನೆಲಸುವುದು. ಬಾಹ್ಯ ವ್ಯವಹಾರ, ಮಾತು ಕತೆಯಲ್ಲಿ ಎಷ್ಟೇ ತೊಡಗಿದ್ದರೂ ಇಷ್ಟ ದೇವತಾ ಮಂತ್ರಜಪವನ್ನು ಅಂತರ್ಯದಲ್ಲಿ ಸತತವಾಗಿ ಮಾಡುತ್ತಿರುವರು. ಇಚ್ಛೆಯಾದರೆ ಜಪಮಾಲೆ ಉಪಯೋಗಿಸುತ್ತಲೇ ಇತರರಿಗೆ ಉಪದೇಶ ಮಾಡುವ ಕಾರ್ಯದಲ್ಲೂ ತೊಡಗುವರು. ತಮ್ಮ ಮಹಾತ್ಮೆಯ ಪ್ರದರ್ಶನಕ್ಕೆ ವ್ಯಾಪಾರ ಮುಂತಾದುವನ್ನು ಮಾಡುವಾಗಲೂ ಜಪಮಾಲೆಯನ್ನೆಣಿಸುವ ಠಕ್ಕುಗಾರ ವೈಷ್ಣವರಂತಲ್ಲ. ಒಬ್ಬ ಮಹಾಪುರುಷ ಜಪ ಅಥವಾ ಧ್ಯಾನದಿಂದ ಪಡೆದ ಸ್ಥಿತಿಗಳೆರಡೂ ಒಂದೇ. ಎರಡೂ ದೀರ್ಘಕಾಲದ ತೀವ್ರ ಸಾಧನೆ, ಚಿತ್ತೈಕಾಗ್ರತೆ, ಆಧ್ಯಾತ್ಮಿಕ ಪರಿಶ್ರಮ ಮತ್ತು ಪ್ರಾರ್ಥನೆಯ ಅದ್ಭುತ ಪರಿಣಾಮ. ಸಿದ್ಧರಿಗೆ ಮುಕ್ತಿ ತಮ್ಮ ವಶದಲ್ಲಿದೆ.

೨೭೩. ಪ್ರಾಣಾಯಾಮವೆಂದರೆ ಒಂದು ಪ್ರತ್ಯೇಕ ನಿಯಮದ ಪ್ರಕಾರ ಶ್ವಾಸ ಚಲನೆಯನ್ನು ಒಂದೇ ರೀತಿಯಾಗಿ ಶಾಂತಮಾಡುವುದು, ಎಂದರೆ ಪ್ರಾಣ ಅಥವಾ ಮಾನಸಿಕ ಶಕ್ತಿಯನ್ನು ಹಿಡಿತದಲ್ಲಿಟ್ಟು ಕೊಳ್ಳುವುದು. ಪ್ರಾಣಾಯಾಮವನ್ನು ಬಹುಕಾಲ ಕ್ರಮವಾಗಿ ಮಾಡಿದರೆ ಮನಸ್ಸು ಶಾಂತವಾಗುವುದು. ಅದನ್ನು ಯಾವ ವಸ್ತುವಿನ ಮೇಲೆ ಕೇಂದ್ರೀಕರಿಸಿದರೂ ಏಕಾಗ್ರವಾಗುವುದು, ವಸ್ತುವಿನ ಸಂಪೂರ್ಣ ಜ್ಞಾನ ಲಾಭವಾಗುವುದು. ಇದೇ ಪ್ರಾಣಾಯಾಮದ ಆಧ್ಯಾತ್ಮಿಕ ಪರಿಣಾಮ. ದೇಹ ಮತ್ತು ಮನಸ್ಸಿನ ಮೇಲೆ ಇದರಿಂದಾಗುವ ಪರಿಣಾಮವೂ ಅದ್ಭುತವಾಗಿದೆ. ಅದು ಶರೀರವನ್ನು ಆರೋಗ್ಯವಾಗಿ ದೃಢಕಾಯವಾಗಿ ಕಾಂತಿಯಿಂದ ತುಂಬುವಂತೆ ಮಾಡುವುದು. ಮನಸ್ಸೂ ಹಸನ್ಮುಖವಾಗಿ, ಶಾಂತವಾಗಿ ತಾಳ್ಮೆಹೊಂದಿ ದೃಢವಾಗುವುದು. ಯಾರೂ ಎದುರಿಸಲಾಗದ ಇಚ್ಛಾಶಕ್ತಿ, ವ್ಯಕ್ತಿಯ ಆಕರ್ಷಣಾಶಕ್ತಿ ಉತ್ಪನ್ನವಾಗುವುದು. ಮನಸ್ಸು ಯಾವ ಕೆಲಸದಲ್ಲಿ ತೊಡಗಿದರೂ ಅದು ಈಡೇರುತ್ತದೆ. ಪ್ರಾಣಾಯಾಮದಿಂದಲೇ ಯೋಗಿಗಳು ದೀರ್ಘಾಯಸ್ಸನ್ನೂ ಪಡೆಯುವರು. ಆದರೆ ಆ ಸಿದ್ಧಿಗಳು ಪರಮಾತ್ಮ ಪ್ರಾಪ್ತಿಗೆ ವಿಘ್ನಗಳು.

೨೭೪. ಜಗತ್ತಿನಲ್ಲಿ ಯಾವ ಪ್ರಾಣಿಗಳು ನಿಧಾನವಾಗಿ ಉಸಿರಾಡುವವೋ ಅವು ದೀರ್ಘಕಾಲ ಬದುಕುವುವು. ಬೇಗ ಬೇಗ ಉಸಿರಾಡುವ ಪ್ರಾಣಿಗಳು ಸ್ವಲ್ಪ ಕಾಲ ಜೀವಿಸುವುವು. ಹಿಂದಿನ ಕಾಲದಲ್ಲಿ ಮನುಷ್ಯನ ಆಯುಸ್ಸು ನೂರು ವರುಷಗಳು. ಏಕೆಂದರೆ ಮನುಷ್ಯ ಪ್ರಕೃತಿಯೊಡನೆ ಸೌಹಾರ್ದದಿಂದ ಜೀವಿಸುತ್ತಿದ್ದನು. ವೇದಗಳ ಪ್ರಕಾರ, "ಮಾನವನ ಆಯುಸ್ಸು ನೂರು ವರುಷ"

ಸ್ವರೋದಯ ಯೋಗ ಶಾಸ್ತ್ರದ ಪ್ರಕಾರ :—

| ಜೀವಿಗಳು | ಒಂದು ನಿಮಿಷಕ್ಕೆ ಶ್ವಾಸ | | ಆಯುಸ್ಸು | |
|---|---|---|---|---|
| ಮನುಷ್ಯ (ಪೂರ್ವಕಾಲದಲ್ಲಿ) | ೧೨–೧೩ | ಬಾರಿ | ೧೦೦ | ವರುಷ |
| ಆನೆ | ೧೧–೧೨ | ,, | ೧೦೦ | ,, |
| ಹಾವು | ೭–೮ | ,, | ೧೩೦ | ,, |
| ಮೊಸಳೆ | ೪–೫ | ,, | ೧೫೦–೧೫೫ | ,, |
| ಕೋತಿ | ೩೧–೩೨ | ,, | ೩೦–೩೧ | ,, |
| ಮೊಲ | ೩೮–೩೯ | ,, | ೮ | ,, |

೨೭೫. ಬಲಾತ್ಕಾರದಿಂದ ಉಸಿರಾಡಬಾರದು. ಯೋಗ ಶಾಸ್ತ್ರ ಪ್ರಕಾರ ನಾವು ಉಸಿರು ಬಿಡುವುದು ಎಷ್ಟು ಮೆಲ್ಲಗಿರಬೇಕೆಂದರೆ ಅಂಗೈ ಮೇಲೆ ಇರುವ ಹಿಟ್ಟು ಕೂಡ ಹಾರಿ ಹೋಗಬಾರದು. ಅಷ್ಟು ಮೆಲ್ಲಗೆ ಉಸಿರಾಡಬೇಕು.

೨೭೬. ಯಾರು ಸರಿಯಾದ ಶಿಕ್ಷೆ, ದೀಕ್ಷೆ, ಸಾಧನ, ಭಜನೆ ಇಲ್ಲದೆ ಮನಸ್ಸನ್ನು ಶೂನ್ಯ ಮಾಡಲೆತ್ನಿಸುವರೋ ಅವರು ಇಂತಹ ಸ್ಥಿತಿ ಯನ್ನೇ ಸಂಪೂರ್ಣತೆ ಎಂದು ಭಾವಿಸುವರು. ಮನಸ್ಸನ್ನು ಅವಲಂಬನ ಹೀನ ಮಾಡಿದರೆ ನಿರ್ಬೀಜ ಸಮಾಧಿ ದೊರಕುವುದೆಂದು ತಿಳಿಯುವರು. ಅವರು ತಾಮಸಿಕ ಸ್ಥಿತಿಗೆ ಇಳಿಯುವರು. ಜಡವಾಗಿ ದುರ್ಬಲವಾಗು ವರು. ಅವರ ಮೆದಳು ಶೂನ್ಯವಾಗಿ ಗಹನ ಸತ್ಯಗಳೇನನ್ನೂ ಗ್ರಹಿಸ ಲಾರದು.

೨೭೭. ಶಿವ ಸಂಹಿತೆಯ ಪ್ರಕಾರ ಯೋಗದಲ್ಲಿ ಜಯಶಾಲಿಯಾಗ ಬೇಕಾದರೆ ಪ್ರಥಮ ನಿಯಮವೇ, "ನಾನು ಖಂಡಿತ ಜಯ ಶಾಲಿಯಾಗು ತ್ತೇನೆ" ಎಂಬ ನಂಬಿಕೆ. ಎರಡನೆಯದೇ ಶ್ರದ್ಧಾ ಪೂರ್ವಕ ಸಾಧನೆ, ಮೂರನೆಯದು ಗುರುಪೂಜೆ, ನಾಲ್ಕನೆಯದು ಸಮಚಿತ್ತ, ಐದು ಇಂದ್ರಿಯ ನಿಗ್ರಹ, ಆರನೆಯದು ಮಿತಾಹಾರ, ಏಳನೆಯದೇ ಏನೂ ಇಲ್ಲ, ಎಂದರೆ ಈ ಆರು ನಿಯಮಗಳನ್ನೂ ಸರಿಯಾಗಿ ನೆರವೇರಿಸಿದರೆ ಮತ್ತಾವುದರ ಆವಶ್ಯ ಕತೆಯೂ ಇಲ್ಲ. ಜಯ ನಿಸ್ಸಂದೇಹವಾಗಿ ಲಭಿಸುವುದು. ಇದು ಮುಕ್ತಿ ಗಾಗಿ ಹಾತೊರೆಯುವ ಎಲ್ಲಾ ಬಗೆಯ ಸಾಧಕರಿಗೂ ವಿನಾಯಿತಿಯಿಲ್ಲದೆ ಅನ್ವಯಿಸುವುದು.

೨೭೮. ಮನೋ ನಿಗ್ರಹದಷ್ಟು ಕಷ್ಟವಾದ ಕೆಲಸ ಈ ಪ್ರಪಂಚ ದಲ್ಲಿ ಮತ್ತಾವುದೂ ಇಲ್ಲ. ಶ್ರೀರಾಮ ಹನುಮಂತನಿಗೆ "ಒಬ್ಬನು ಏಳು ಸಮುದ್ರಗಳನ್ನು ಈಜಿ ದಾಟಬಹುದು, ಗಾಳಿಯನ್ನೆಲ್ಲಾ ನುಂಗಬಹುದು. ಪರ್ವತಗಳನ್ನು ಚೆಂಡಾಡಬಹುದು. ಆದರೆ ಚಂಚಲ ಚಿತ್ತವನ್ನು ಹಿಡಿತ ದಲ್ಲಿಟ್ಟುಕೊಳ್ಳುವುದು ಇವೆಲ್ಲಕ್ಕಿಂತ ಕಷ್ಟ" ಎಂದನು. ಇದು ಸತ್ಯವಾದರೂ ಭಯ, ನಿರಾಶೆ, ಹೊಂದಬೇಕಾಗಿಲ್ಲ. ಧೀರ ಸಾಧಕ ಪರಮಾತ್ಮನನ್ನು ನಂಬಿ ಧೀರ್ಘ ಪ್ರಯತ್ನ ಮತ್ತು ದೃಢ ನಿಶ್ಚಯಗಳಿಂದ ಹೃತ್ಪೂರ್ವಕ ಸಾಧನೆ ಮಾಡಿದರೆ ಆತನ ಕೃಪೆಯಿಂದ ಅಸಾಧ್ಯವಾದುದನ್ನು ಕೂಡ ಸಾಧಿಸ ಬಹುದು.

೨೭೯. ಸ್ವಾಮಿ ವಿವೇಕಾನಂದರು ಒಂದು ಸಂಸ್ಕೃತ ಪದ್ಯವನ್ನು ರಚಿಸಿ ಅದನ್ನು ಕಾಗದದಲ್ಲಿಟ್ಟು ಅಮೆರಿಕಾದಿಂದ ಮಠದ ಗುರು ಭಾಯಿಗಳಿಗೆ ಕಳುಹಿಸಿದರು. ಅದರ ಎರಡು ಶ್ಲೋಕಗಳನ್ನು ಇಲ್ಲಿ ಕೊಟ್ಟಿದೆ.

ಕುರ್ಮಸ್ತಾರಕಚರ್ವಣಂ ತ್ರಿಭುವನಮುತ್ಪಾಟಯಾಮೊ
ಬಲಾತ್ ।
ಕಿಂ ಭೋ ನ ವಿಜಾನಾಸ್ಯಾಸ್ಮಾನ್ ರಾಮಕೃಷ್ಣ ದಾಸಾವಯಂ ॥

ತಾರೆಗಳನ್ನು ಧೂಳಿ ಕಣಗಳನ್ನಾಗಿ ಮಾಡುವೆವು, ತ್ರಿಭುವನವನ್ನು ಬೇರು ಸಹಿತ ಕೀಳುವೆವು. ನಾವಾರು ಗೊತ್ತಿಲ್ಲವೇ? ಶ್ರೀ ರಾಮಕೃಷ್ಣರ ದಾಸರು !

ಇಂತಹ ಪ್ರಚಂಡ ಆತ್ಮವಿಶ್ವಾಸ ಮತ್ತು ಗುರುಭಕ್ತಿ ಇದ್ದರೆ ಎಂತಹ ಅಸಾಧ್ಯವಾದುದು ಕೂಡ ಸಾಧ್ಯವಾಗುವುದು. ಸ್ವಾಮಿ ವಿವೇಕಾನಂದರಿಗೆ ಇವು ಇದ್ದುದರಿಂದ ಅವರು ಪ್ರಪಂಚವನ್ನೇ ಗೆದ್ದರು. ಜೀಸಸ್ ಕ್ರೈಸ್ತನು "ಒಂದು ಸಾಸಿವೆ ಕಾಳಿನಷ್ಟು ಶ್ರದ್ಧೆ ನಿಮ್ಮಲ್ಲಿದ್ದರೂ ನೀವು ಈ ಪರ್ವತವನ್ನು ಆ ಸ್ಥಳಕ್ಕೆ ಹೋಗು ಎಂದರೆ ಅದು ಹೋಗೇ ಹೋಗುತ್ತದೆ! ಯಾವುದೂ ನಿಮಗೆ ಅಸಾಧ್ಯವೆನಿಸುವುದಿಲ್ಲ" ಎನ್ನುವನು. ಶ್ರೀ ರಾಮಕೃಷ್ಣರು ಅನೇಕ ಬಗೆಯ ಆಧ್ಯಾತ್ಮಿಕ ಅನುಭವ ಮತ್ತು ದೇವರ ದರ್ಶನವಾದ ಮೇಲೆ ಮಾತೆಯನ್ನು ಪರೀಕ್ಷಿಸಲೋಸುಗ, "ತಾಯಿ ನನ್ನ ಆಧ್ಯಾತ್ಮ ಅನುಭವಗಳೆಲ್ಲ ಸತ್ಯವಾಗಿದ್ದರೆ ಇಲ್ಲಿರುವ ಈ ದೊಡ್ಡ ಕಲ್ಲುಗುಂಡು ಮೂರು ಬಾರಿ ಹಾರಲಿ," ಎಂದರಂತೆ. ಅದರಂತೆಯೇ ಅವರು ಹಾಗೆ ಹೇಳಿದ ಕೂಡಲೇ ಹಾರಿತಂತೆ. ಇವು ಕೇವಲ ನಿರರ್ಥಕವಾದ ಮಾತುಗಳೇ?

೨೮೦. ನಮ್ಮ ಶರೀರದಲ್ಲಿ ಆರು ಪದ್ಮಗಳು ನಿಜವಾಗಿಯೂ ಇವೆಯೇ? ಈ ಪ್ರಶ್ನೆ ಹಾಕಿದಾಗ ಸ್ವಾಮಿ ವಿವೇಕಾನಂದರು, "ಯೋಗಿಗಳು ವಿವರಿಸಿರುವ ಆರು ಪದ್ಮಗಳು ನಿಜವಾಗಿ ಭೌತಿಕ ರೂಪದಲ್ಲಿ ಮಾನವ ಶರೀರದಲ್ಲಿಲ್ಲ. ಆದರೆ ಯೋಗಶಕ್ತಿಯ ಮೂಲಕ ಇವುಗಳು ಸ್ಥೂಲರೂಪಕ್ಕೆ ಬಂದು ಅವರಿಗೆ ಕಾಣಿಸಿಕೊಳ್ಳುವುವು ಎಂದು ಶ್ರೀ ರಾಮಕೃಷ್ಣರು ಹೇಳುತ್ತಿದ್ದರು" ಎಂದು ಉತ್ತರ ಕೊಟ್ಟರು.

೨೮೧. ಸತ್ತ್ವ ರಜಸ್ಸು ತಮೋಗುಣಗಳ ಪ್ರಕಾರ ಕರ್ಮವನ್ನು ಮೂರು ಬಗೆ ವಿಂಗಡಿಸಬಹುದು. ಒಳ್ಳೆಯ ಮತ್ತು ಶ್ರೇಯಸ್ಕರವಾದ

ಕೆಲಸಗಳು, ಸಾತ್ತ್ವಿಕ. ಕೆಟ್ಟ ಮತ್ತು ಹಾನಿಕರವಾದ ಕೆಲಸಗಳು ತಾಮಸಿಕ. ಇವುಗಳ ಮಿಶ್ರವೇ ರಾಜಸಿಕ. ನಮ್ಮ ಚಿತ್ತದಮೇಲೆ ಅಥವಾ ಸೂಕ್ಷ್ಮ ದೇಹದ ಮೇಲೆ ಕರ್ಮಗಳಿಂದ ಆದ ವೃತ್ತಿಯೇ ಸಂಸ್ಕಾರಗಳು. ಇದನ್ನು ನಾವು ಕರ್ಮ, ಅದೃಷ್ಟ, ಅಗೋಚರ ಧರ್ಮ ಅಧರ್ಮ ಪಾಪ ಪುಣ್ಯ ಎನ್ನುತ್ತೇವೆ. ಕಾರಣವಿಲ್ಲದೆ ಯಾವ ಪರಿಣಾಮವೂ ಆಗುವುದಿಲ್ಲ. ನಮ್ಮಲ್ಲಿ ಯಾವ ಒಳ್ಳೆಯ ಅಥವಾ ಕೆಟ್ಟ ಅಭಿರುಚಿ ಇದ್ದರೂ ಅವೆಲ್ಲಾ ನಮ್ಮ ಹಿಂದಿನ ಸಂಸ್ಕಾರಗಳ ಪ್ರೇರೇಪಣೆ. ಅವುಗಳಲ್ಲಿ ಯಾವುದಕ್ಕೆ ಯೋಗ್ಯ ವಾತಾವರಣ ಸಿಗುವುದೋ ಅಲ್ಲಿ ನೆಲಸಿ ಜಾಗ್ರತವಾಗುತ್ತವೆ. ಉಳಿದುವು, ಯೋಗ್ಯ ಸಮಯ ಬರುವವರೆಗೂ ಕಾಯುತ್ತಾ ಅಲ್ಲಿಯೇ ಶೇಖರವಾಗಿರುವುವು. ಸಮಯ ಬಂದ ಘಳಿಗೆಯೇ ಒಳ್ಳೆಯ ಅಥವಾ ಕೆಟ್ಟ ಪರಿಣಾಮವನ್ನುಂಟುಮಾಡುವುವು. ನಾವು ಮಾಡುವುದೆಲ್ಲಾ ಒಳ್ಳೆಯ ಮತ್ತು ಕೆಟ್ಟುದರ ಮಿಶ್ರಣ. ಆದ್ದರಿಂದಲೇ ನಾವು ಸುಖ ದುಃಖ ಮಿಶ್ರವಾದ ಫಲವನ್ನನುಭವಿಸುವೆವು. ನಾವು ಯಾವುದಾದರೊಂದು ವಸ್ತುವನ್ನು ಒಳ್ಳೆಯದು ಅಥವಾ ಕೆಟ್ಟದ್ದೆಂದು ಹೇಳಬೇಕಾದರೆ ಯಾವುದು ಪ್ರಧಾನವಾಗಿರುವುದೋ ಅದರಿಂದ ಕರೆಯುತ್ತೇವೆ.

೨೮೨. ಪ್ರತಿ ಕರ್ಮವೂ ಬಂಧನಕ್ಕೆ ಹೇತು. ಸುಖವಾಗಲಿ, ದುಃಖವಾಗಲಿ ಬಂಧನವೇ. ಇದನ್ನು ಮೀರಿಹೋದ ಹೊರತು ಮುಕ್ತಿಯಿಲ್ಲ. ಯಾರು ಇತರರಿಗಾಗಿ "ನಾನು" ಎಂಬ ಸ್ವಾರ್ಥತೆ ಕೊಂಚವೂ ಇಲ್ಲದೆ ಕೆಲಸ ಮಾಡುವರೋ, ಅಂತಹವರ ಕರ್ಮದಿಂದ ಬಂಧನವಿಲ್ಲ. ಏಕೆಂದರೆ ಅಲ್ಲಿ ಪ್ರತಿಫಲದಾಶೆ ಇಲ್ಲ. ಸ್ವಾರ್ಥ ಸಾಧನೆಗಾಗಿ, ಹೆಸರು ಕೀರ್ತಿಗಳಿಗಾಗಿ ಕೆಲಸ ಮಾಡುವುದಿಲ್ಲ. ಅವರ ಹೃದಯದಲ್ಲಿ ಪ್ರೇಮ ಚಿಮ್ಮುವುದು. ಅವರು ಎಲ್ಲಾ ಜೀವಿಗಳಲ್ಲೂ ದೇವರನ್ನು ಕಾಣುವರು. ಆತನ ಸೇವೆ ಎಂದು ತಿಳಿದು ಕೆಲಸಮಾಡುವರು. ಇದರ ಪರಿಣಾಮವಾಗಿ ಅವರ ಹಿಂದಿನ ಕರ್ಮ ಪರಿಣಾಮ ಸಂಸ್ಕಾರಗಳೆಲ್ಲಾ ನಾಶವಾಗುವುವು. ಮನಸ್ಸಿನ ಮೇಲೆ ಹೊಸ ಕರ್ಮದ ಬೀಜಗಳನ್ನು ಹೊಸ ಸಂಸ್ಕಾರಗಳ ರೂಪದಲ್ಲಿ ಬಿತ್ತುವುದಿಲ್ಲ. ಅವರು ಜನನ ಮರಣ ಬಂಧನದಿಂದಪಾರಾಗಿ ದೇಹನಾಶವಾದ ಮೇಲೆ ಮೋಕ್ಷ ಹೊಂದುವರು.

೨೮೩. ಭೋಗದಲ್ಲಿ ಸುಖವಿಲ್ಲ, ತ್ಯಾಗದಲ್ಲಿ ಮಾತ್ರ ನಿಜವಾದ ಸಂತೋಷವಿದೆ. ಯಾರು ನಿತ್ಯಾನಿತ್ಯ ವಸ್ತು ಜ್ಞಾನದಿಂದ ಅಥವಾ ಪದೇ

ಪದೇ ಉಂಟಾದ ನೋವಿನ ಅನುಭವದಿಂದ ಬುದ್ಧಿ ಕಲಿತು ಈ ಪ್ರಪಂಚ ನಶ್ವರ, ಅಂತ್ಯದಲ್ಲಿ ವ್ಯಥೆಗೆ ಕಾರಣವೆಂದು ಆ ಭೋಗೇಚ್ಛೆಯನ್ನು ತ್ಯಜಿಸಿ, ಎಲ್ಲವನ್ನೂ ಸಂತೋಷದಿಂದ ತ್ಯಾಗಮಾಡಿರುವನೋ ಅಂತಹವನು ಪರಮ ಸುಖಿ, ಅಮರತ್ವವನ್ನು ಪಡೆದವನು. ಸ್ವಾಮಿ ವಿವೇಕಾನಂದರು ಅವರ ಭಕ್ತಿ ಯೋಗದಲ್ಲಿ ತ್ಯಾಗವೇ ನಾಲ್ಕು ಬಗೆಯ ಯೋಗಗಳ ಜೀವಾಳ ವೆಂಬುದನ್ನು ತೋರಿಸಿದ್ದಾರೆ.

೨೮೪. ಕರ್ಮಯೋಗಿ ತಾನು ಮಾಡುವ ಕರ್ಮದ ಫಲವನ್ನೆಲ್ಲಾ ಸ್ವಲ್ಪವೂ ಆಸಕ್ತಿಯಿಲ್ಲದೆ ಪರಮಾತ್ಮನಿಗೆ ಅರ್ಪಿಸುವನು. ಏಕೆಂದರೆ ಅವನು "ದೇವರೊಬ್ಬನೇ ಕರ್ತ ನಾನು ಕರ್ತನಲ್ಲ" ಎಂದು ತಿಳಿದಿದ್ದಾನೆ. ರಾಜ ಯೋಗಿ, "ಪುರುಷನಿಗಾಗಿ ಪ್ರಕೃತಿ ಇದೆ, ಪುರುಷ ಪ್ರಕೃತಿಗಲ್ಲ" ಎಂದು ತಿಳಿದಿದ್ದಾನೆ. ಪುರುಷ ಆತ್ಮ, ಪ್ರಕೃತಿ ಜಡ. ಅವನು ಪ್ರಕೃತಿಯಿಂದ ಬೇರೆ. ಅದರ ಸಂಬಂಧ ತಾತ್ಕಾಲಿಕ, ಶಾಶ್ವತವಲ್ಲ. ಪುರುಷನು ಪ್ರಕೃತಿಯ ದಾಸನಲ್ಲ, ಅವನು ಯಜಮಾನ, ಪ್ರಕೃತಿ ಸೇವಕ. ಪ್ರಕೃತಿ ಕೇವಲ ಆತನ ಉದ್ದೇಶ ಸಾಧನೆಗಾಗಿಯೇ ಹುಟ್ಟಿದೆ. ಆಕೆಯ ಕೆಲಸ ಆತನನ್ನು ಅನೇಕ ಬಗೆಯ ಅನುಭವಗಳ ಮೂಲಕ ತೆಗೆದುಕೊಂಡುಹೋಗಿ ಅದರಿಂದ ಅವನು ತನ್ನ ನಿಜಸ್ವಭಾವವನ್ನರಿಯುವಂತೆ ಮಾಡುವುದು. ಆದ್ದರಿಂದ ರಾಜ ಯೋಗಿಯೂ ಪ್ರಕೃತಿಯೊಡನೆ ತನ್ನನ್ನು ಐಕ್ಯಗೊಳಿಸುವುದಿಲ್ಲ. ಪ್ರಕೃತಿಯ ಮೇಲಿನ ವ್ಯಾಮೋಹವನ್ನೆಲ್ಲಾ ಬಿಟ್ಟುಬಿಡುವನು.

೨೮೫. ಜ್ಞಾನಯೋಗಿಯ ತ್ಯಾಗ ಮಾತ್ರ ಇವೆಲ್ಲಕ್ಕಿಂತಲೂ ಹೆಚ್ಚು ಕಷ್ಟ. ಏಕೆಂದರೆ ಅವನು ಪ್ರಾರಂಭದಿಂದಲೂ ಈ ಭೂಮಂಡಲ, ಅದ ರೊಡನೆ ತನ್ನ ಸಂಬಂಧವನ್ನು ಮಿಥ್ಯೆ—ಮಾಯೆ ಜೀವನವನ್ನೆಲ್ಲಾ ಒಂದು ಸ್ವಪ್ನ ಎಂದು ಭಾವಿಸಬೇಕು. ಅವನ ಹಾದಿ, "ನೇತಿ, ನೇತಿ," ಇದಲ್ಲ ಇದಲ್ಲ.... ನಾನು ಇದಲ್ಲ ಅದೂ ಅಲ್ಲ, ನಾನು ನೋಡುವ, ಹೊಂದಿರುವ ಯಾವ ವಸ್ತುವೂ ಅಲ್ಲ, ನಾನು ದೇಹವಲ್ಲ, ಮನಸ್ಸಲ್ಲ, ಇಂದ್ರಿಯವೂ ಅಲ್ಲ. ನನಗೆ ಸುಖ, ದುಃಖ, ಹುಟ್ಟು, ಸಾವು, ಬಂಧನ, ಬಿಡುಗಡೆ, ಏನೂ ಇಲ್ಲ. ನಾನು ಅಖಂಡಬ್ರಹ್ಮ, ಪರಮಾತ್ಮ. ನಾನು ಸಚೇತನ, ನಿತ್ಯ ಶುದ್ಧ, ನಿತ್ಯ ಜ್ಯೋತಿರ್ಮಯ, ನಿತ್ಯ ಮುಕ್ತ! ಎಚ್ಚೆ ತ್ತಿರುವಾಗಲೇ ಅವನು ಎಲ್ಲಾ ಬಾಹ್ಯವಸ್ತುಗಳನ್ನೂ ತ್ಯಜಿಸಿ ಸ್ವಸ್ವರೂಪದ ಧ್ಯಾನದಲ್ಲಿ ತನ್ಮಯನಾಗಿರಬೇಕು.

೨೮೬. ಭಕ್ತಿ ಯೋಗಿಯ ತ್ಯಾಗ ಎಲ್ಲಕ್ಕಿಂತ ಸುಲಭವಾದುದು. ಸ್ವಾಭಾವಿಕವಾಗಿ ಬರುವುದು. ಅದಕ್ಕೆ ಅಂತಹ ಕಡುತರವಾದ ತಪಸ್ಸಾಗಲೀ ತೀವ್ರ ಮನೋನಿಗ್ರಹವಾಗಲೀ ಬೇಕಿಲ್ಲ. ಮನಸ್ಸಿನ ಪ್ರವೃತ್ತಿ ಹೊಸ ಹಾದಿಯಲ್ಲಿ ಹೋಗುವಂತೆ ಮಾಡಬೇಕು. ಆ ಪ್ರವಾಹವನ್ನು ಬೇರೆ ಕಾಲುವೆಗೆ ಹಾಯುವಂತೆ ಮಾಡಬೇಕು. ಅನೇಕ ಬಗೆಯ ಪ್ರಾಪಂಚಿಕ ಮೋಹಕ್ಕೆ ಸಿಕ್ಕಿ ಸತತ ದುಃಖ, ವ್ಯಥೆ, ನಿರಾಶೆ, ಇವುಗಳ ಅನುಭವದಿಂದ ಅವುಗಳ ಕ್ಷಣಿಕ ಸ್ವಭಾವವನ್ನರಿತು ಅವುಗಳಿಂದ ವಿಮುಕ್ತನಾಗುವನು. ತಾನಾಗಿಯೇ ಅವುಗಳ ಮಮತೆ ಕಳಚಿಬಿದ್ದು ಅವನು ಹೃತ್ಪೂರ್ವಕ, ನಿತ್ಯ ಸತ್ಯ ಪರಮ ಸುಖಾಸ್ಪದ ಪರಮೇಶ್ವರನನ್ನು ಪಡೆಯಲು ಹಂಬಲಿಸುವನು. ಪ್ರೇಮ ಭಕ್ತಿ ಅವನ ಹೃದಯದಲ್ಲಿ ತುಂಬಿ ತುಳುಕಾಡುವುದು. ಆದ್ದರಿಂದಲೇ ಶ್ರೀ ರಾಮಕೃಷ್ಣರು ಭಕ್ತಿಯೇ ಕಲಿಯುಗಕ್ಕೆ ತಕ್ಕ ಮಾರ್ಗವೆಂದು ಸಾರಿದ್ದಾರೆ.

೨೮೭. ಯಾರ ಜೀವನದಲ್ಲಿ ಕರ್ಮ, ಯೋಗ, ಜ್ಞಾನ ಭಕ್ತಿ ಸಮರಸ ಹೊಂದಿವೆಯೋ ಅವನೇ ಆದರ್ಶ ಮಹಾಪುರುಷ. ಪೂಜ್ಯತಮ ಜಗದ್ಗುರು ಭಗವಾನ್ ಶ್ರೀ ರಾಮಕೃಷ್ಣರು ತಾವು ಅನುಷ್ಠಾನ ಮಾಡಿದ ಹೊಸ ವಿಶ್ವಧರ್ಮ ಭಾವನೆಯನ್ನು ಪ್ರಪಂಚಕ್ಕೆ ಕೊಟ್ಟಿರುವರು. ಇದೇ ಯುಗಧರ್ಮ.

೨೮೮. ತ್ಯಾಗವಿಲ್ಲದೆ ಹೇಗೆ ಈ ನಾಲ್ಕು ಯೋಗವೂ ಅಶಕ್ಯವೋ ಹಾಗೆ ಭೋಗ ಅಥವಾ ಪ್ರಾಪಂಚಿಕ ಸುಖವೂ ತ್ಯಾಗವಿಲ್ಲದೆ ಅಸಾಧ್ಯ. ತ್ಯಾಗವಿಲ್ಲದ ಭೋಗವೂ ದುಃಖವೇ. ಅದರ ಏಕ ಮಾತ್ರ ಪರಿಣಾಮ ವ್ಯಥೆ. ತ್ಯಾಗದ ಹೆಸರನ್ನು ಹೇಳಿದ ಕೂಡಲೆ ಜನರು ಭಯಧಿಂದ ಪಲಾಯನ ಮಾಡುವರು. ಏಕೆಂದರೆ ಅವರು ಅದರಲ್ಲಿ ಅಷ್ಟೊಂದು ಸುಖವಿದೆ ಎಂದು ಅರಿಯರು. ಒಬ್ಬ ಮನುಷ್ಯನನ್ನು ತ್ಯಾಗಕ್ಕಾಗಿ ಕರೆದರೆ ಅವನು ಹೆಂಡತಿ ಮಕ್ಕಳು ಪ್ರೀತಿ ಪಾತ್ರರು ಮನೆ, ಮಠ, ಐಶ್ವರ್ಯ, ಆಸ್ತಿ ಎಲ್ಲವನ್ನೂ ಬಿಟ್ಟು ಸನ್ಯಾಸಿಯೇ ಆಗಬೇಕೆಂದು ಅರ್ಥವೇನು? ನಿನ್ನ ಕೈಲಾದಷ್ಟು ನಿತ್ಯ ಜೀವನದಲ್ಲಿ ಸ್ವಲ್ಪ ವಸ್ತುವನ್ನು ತ್ಯಾಗ ಮಾಡುವ ಅಭ್ಯಾಸ ಮಾಡಬಾರದೆ? ಆಗ ನಿನಗೇ ತ್ಯಾಗದಲ್ಲಿ ಎಷ್ಟೊಂದು ಸುಖ ಸಂತೋಷವಿದೆ, ಎಷ್ಟೊಂದು ಹೃದಯ ವೈಶಾಲ್ಯತೆ, ಚಿತ್ತಪ್ರಸನ್ನತೆ ಇದೆ ಎನ್ನುವುದು ತಿಳಿಯುವುದು. ಯಾವ ತ್ಯಾಗದಿಂದ ಸಂತೋಷವಾಗುವು

ದಿಲ್ಲವೋ ಅದು ತ್ಯಾಗವೆ ಅಲ್ಲ. ಅದು ಬೇರೇನೋ ಆಗಿದೆ.

೨೮೯. ತ್ಯಾಗವೇ ನಿಜವಾಗಿ ನಮ್ಮ ಜೀವದ ಜೀವ. ನಮಗರಿವಿಲ್ಲದೆಯೇ ನಾವು ಪ್ರತಿ ಘಳಿಗೆಯೂ ತ್ಯಾಗ ಮಾಡುತ್ತಿದ್ದೇವೆ. ನಾವು ನಮ್ಮ ಉಸಿರನ್ನು ತ್ಯಾಗ ಮಾಡುತ್ತೇವೆ ಎಂದರೆ ಶ್ವಾಸ ನಿಚ್ಛ್ವಾಸಗಳನ್ನು ನಮ್ಮ ಜೀವರಕ್ಷಣೆಗಾಗಿ ಬಿಡುತ್ತೇವೆ. ನಾವು ಊಟ ಮಾಡುವುದರಿಂದ ಇತರ ಪುಷ್ಟಿಕರವಾದ ವಸ್ತುವನ್ನು ತಿನ್ನುವುದರಿಂದ ಶಕ್ತಿ ಹೃದಯದಲ್ಲಿ ಸೇರುತ್ತದೆ. ಅದೇ ಕಾಲದಲ್ಲಿ ನಮ್ಮ ದೇಹದ ಶುದ್ಧ ರಕ್ತನಾಳ, ಮಲಿನ ರಕ್ತನಾಳಗಳಲ್ಲಿ ಹರಿದು ಅವುಗಳನ್ನು ಬಲಗೊಳಿಸುತ್ತದೆ. ಇಲ್ಲದಿದ್ದಲ್ಲಿ ಸಾವು ನಿಶ್ಚಯ. ನಾವು ಇತರರಿಂದ ಏನನ್ನು ತೆಗೆದುಕೊಳ್ಳುತ್ತೇವೋ ಮತ್ತು ನಾವು ಏನನ್ನು ಸಂಪಾದಿಸುತ್ತೇವೋ— ಅದು ವಿದ್ಯಾಭ್ಯಾಸ ವಿಜ್ಞಾನ, ಭೂಗೋಳ ಶಾಸ್ತ್ರ ವಾಗಲೀ— ಐಶ್ವರ್ಯ, ಆಧ್ಯಾತ್ಮಿಕತೆ ಇವೆಲ್ಲಾ ಇತರರ ಒಳ್ಳೆಯದಕ್ಕಾಗಿ, ಇತರರಲ್ಲಿರುವ ಅಭಾವವನ್ನು ತೊಡೆಯುವುದಕ್ಕಾಗಿ. ನಮ್ಮಲ್ಲಿರುವುದನ್ನು ಇತರರಿಗೆ ಕೊರತೆಯಿಲ್ಲದೆ ಕೊಡಲು ಅಥವಾ ಹಂಚಲು ಗೋಣಗಿದರೆ ಅದು ಕಾಲ ಕ್ರಮೇಣ ವ್ಯರ್ಥವಾಗಿ ಹೋಗುವುದು. ಯಾರಿಗೂ ಉಪಯೋಗವಾಗುವುದಿಲ್ಲ. ಹಂಚುವುದು ಪ್ರತಿಯಾಗಿ ಸ್ವೀಕರಿಸುವುದಕ್ಕಲ್ಲ. ಇದನ್ನು ನೆನಪಿನಲ್ಲಿಡಿ. ದಾನ ಅಥವಾ ತ್ಯಾಗ ಸ್ವೇಚ್ಛಾಪೂರಕವಾಗಿರಬೇಕು. ಮತ್ತಾವ ದೂರದ ಉದ್ದೇಶವೂ ಇರಬಾರದು. ಆಗ ಮಾತ್ರ ಅದು ಅಭಯ ಫಲವನ್ನು ನೀಡುವುದು. ಸ್ವಾಮಿ ವಿವೇಕಾನಂದರು, "ಕೊಡು, ದಾನಮಾಡು ಪ್ರತಿ ಫಲಾಪೇಕ್ಷೆಯನ್ನು ಬಿಡು. ಯಾರು ಪ್ರತಿಫಲವನ್ನು ಇಚ್ಛಿಸುವರೋ ಆತನ ಸಿಂಧು ಕೂಡ ಬಿಂದುವಾಗಿ ಹೋಗುವುದು?" ಎನ್ನುತ್ತಿದ್ದರು.

೨೯೦. ಬಾಹ್ಯ ಪ್ರಕೃತಿಯಲ್ಲಿ ತ್ಯಾಗದ ಕ್ರಿಯೆಯನ್ನು ಸರ್ವತ್ರ ಕಾಣುತ್ತೇವೆ. ಸೂರ್ಯ, ಚಂದ್ರ, ನಕ್ಷತ್ರಗಳು, ಬೆಳಕು ಮತ್ತು ಶಾಖವನ್ನು ಕೊಡುತ್ತವೆ. ವೃಕ್ಷಗಳು ಹಣ್ಣು ಬಿಟ್ಟು ನೆರಳನ್ನು ಕೊಡುತ್ತವೆ. ಹೂವು ಜೇನನ್ನು ಸುವಾಸನೆಯನ್ನು ಕೊಡುತ್ತದೆ. ನದಿಗಳು ನೀರಡಿಕೆಯನ್ನು ತಣಿಸುವುವು. ಭೂಮಿ ಎಲ್ಲಾ ಜೀವಿಗಳ ಭೋಗಕ್ಕಾಗಿ ಧಾನ್ಯಾದಿಗಳನ್ನು ಕೊಡುವುದು. ಎಲ್ಲವೂ, ತಮಗಾಗಿರುವ ಸರ್ವಸ್ವವನ್ನೂ ಮೌನವಾಗಿ ತಮ್ಮ ಶಕ್ತಿಗನುಗುಣವಾಗಿ ಇತರರಿಗೆ ಉಪಕಾರ ಮಾಡುವುದಕ್ಕಾಗಿ ಕೊಡುತ್ತವೆ. ಕೇವಲ ಮನುಷ್ಯನೇ ಹೀಗೆ ನೀಚನಾಗಿ

ಹಾಸ್ಯಾಸ್ಪದವಾಗುವಂತೆ ನಡೆದು ಸಾಯುವಾಗಲೂ "ನನ್ನದು, ನನ್ನದು" ಎಂದೇ ಸಾಯುವನು.

೨೯೧. ಯೋಗಿಗಳು, ತ್ಯಾಗ ಜೀವಿಗಳು, ತಮ್ಮ ಸುಖಕ್ಕಾಗಿ ಯಾರಿಂದಲೂ ದಾನ ಸ್ವೀಕಾರಮಾಡುವುದಿಲ್ಲ. ಅದರಿಂದ ಅವರ ಸ್ವಾತಂತ್ರ್ಯಕ್ಕೆ, ಪರಿಶುದ್ಧಿಗೆ ಭಂಗ ಬರುವುದು. ದಾನಸ್ವೀಕಾರ ಕೃತಜ್ಞತಾ ಭಾವವನ್ನು ಉತ್ಪನ್ನ ಮಾಡುವುದು. ದಾನಿಯ ಪಾಪ ಸ್ವೀಕರಿಸಿದವನ ದೇಹ, ಮನಸ್ಸನ್ನು ಅಪವಿತ್ರಮಾಡುವುದು. "ನನಗೆ ಇದಿರಲಿ, ಅದಿರಲಿ, ಅದು ನೆರವೇರಲಿ, ಅದು ಈಡೇರಲಿ, ನನಗೆ ಇದು ಬೇಕು ಅದು ಬೇಕು" ಈ ರೀತಿಯ ಆಸೆಗಳಿಗೆ ಒಳಗಾಗುವುದು. ಅದು ನೆರವೇರಲು ದಾನ ಸ್ವೀಕರಿಸುವನು. ಇದಕ್ಕೆ ಪರಿಗ್ರಹವೆಂದು ಹೆಸರು. ಆಶಾರಹಿತವಾದ ತ್ಯಾಗಿಯ ಮನೋಭಾವವು ಅಪರಿಗ್ರಹ ಅಂದರೆ ಅದರ ಅಸ್ವೀಕಾರ. ಕೇವಲ ಶರೀರ ಧಾರಣೆಗಾಗಿ ದಾನ ಸ್ವೀಕಾರ ಮಾಡಿದರೆ ಅದು ಪರಿಗ್ರಹವಲ್ಲ. ಆದರೆ ಜ್ಞಾನಿಗಳಿಗೆ ಕೇವಲ ಅದಕ್ಕೂ, ದೇಹಕ್ಕೆ ಅತ್ಯಾವಶ್ಯಕವಾದುವುಗಳಲ್ಲೂ ವ್ಯಾಮೋಹವಿರುವುದಿಲ್ಲ. ಅವರಿಗೆ ನಿಜವಾಗಿ ಯಾವ ರೀತಿಯ ಭೋಗ ಅಥವಾ ಸಂತೋಷದಲ್ಲೂ ಸುಖವಿಲ್ಲ ಎಂಬುದು ಗೊತ್ತು. ಅವರು ಸುಖಕ್ಕಾಗಿ ಕೂಡ ಹಂಬಲಿಸುವುದಿಲ್ಲ. ಆದರೆ ಅವರಲ್ಲಿ ಯಾರು ಕೆಲವು ಜನೋಪಕಾರಿ ಕೆಲಸಗಳಲ್ಲಿ ತೊಡಗಿರುವರೋ ಅವರು ಆ ಕೆಲಸ ನಿರ್ವಹಣೆಗಾಗಿ ಮತ್ತು ಹರಡಲು ದಾನ ಸ್ವೀಕಾರಮಾಡಿದರೆ ಅದರಿಂದೇನೂ ಹಾನಿಯಿಲ್ಲ.

೨೯೨. ನಾಮ ಮತ್ತು ನಾಮಿ ಎರಡೂ ಒಂದೇ. ದೇವರು, ಆತನ ನಾಮ ಎರಡೂ ಒಂದೇ. ದೇವರ ರೂಪು ಗುಣ ಮತ್ತು ಭಾವನೆ ಅಸಂಖ್ಯಾತವಾಗಿರುವುದರಿಂದ ಆತನ ನಾಮವೂ ಅಸಂಖ್ಯಾತವಾಗಿವೆ. ನಾಮದ ಶಕ್ತಿ ಅಪಾರವಾದುದು, ಅಸಾಧಾರಣವಾದುದು. ಯಾವ ನಾಮ ನಿನಗಿಷ್ಟವೋ ಅದನ್ನೇ ಜಪಿಸುತ್ತಾ ಹೋಗು. ನಿನ್ನೆಲ್ಲಾ ಇಷ್ಟಾರ್ಥಗಳೂ ಈಡೇರುವುವು. ಕೇವಲ ಆತನ ನಾಮ ಪುನಶ್ಚರಣೆಯಿಂದಲೇ ಆತನ ಸಾಕ್ಷಾತ್ಕಾರವನ್ನು ಪಡೆಯಬಲ್ಲೆ. "ಜಪದಿಂದ ಸಾಕ್ಷಾತ್ಕಾರ ಲಭಿಸುವುದು."

೨೯೩. ಆದರೆ ಆ ಪರಾತ್ಪರ ವಸ್ತುವಿನ ಸಾಕ್ಷಾತ್ಕಾರ ಲಭಿಸಬೇಕಾದರೆ, ಗುರುಪರಂಪರೆಯಿಂದ ಬಂದ ಉಪದೇಶ ಪಡೆದು ಅದಕ್ಕೆ

ತಲೆಬಾಗಿದ ಹೊರತು ಸಾಧ್ಯವಾಗಲಾರದು. ಗುರುಪರಂಪರೆಯಲ್ಲಿ ಗುರುವಿನಿಂದ ಶಿಷ್ಯನಿಗೆ ಒಂದು ಶಕ್ತಿ ಹರಿಯುವುದು. ಯಾವಾಗ ಆ ಶಿಷ್ಯನು ಕಾಲಾನಂತರ ಗುರುವಾಗುವನೋ ಆಗ ಅವನ ಶಿಷ್ಯನಿಗೆ ಆ ಶಕ್ತಿ ಹರಿಯುವುದು. ಹೀಗೆ ಅತಿ ಪ್ರಾಚೀನಕಾಲದಿಂದಲೂ ಇಂದಿನವರೆಗೆ ನಾಮದ ಆಧ್ಯಾತ್ಮಿಕಶಕ್ತಿ ಹಲವು ಬೀಜ ಮಂತ್ರಗಳ ರೂಪಿನಲ್ಲಿ ಸಾಧನೆಯ ಮೂಲಕ ಕೇಂದ್ರೀಕೃತವಾಗಿದೆ. ಈ ಮಂತ್ರವೇ ಸಾಧಕನ ಭರವಸೆ; ಇಷ್ಟದೇವತೆಯ ಪ್ರತೀಕ. ಚಿತ್ತೈಕಾಗ್ರತೆಯಿಂದ ಆ ಮಂತ್ರವನ್ನು ಜಪದಮೂಲಕ ಸತತ ಅಭ್ಯಾಸಮಾಡಿದರೆ ಆ ಮಹಾಶಕ್ತಿ ಸತ್ಯವೆಂದು ಅರಿವಾಗುವುದು. ಆದರೆ ಅದಕ್ಕೆ ಗುರುಪರಂಪರೆಯಿಂದ ಬಂದ ನಾಮದ ಉಪದೇಶಪಡೆದ ಒಬ್ಬ ಯೋಗ್ಯ ಆಧ್ಯಾತ್ಮಿಕ ಪವಿತ್ರ ಮನಸ್ಸುಳ್ಳ ಮನುಷ್ಯನಿಂದ ವಿಧಿಪೂರ್ವಕ ದೀಕ್ಷೆ ಅಥವಾ ಉಪದೇಶ ಹೊಂದಬೇಕು. ನಂತರ ಸಾಧಕನು ಗುರುವಿನ ಬೋಧನೆಯ ಪ್ರಕಾರ ಆತನಲ್ಲಿ ಸಂಪೂರ್ಣ ಶ್ರದ್ಧಾ ಭಕ್ತಿಯನ್ನಿಟ್ಟು ಸಾಧನೆಮಾಡಿದರೆ ಅವನಿಗೆ ಬಹು ಬೇಗ ಸಾಕ್ಷಾತ್ಕಾರವಾಗುವುದು.

೨೯೪. ಕೊಠಡಿಯ ಬಾಗಿಲನ್ನು ಮುಚ್ಚಿ ಮಲಗಿರುವ ಮನುಷ್ಯನು ಯಾರಾದರೂ ತನ್ನ ಹೆಸರಿಡಿದು ಕೂಗಿ ಬಾಗಿಲು ತಟ್ಟಿದರೆ ಜವಾಬು ಕೊಡಲು ಏಳುತ್ತಾನೆ. ಆದರಂತೆ ಯಾರಾದರೂ ದೇವರ ಮಂತ್ರ ಪುನಶ್ಚರಣೆಯಿಂದ ಸ್ಮರಣೆಮಾಡುತ್ತಾ ಸರಳ ಶ್ರದ್ಧೆ, ಉತ್ಕಂಠಿತ ಭಕ್ತಿಯಿಂದ ಸಾಧನೆ ಮಾಡಿದರೆ ಅಂತರ್ಯಾಮಿಯಾದ ಆ ಭಗವಂತನು ಎಚ್ಚೆತ್ತು ಸಾಧಕನ ಇಷ್ಟಾರ್ಥಸಿದ್ಧಿಗಾಗಿ ಆತನ ಹೃದಯ ದೇಗುಲದ ಬಾಗಿಲನ್ನು ತೆರೆಯುವನು; ಅವನ ಇಷ್ಟದೇವತಾದರ್ಶನದ ಅನುಗ್ರಹವಾಗುವುದು.

೨೯೫. ಭಗವನ್ನಾಮದ ಪ್ರಭಾವ, ಶಕ್ತಿ ಅನಂತವಾದುದು. ಅದರ ಉಚ್ಚಾರಣಾ ಮಾತ್ರದಿಂದಲೇ ಪಾಪಿ, ದುಃಖಿ ದುಷ್ಟನೂ ಕೂಡ ಮುಕ್ತಿ ಹೊಂದುವನು. ದೈವ ಭಕ್ತನು ಅದರಲ್ಲಿ ಅಮೃತದ ಪವವಿಯನ್ನು ಕಂಡು ಪ್ರಪಂಚವನ್ನು ತಿರಸ್ಕರಿಸುವನು. ನಿನಗೆ ಮತ್ತೇನೂ ಮಾಡುವುದಕ್ಕಾಗದೇ ಹೋದರೂ ಆತನ ನಾಮಸ್ಮರಣೆ ಮಾಡುತ್ತಾ, ವ್ಯಾಕುಲದಿಂದ ಅವನನ್ನು ಪ್ರಾರ್ಥಿಸು. ನಿನಗೆ ಶಕ್ತಿ ಶಾಂತಿ ಪ್ರಾಪ್ತಿಯಾಗುವುದು. ಕಾಲಕ್ರಮೇಣ ಆತನ ಕೃಪೆಯಿಂದ ನೀನು ಆತನಿಗಾಗಿ ಪ್ರೇಮ ಮತ್ತು ಭಕ್ತಿಯನ್ನು ಹೊಂದುವೆ.

೨೯೬. ತಪಸ್ಸಿನಲ್ಲಿ ಮೂರು ಬಗೆಗಳಿವೆ— ಕಾಯಕ, ವಾಚಿಕ' ಮತ್ತು ಮಾನಸಿಕ. ವ್ರತ, ಪ್ರಾಯಶ್ಚಿತ್ತ ರೋಗಿಗಳು ದುಃಖಿಗಳ ಸೇವೆ ಮುಂತಾದ ಕೆಲಸ ಮಾಡುವುದು ಕಾಯಕ ತಪಸ್ಸು. ಸತ್ಯವನ್ನಾಡು ವುದೇ ಮಾತಿನ ತಪಸ್ಸು. ಇಂದ್ರಿಯನಿಗ್ರಹ, ಏಕಾಗ್ರತೆ ಇದು ಮಾನಸಿಕ ತಪಸ್ಸು. ಯಾರು ಆ ಪರಾತ್ಪರ ವಸ್ತುವಿನ ದರ್ಶನಾಕಾಂಕ್ಷಿಗಳೋ ಅವರು ಈ ಮೂರು ಬಗೆಯ ತಪಸ್ಸಾಧನೆ ಮಾಡಬೇಕು.

೨೯೭. ದೇವರಿಗಾಗಿ ಇಚ್ಛೆ ಆತನನ್ನು ಪಡೆಯುವ ಹಂಬಲ ಇದೇ ಧರ್ಮದ ಸಾರ. ನಮಗೆ ಯಾವುದು ಜೀವಿಸುವುದಕ್ಕೆ ಅತ್ಯಂತ ಅಗತ್ಯವೊ ಅದು ಸಿಕ್ಕದೇ ಇದ್ದರೆ ಅತಿ ವ್ಯಥೆಪಡುವೆವು. ಅದು ಸಿಕ್ಕದೇ ಇದ್ದರೆ ಪ್ರಾಣಧಾರಣೆ ಅಸಂಭವ. ಗಾಳಿ ನೀರು ಮನೆ ಇತ್ಯಾದಿ, ನಮಗೆ ಬೇಕೇ ಬೇಕು. ಇವನ್ನು ನಾವು ಹೇಗೆ ಇಚ್ಛೆಪಡುತ್ತೇವೋ ಹಾಗೆಯೇ ದೇವರನ್ನು ಇಚ್ಛಿಸುತ್ತೇವೆಯೆ? ನಿಜವಾಗಿ ನಮಗೆ ಅವನನ್ನು ಬಿಟ್ಟು ಎಲ್ಲಾ ಬೇಕು. ಏಕೆಂದರೆ ನಮಗೆ ಸಾಧಾರಣ ಜೀವಿಸಲು ಬೇಕಾದ ವಸ್ತುವೆಲ್ಲಾ ಬಾಹ್ಯ ಜಗತ್ತಿನಲ್ಲೇ ಸಿಕ್ಕುವುದು. ಯಾವಾಗ ಈ ಬಾಹ್ಯ ಜಗತ್ತು ನಮಗೆ ಅತ್ಯಗತ್ಯವಾದ ವಸ್ತುವನ್ನು ಒದಗಿಸಲಾರದೊ, ಅದಕ್ಕೆ ನಮ್ಮ ಹೃದಯದ ಬಯಕೆಯ ಪರಿಹಾರ ಅಸಾಧ್ಯವೆಂದು ಅರಿವಾಗು ತ್ತದೆಯೊ, ಆಗಲೇ ನಾವು ಅಂತರ್ಮುಖರಾಗುತ್ತೇವೆ. ಬಾರಿ ಬಾರಿಗೂ ನೋವನ್ನನುಭವಿಸಿದ ಮೇಲೆ, ನಾವು ಮಾಡುತ್ತಿರುವುದೆಲ್ಲ ಕೇವಲ ಮಕ್ಕಳಾಟ, ಈ ಜಗತ್ತು ಮಾಯೆ, ನೀನೇನನ್ನು ಹಿಡಿಯ ಹೋದರೂ ಅದು ಕೈ ಜಾರಿ ಹೋಗುವುದು— ಈ ಅನುಭವದಿಂದ ನಮ್ಮ ಹೃದಯ ದಗ್ಧವಾದ ಮೇಲೆ, ಶಾಶ್ವತವಾದ ಯಾವುದನ್ನು ಹೊಂದುವುದರಿಂದ ಎಲ್ಲಾ ಬಗೆಯ ದಾರುಣ ವ್ಯಥೆ ಸಂಕಟಗಳು . ಆಮೂಲಾಗ್ರವಾಗಿ ನಾಶವಾಗು ವುದೋ ಅಂತಹ ವಸ್ತುಗಾಗಿ ಹಂಬಲಿಸುತ್ತೇವೆ. ಆ ವಸ್ತು ದೇವರೊಬ್ಬನೇ. ಅನಾಸಕ್ತಿ, ದೇವರಿಗಾಗಿ ನಿಜವಾದ ವ್ಯಾಕುಲ— ಇದೇ ಧರ್ಮದ ಪ್ರಥಮ ಚಿಹ್ನೆ.

೨೯೮. ಶ್ರೀಮದ್ಭಾಗವತ ಅಧರ್ಮವೇ ನಾಶಕ್ಕೆ ಕಾರಣವೆಂದು ಹೇಳುವ ಈ ಭಾವನೆಯನ್ನು ಕೊಡುತ್ತದೆ: ಅಧರ್ಮದ ಹೆಂಡತಿಯೇ ಸುಳ್ಳು. ಅವರಿಗೆ ಅಹಂಕಾರವೆಂಬ ಮಗ, ಮಾಯೆ ಎಂಬ ಮಗಳು ಹುಟ್ಟಿ ದರು. ಅವರಿಬ್ಬರೂ ಮದುವೆಯಾದಾಗ ದುರಾಶೆ ಎಂಬ ಮಗ, ಮೋಸ

ಎಂಬ ಮಗಳು ಹುಟ್ಟುತ್ತಾರೆ. ಅವರಿಂದ ಕೋಪ ಮತ್ತು ಅಸೂಯೆ ಹುಟ್ಟುತ್ತವೆ. ಅವರ ಮಗ ಕಲಿ (ಯಂತ್ರ ಯುಗ) ಮಗಳು ಕೆಟ್ಟ ಮಾತುಗಳು. ಕಲಿಗೆ ಈ ಕೆಟ್ಟ ಮಾತುಗಳಿಂದ ಭಯ ಎಂಬ ಮಗಳೂ ಸಾವೆಂಬ ಮಗನೂ ಹುಟ್ಟುವರು. ಯಾತನೆ ಮತ್ತು ನರಕ ಇವರ ಮಕ್ಕಳೇ ಹೊರತು ಬೇರೆಯಲ್ಲ.

೨೯೯. ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ನಾಲ್ಕು ಪುರುಷಾರ್ಥಗಳನ್ನು ಪಡೆಯಲು ಯೋಗ್ಯವಾದ ಧರ್ಮಪರಿವಾರವರ್ಗವಿದೆ:— ಶ್ರದ್ಧೆ, ಮೈತ್ರಿ, ದಯಾ, ಶಾಂತಿ, ತೃಪ್ತಿ, ಪುಷ್ಟಿ, ಕ್ರಿಯಾ, ಉನ್ನತಿ, ಬುದ್ಧಿ, ಮೇಧಾ, ತಿತಿಕ್ಷಾ, ಲಜ್ಜಾ ಮತ್ತು ಸೌಂದರ್ಯ. ಈ ಹದಿಮೂರು ಧರ್ಮದ ಪತ್ನಿಯರು. ಅವರಲ್ಲಿ ಶ್ರದ್ಧೆಗೆ ಸತ್ಯ, ಮೈತ್ರಿಗೆ ಪ್ರಸಾದ, ದಯೆಗೆ ಅಭಯ, ಶಾಂತಿಗೆ ಶಮ, ತೃಪ್ತಿಗೆ ಹರ್ಷ, ಪುಷ್ಟಿಗೆ ಗರ್ವ, ಕ್ರಿಯೆಗೆ ಯೋಗ, ಉನ್ನತಿಗೆ ದರ್ಪ, ಬುದ್ಧಿಗೆ ಅರ್ಥ, ಮೇಧಕ್ಕೆ ಸ್ಮೃತಿ, ತಿತಿಕ್ಷೆಗೆ ಮಂಗಳ, ಲಜ್ಜೆಗೆ ವಿನಯವೆಂಬ ಮಕ್ಕಳಾದರು. ಕಡೆಯ ಕಿರಿಯ ಹೆಂಡತಿ ದೇವರಿಗೆ ಸಮನಾದ, ಎಲ್ಲಾ ಸದ್ಗುಣಗಳಿಗೂ ಮೂಲವಾದ ನರ ನಾರಾಯಣ ರೆಂಬುವರಿಗೆ ಜನ್ಮವಿತ್ತಳು.

೩೦೦. ಯಾವಾಗಲಾದರೂ ಹೃದಯ ಮತ್ತು ಮೆದುಳಿಗೆ ಘರ್ಷಣೆ ಯಾದಾಗ ಹೃದಯ ವಾಣಿಯನ್ನೇ ಕೇಳಿ. ಮೆದುಳು ಜ್ಞಾನೇಂದ್ರಿಯದ ಪ್ರಧಾನಕೇಂದ್ರ. ಒಂದು ವಸ್ತುವಿನ ಜ್ಞಾನವನ್ನು ಪಡೆಯಲು ಎಲ್ಲಾ ಅವಶ್ಯಕವಾದ ಮಾನಸಿಕ ಶಕ್ತಿಯೂ ತಲೆಯಿಂದಲೇ ಬರಬೇಕು. ಹೃದಯ ಎಲ್ಲಾ ಭಾವನೆ, ಪ್ರೇರೇಪಣೆ, ಅನುಭವ, ಇವೇ ಮುಂತಾದ ನಮ್ಮ ವ್ಯಕ್ತಿತ್ವಕ್ಕೆ ರೂಪು ಕೊಡುವ ಸ್ಥಳ. ಬುದ್ಧಿವಂತರು, ಅನೇಕ ಬಗೆಯ ಧರ್ಮ ಗ್ರಂಥಗಳು, ವಿದ್ಯಾಭ್ಯಾಸದ ಅನೇಕ ಶಾಖೆಗಳು, ವಿಜ್ಞಾನದಲ್ಲಿ ಪ್ರವೀಣರಾಗುತ್ತಾರೆ. ಹೃದಯ ಪ್ರಾಧಾನ್ಯವಾದ ಮನುಷ್ಯರು ಭವ್ಯ ಗುಣಗಳಾದ, ದಯೆ ಮನೋವೈಶಾಲ್ಯತೆ, ಇತರರ ನೋವಿನಲ್ಲಿ ಸಹಾನುಭೂತಿ, ಎಲ್ಲಾ ಪ್ರಾಣಿಗಳಲ್ಲೂ ಪ್ರೀತಿ ಮುಂತಾದುವುಗಳನ್ನು ಹೊಂದಿರುತ್ತಾರೆ. ಹೃದಯವೇ ಮನುಷ್ಯನನ್ನು ಮಹತ್ತಾದ ಭಾವನೆಗಳಿಗೆ ಪ್ರೇರೇಪಿಸಿ ಸಾಕ್ಷಾತ್ಕಾರಕ್ಕೆ ಒಯ್ಯುವುದು. ಬುದ್ಧಿ ಮುಂತಾದುವುಗಳಿಗೆ ಅಲ್ಲಿ ಪ್ರವೇಶವಿಲ್ಲ. ಪಂಡಿತ ಸ್ವಾರ್ಥಿಯಾಗಿರಬಹುದು, ಕ್ರೂರಿಯಾಗಿರಬಹುದು, ನೀಚನಾಗಿರಬಹುದು. ಆದರೆ ಉದಾರನಾದ ಮನುಷ್ಯನು

ಎಂದಿಗೂ ತನ್ನ ಜೀವ ಹೋದರೂ ನೀಚ ಸ್ವಭಾವದವನಾಗಿರುವುದಿಲ್ಲ.

೩೦೧. ಸಹಾನುಭೂತಿಯನ್ನು ಆದಷ್ಟು ವೃದ್ಧಿಗೊಳಿಸಿ. ಹೃದಯ ಪ್ರೇಮ ಗಂಗೆಯ ಗೋಮುಖಿ, ಜನ್ಮಸ್ಥಳ. ಕೇವಲ ಹೃದಯದಿಂದ ನಮಗೆ ದೇವವಾಣಿ ಕೇಳಿಸುವುದು. ಈ ಹೃದಯಾಕಾಶದಲ್ಲೇ ಅವನು ಪ್ರತ್ಯಕ್ಷ ನಾಗುವನು. ಆತನನ್ನು ಹುಡುಕಲು ಜ್ಞಾನ, ಭಕ್ತಿ, ಮೋಕ್ಷವನ್ನು ಹೊಂದಲು ಧರ್ಮಗ್ರಂಥಗಳ ಪಠಣ ವಿದ್ಯಾರ್ಜನೆ ಇವುಗಳ ಅವಶ್ಯಕತೆ ಇಲ್ಲ. ಪುಸ್ತಕಗಳನ್ನೋದುವುದರಿಂದ ಶೀಲ ರೂಪಗೊಳ್ಳುವುದಿಲ್ಲ. ವ್ಯಕ್ತಿತ್ವ ಬೆಳೆಯುವುದಿಲ್ಲ. ಅವು ಕೇವಲ ಮೂರ್ಖ ಪಂಡಿತರನ್ನಾಗಿ ಮಾಡುವುದು. ಶ್ರೀ ರಾಮಕೃಷ್ಣರು, ಗ್ರಂಥವಲ್ಲ (ಪುಸ್ತಕವಲ್ಲ) ಗ್ರಂಥಿ (ಕಟ್ಟು, ಬಂಧನ) ಎಂದು ಹೇಳುತ್ತಿದ್ದರು.

೩೦೨. ಈಗಿನ ಕಾಲದ ವ್ಯಾಸಂಗ ನಿಜವಾಗಿ ಒಂದು ಅಸಮಂಜಸ ವಾದ ಕಲಸು ಮೇಲೋಗರ. ಅನೇಕ ಕಡೆಗಳಲ್ಲಿ ಅದು ಮಾನಸಿಕ ಅಜೀರ್ಣವನ್ನುಂಟುಮಾಡುವುದು. ಕೇವಲ, ಪಾಸ್, ಅಲ್ಲ (ಪರೀಕ್ಷೆಯಲ್ಲಿ ತೇರ್ಗಡೆ) ಕತ್ತಿನ ಸುತ್ತಲೂ 'ಪಾಶ' ಹಗ್ಗದ ತೇರ್ಗಡೆ! ಆದರೆ ನಮ್ಮಾ ಭಾರತೀಯರನ್ನು ಈ ಪಾಶ ಎಷ್ಟು ಮರಳು ಮಾಡಿದೆ! ನಮ್ಮ ಜೀವನದ ಅತ್ಯುತ್ತಮ ಕಾಲವಾದ ಯೌವನ ಮಾನಸಿಕ ಭೌತಿಕ ಶಕ್ತಿ ಇವನ್ನೆಲ್ಲಾ ಇದಕ್ಕಾಗಿ ವಿನಿಯೋಗಿಸುತ್ತೇವೆ. ಬಡತನವಿದ್ದರೂ ಇದಕ್ಕಾಗಿ ನಾವು ಕಷ್ಟ ಪಟ್ಟು ಹಣ ಕೂಡಿಹಾಕುತ್ತೇವೆ. ಎಷ್ಟೊಂದು ಶಾರೀರಕ ನೋವನ್ನು ಮಾನಸಿಕ ವ್ಯಥೆಯನ್ನು ಅನುಭವಿಸುತ್ತೇವೆ! ಇಷ್ಟು ಮಾಡಿದಮೇಲೆ ನಮಗೆ ಯಾವ ಪ್ರತಿಫಲ ಸಿಕ್ಕುವುದು? ಈ ಬದುಕಿನ ಹೋರಾಟದಲ್ಲಿ ಸೋಲನ್ನು ಪಡೆದು, ಆರೋಗ್ಯ ಕೆಡಿಸಿಕೊಂಡು, ಎಲ್ಲೆಲ್ಲಿಯೂ ಅಂಧಕಾರ ವನ್ನು ಕಾಣುತ್ತೇವೆ. ಇದಕ್ಕಿಂತ ಹೆಚ್ಚಾಗಿ: ವಿವಾಹದ ಫಲವಾಗಿ ಹೆಂಡತಿ ಮಕ್ಕಳನ್ನು ಸಾಕುವ ಭಾರವೂ ಬೀಳುತ್ತದೆ. ಎಂತಹ ಅವ್ಯವಸ್ಥೆ ಅವನಿಗೆ ಉಂಟಾಗುವುದು! ನಮ್ಮ ವಿಶ್ವವಿದ್ಯಾನಿಲಯಗಳನ್ನು "ಗುಲಾ ಮರ ಮನೆ" ಅಥವಾ ಗುಲಾಮರನ್ನು ತಯಾರು ಮಾಡುವ ಕಾರ್ಖಾನೆ ಎಂದು ಕರೆಯುವುದು ಸುಳ್ಳಲ್ಲ. ಈ ಶಾಲೆಯ ಅಥವಾ ಪ್ರೌಢ ವ್ಯಾಸಂಗದ ವಿದ್ಯಾಭ್ಯಾಸ ಈಗ ಆಗಿರುವಂತೆ ಅನ್ನ ಸಂಪಾದನೆಗೂ ಉಪಯೋಗವಿಲ್ಲ, ವ್ಯಾವಹಾರಿಕ ಜೀವನಕ್ಕೂ ಉಪಯೋಗವಿಲ್ಲ, ಅದು ನಿಜವಾಗಿ ಹಾನಿಕರ. ಆತ್ಮನಾಶಕ್ಕೆ ಕಾರಣ. ಈ "ಸುಶಿಕ್ಷಿತ" ರೆಂದು ಕರೆಸಿಕೊಳ್ಳುತ್ತಿರುವವ

ರಲ್ಲೇ ಬಹುಮಂದಿ ನೀತಿಯ ತಳಹದಿ, ಧರ್ಮ ಶ್ರದ್ಧೆಗಳೊಂದೂ ಇಲ್ಲದೆ, ದೇಶಭಕ್ತಿ ನಾಶವಾಗಿ ಜೀವಚ್ಛವಗಳಂತೆ ಇರುವರು.

೩೦೩. ಬಹಳ ಅಪರೂಪವಾದ ಮಾನವ ಜನ್ಮ ಪಡೆದಿರುವೆ. ಯಾರನ್ನು ಪಡೆಯುವುದರಿಂದ ಎಲ್ಲವನ್ನೂ ಪಡೆಯುವೆಯೋ, ಮತ್ತಾವುದೂ ಇರುವುದಿಲ್ಲವೋ, ಅಂತಹ ಪರಮಾತ್ಮನನ್ನು ಹುಡುಕಲು ಯತ್ನಿಸು. ಯಾರನ್ನು ತಿಳಿಯುವುದರಿಂದ ಸರ್ವವನ್ನೂ ತಿಳಿಯಬಹುದೋ, ತಿಳಿಯ ತಕ್ಕದ್ದೇನೂ ಉಳಿಯುವುದಿಲ್ಲವೋ ಅಂಥಹವನನ್ನು ತಿಳಿಯಲು ಪ್ರಯತ್ನಿಸು. ಯಾರನ್ನು ಪ್ರೀತಿಸುವುದರಿಂದ ಇತರ ಪ್ರೀತಿಸುವ ವಸ್ತುಗಳೆಲ್ಲಾ – ಕಾಮಕಾಂಚನ ವ್ಯಾಮೋಹವೆಲ್ಲಾ – ಕೇವಲ ಧೂಳಿನ ಸಮಾನವೆನಿಸುವುದೋ ಅಂಥಹವನನ್ನು ಪ್ರೀತಿಸು. ಯಾವ ರೀತಿ ನಡೆದರೆ ಮೃತ್ಯುರಹಿತವಾದ ಜೀವನ ಪಡೆಯಬಹುದೊ ಅಂತಹ ದಾರಿಯಲ್ಲಿ ಮುಂದುವರಿ.

೩೦೪. ಆ ಪರಾತ್ಪರ ವಸ್ತುವಿಗಾಗಿ, ಪ್ರೇರೇಪಣೆ ಮತ್ತು ಭಕ್ತಿ ಇರಬೇಕು. ಆಧ್ಯಾತ್ಮಿಕ ಸಾಧನೆ, ಏಕಾಗ್ರ ಚಿತ್ತದ ಕಠಿಣ ಸಾಧನೆ ಅವಶ್ಯಕ. ಒಂದು ಟನ್ನಿನಷ್ಟು ಮಾತಾಡುವುದಕ್ಕಿಂತ ಒಂದು ಔನ್ಸಿನಷ್ಟು ಸಾಧನೆ ಹೆಚ್ಚು ತೂಗುವುದು. ಪ್ರೇಮ ಅಥವಾ ದೈವಿಕ ಪ್ರೀತಿಯ ಒಂದು ತೊಟ್ಟು ಸಾವಿರದಷ್ಟು ಭಾರವಾದ ಪುಸ್ತಕ ಜ್ಞಾನಕ್ಕಿಂತ ತೃಷೆಯನ್ನು ಬೇಗ ಇಂಗಿಸಬಲ್ಲುದು. ಪ್ರೇಮ ಇಂಗಿಸಿದ ಹಾಲು, ಹಾಲಿನ ಕೆನೆ ಅಥವಾ ಬೆಣ್ಣೆಯಂತೆ. ವೇದ ಮತ್ತು ಇತರ ಪವಿತ್ರ ಗ್ರಂಥಗಳ ಜ್ಞಾನಾರ್ಜನೆ ಮಜ್ಜಿಗೆಯಂತೆ. ಶಾಸ್ತ್ರಗಳ ಮೇಲೆ ತರ್ಕ, ಟೀಕೆ, ಭಾಷಣ ಮುಂತಾದುವೆಲ್ಲಾ ಕೀಳು ಮಟ್ಟದ ಮನುಷ್ಯರಿಗೆ. ಅವುಗಳಲ್ಲೇ ಅವರು ಸುಖಪಡಲಿ, ಯಾರಿಗೆ ಮಜ್ಜಿಗೆ ಬೇಕೋ ಅವರು ಅದನ್ನು ಕುಡಿಯಲಿ; ನೀನು ಗಟ್ಟಿಯಾದ ಹಾಲು, ಬೆಣ್ಣೆ, ಗಿಣ್ಣನ್ನು ಹೊಟ್ಟೆ ತುಂಬಾ ತಿನ್ನು.

೩೦೫. ಪವಿತ್ರತೆ, ಸತ್ಯ, ಶಿವ, ಸೌಂದರ್ಯ, ಚಿರ ತುಷಾರಮಂಡಿತ ಕೈಲಾಸ ಪರ್ವತದಂತೆ. ದೇವರು ಕೇವಲ ಪವಿತ್ರ ಹೃದಯದಲ್ಲಿ ಮಾತ್ರ ಪ್ರತಿಬಿಂಬಿಸುವನು. ಪವಿತ್ರ ಹೃದಯದಲ್ಲಿ ಮಹಾ ಆಧ್ಯಾತ್ಮಿಕ ತತ್ತ್ವಗಳು ಸ್ಫುರಿಸುವುವು. ಪರಮಾಣುತತ್ತ್ವ, ಪಂಚ ತನ್ಮಾತ್ರತತ್ತ್ವ, ದೇಹ ತತ್ತ್ವ, ನಕ್ಷತ್ರಸಮೂಹದಗತಿ, ಪದಾರ್ಥವಿಜ್ಞಾನ, ಜ್ಯೋತಿಶ್ಶಾಸ್ತ್ರಾದಿ ಆವಿಶ್ಕಾರಗಳನ್ನು ಹಿಂದಿನ ಯೋಗಿ ಋಷಿಗಳು ಮಾಡಿದ್ದರು. ಇದು

ಹೇಗೆ ಸಾಧ್ಯವಾಯಿತು? ಅವರ ಹತ್ತಿರ ದೂರದರ್ಶಕ ಯಂತ್ರವಾಗಲೀ, ಸೂಕ್ಷ್ಮದರ್ಶಕ ಯಂತ್ರವಾಗಲೀ, ಈಗಿನ ಕಾಲದ ಸಲಕರಣೆ ಸಜ್ಜಿತ ಪ್ರಯೋಗ ಶಾಲೆಗಳೂ ಇರಲಿಲ್ಲ. ಅವರು ಕೇವಲ ತಮ್ಮ ಪ್ರವಿತ್ರ ಮನಸ್ಸಿನ ಆಂತರಿಕ ದೃಷ್ಟಿಯನ್ನು ಅಲ್ಲಿರುವ ವಿಚಾರ ಸಮಸ್ಯೆಯ ಮೇಲೆ ಕೇಂದ್ರೀಕರಿಸಿದುದರ ಫಲವಾಗಿ ಅನೇಕ ಗಹನ ಸತ್ಯಗಳನ್ನು ಕಂಡು ಹಿಡಿದರು ಅಥವಾ ಅವು ಅವರಿಗೆ ಗೋಚರಿಸಿದುವು. ಈಗಿನ ನವನಾಗರಿಕತೆಯ ಮೇಧಾವಿಗಳಿಗೆ ಇದೊಂದು ಅದ್ಭುತ ಆಶ್ಚರ್ಯವಾಗಿದೆ.

೩೦೬. ನಿನಗೆ ದೇವರಲ್ಲಿ ಗಾಢಪ್ರೇಮ, ಜ್ಞಾನ, ಮೋಕ್ಷ ಸಿಕ್ಕಬೇಕಾದರೆ ನಿನ್ನ ಅಂತರಂಗ ಮತ್ತು ಬಹಿರಂಗ ಪರಿಶುದ್ಧವಾಗಿರಬೇಕು. ಇದಕ್ಕೆ ದಾರಿ ಶ್ರೀ ರಾಮಕೃಷ್ಣರು ಹೇಳುತ್ತಿದ್ದಂತೆ, "ಕಾಮ ಕಾಂಚನ ಪರಿತ್ಯಾಗ". ಅಂತಹ ತ್ಯಾಗ ಬಹು ಕಷ್ಟ; ಆದರೆ ಅಸಾಧ್ಯವಲ್ಲ. ಸತತ ಸಾಧನೆ, ತೀವ್ರ ಪರಿಶ್ರಮ ಮತ್ತು ಆಧ್ಯಾತ್ಮಿಕ ನಿಯಮ ಇವು ಎಲ್ಲವನ್ನೂ ಸಾಧ್ಯವಾಗಿ ಮಾಡುವುದು. ಆದರೆ ಈ ಸ್ವಪ್ರಯತ್ನ ಕೂಡ ದೇವರ ಕೃಪೆಯಿಲ್ಲದಿದ್ದರೆ ಅಶಕ್ಯ. ಕೇವಲ ಲಕ್ಷದಲ್ಲಿ ಒಬ್ಬರು ಮುಕ್ತರಾಗುತ್ತಾರೆ; ಲಕ್ಷಾಂತರ ಪಟ ಹಾರಾಡುವಾಗ ಒಂದೆರಡು ಕಿತ್ತುಹೋಗುವಂತೆ. ಆದರೆ ಯಾರಿಗೆ ಗೊತ್ತು? ನೀನೇ ಆ ಒಬ್ಬನಾಗಿರಬಹುದು. ಈ ಶ್ರದ್ಧೆಯಿಂದ ಮುಂದೆ ಹೋಗು.

೩೦೭. ನಾವು ಪಾಪಿಗಳೆಂದು ನಮಗೆ ತಿಳಿದಿದೆ. ನಾವು ಮಾಡುತ್ತಿರುವುದೇನೆಂಬುದು ತಿಳಿದೂ, ದುಃಖಕ್ಕೆ ಕಾರಣವದು ಎಂದು ಗೊತ್ತಿದ್ದರೂ ಪಾಪಮಾಡುವುದನ್ನು ಬಿಡುವುದಿಲ್ಲ. ಮೂರ್ಖರಂತೆ, ಅಜ್ಞಾನಿಗಳಂತೆ ದಡ್ಡರಂತೆ ನಟಿಸಿ, ಕೃತ್ರಿಮ ವ್ಯಸನ ತೋರಿಸುತ್ತೇವೆ. ಯಾರು ಪಾಪಮಾಡುವರೊ ಅವರು ನಾಸ್ತಿಕರು. ಅಂತಹ ಪಾಪಿಗಳಿಗೆ ಆತ್ಮೋದ್ಧಾರದ ಸಂಭವವಾದರೂ ಇದೆ. ಆದರೆ ಯಾರು ಬುದ್ಧಿಪೂರ್ವಕ ಪಾಪ ಮಾಡುವರೋ ಅವರಿಗೆ ಮುಕ್ತಿ ಇಲ್ಲ. ಯಾರು ನಿದ್ರೆಯ ಸೋಗುಹಾಕಿರುವರೊ ಅವರನ್ನು ಯಾರು ತಾನೆ ಎಬ್ಬಿಸಬಲ್ಲರು? ಧರ್ಮ ಮಕ್ಕಳ ಹುಡುಗಾಟಿಕೆಯಲ್ಲ! ಮನಸ್ಸು ಮತ್ತು ಬಾಯಿ– ಮಾತು ಮತ್ತು ಕೆಲಸ– ಇವು ಹೊಂದಿಕೆಯಾಗುವವರೆಗೂ, ಅಂತರಾಳ ಶುದ್ಧವಾಗುವವರೆಗೂ ಯಾವ ಬಗೆಯ ಪ್ರಯೋಜನವನ್ನೂ ಹೊಂದಲಾಗುವುದಿಲ್ಲ.

೩೦೮. ತಂತ್ರ ಅಥವಾ ಮೋಸದಿಂದ ಯಾವ ಮಹತ್ಕಾರ್ಯ

ಸಾಧನೆಯೂ ಆಗುವುದಿಲ್ಲ. ನೀನು ಜನರನ್ನು ಬಾಹ್ಯ ಪ್ರದರ್ಶನ, ಮಾತುಕಥೆ ಇವುಗಳಿಂದ ವಂಚಿಸಬಹುದು. ಆದರೆ ದೇವರ ವಿಷಯದಲ್ಲಿ ಕಪಟ ಏನೇನೂ ಪ್ರಯೋಜನವಿಲ್ಲ. ಕೇವಲ ನಿನ್ನನ್ನು ವಂಚಿಸಿಕೊಳ್ಳುವೆ! ನಿನ್ನ ಆಧ್ಯಾತ್ಮಿಕತೆ, ಪ್ರಾರ್ಥನೆ ಎಲ್ಲಾ ಸೋರುತ್ತಿರುವ ಮಡಕೆಗೆ ನೀರನ್ನು ಹಾಕಿದಂತೆ ನಿಷ್ಫಲ. ಅವಿಶ್ರಾಂತ ದುಡಿತ, ಆತ್ಮಾರ್ಪಣೆ ಇವುಗಳಿಂದ ಮಾತ್ರ ಮಹತ್ಕಾರ್ಯಗಳು ಸಾಧ್ಯ.

೩೦೯. "ನಾನೇನನ್ನೂ ಮಾಡುವುದಿಲ್ಲ", "ನಾನೇನನ್ನೂ ಮಾಡಲಾರೆ" "ನೀನು ನನಗೋಸ್ಕರ ಅದನ್ನು ಮಾಡಿದರೆ ಮಾತ್ರ ಸಾಧ್ಯ",— ಇವು ಕೇವಲ ಮೂರ್ಖರ ಮಾತು. "ನನ್ನ ಬಾಯಿ ಹತ್ತಿರ ತಾ, ಆಗ ನಾನು ತಿನ್ನುತ್ತೇನೆ", ಈ ಬಗೆಯ ಮನೋಭಾವ ವುಳ್ಳವರು ಸತ್ತುಹೋದರೆ ಅವರಿಗೂ, ಸಮಾಜಕ್ಕೂ ಎಷ್ಟೋ ಒಳ್ಳೆಯ ದಾಗುವುದು. ಪ್ರಕೃತಿ ನಿಯಮದಂತೆ ಅವರು ತಮ್ಮ ಶಕ್ತಿ, ಚೈತನ್ಯ ವನ್ನು ನಿಧಾನವಾಗಿ ಏಕ ಪ್ರಕಾರ ಕಳೆದುಕೊಂಡು ಕಡೆಗೆ ಸತ್ತೇಹೋಗು ತ್ತಾರೆ. ಯಾವಾಗಲೂ ಕಾಣಿಸದಂತೆ ಹೊರಗಡೆಯವರಿಂದ ಸಹಾಯ ನಿರೀಕ್ಷಿಸುವುದು ಸತ್ತಂತೆಯೇ ಸರಿ. ಸ್ವಾತಂತ್ರ್ಯವೇ ಸ್ವರ್ಗ, ಪರಾವ- ಲಂಬನವೇ ನರಕ.

೩೧೦. ಕರ್ಮಬೋಧೆಯನ್ನು ಒಪ್ಪಿಕೊಳ್ಳುವವನು ಅದೃಷ್ಟವಾದಿ ಏಕಾಗಬೇಕು? ಕರ್ಮದ ನಿಯಮ ಮಾನವನಿಗೆ ಸ್ವಾತಂತ್ರ್ಯಸಂದೇಶ ವನ್ನು ಎಲ್ಲಾ ಕಾಲಕ್ಕೂ ಸಾರಿದೆ. ನಾನು ನನ್ನ ಕೆಟ್ಟ ಕರ್ಮದಿಂದ ಬಂಧನ ಕ್ಕೀಡಾಗಿ ಹೀನಸ್ಥಿತಿಗಿಳಿದರೆ ನನ್ನ ಸತ್ ಶಕ್ತಿಯಿಂದ ಖಂಡಿತ ಉದ್ಧಾರ ವಾಗಬಲ್ಲೆ ಎಂಬುದು ಸಕಾರಣವಾಗಿದೆ. ನಾನು ನನ್ನ ಬಂಧನಕ್ಕೆ ಕಾರಣ ವಾದರೆ ಆ ಬಂಧನದಿಂದ ಪಾರಾಗಲೂ ಬಲ್ಲೆ. ಇದರಲ್ಲಿರುವ ವ್ಯತ್ಯಾಸ ಕ್ರಿಯೆ ಮತ್ತು ಇಚ್ಛಾಶಕ್ತಿಯಲ್ಲಿದೆ. ನಾವು ಏತಕ್ಕೆ ನಮ್ಮ ಕೆಟ್ಟ ಕರ್ಮದ ಬಂಧನವನ್ನು ಯೋಗ್ಯ ನಿರ್ಧಾರ, ಒಳ್ಳೆಯ ಕೆಲಸ, ಪ್ರಾಮಾಣಿಕ ಜೀವನ ದಿಂದ ಕತ್ತರಿಸಿಹಾಕಿ ನಮ್ಮನ್ನು ಬಂಧ ವಿಮುಕ್ತರನ್ನಾಗಿ ಮಾಡಿಕೊಳ್ಳ ಬಾರದು? ಎಂದೆಂದೂ ಮುಕ್ತಿ ಸಾಧ್ಯವೇ ಇಲ್ಲದಿದ್ದ ಪಕ್ಷಕ್ಕೆ ಮನುಷ್ಯ ಜಾತಿಗೇ ಹುಚ್ಚು ಹಿಡಿಯುತ್ತಿತ್ತು. ಪಾಪಾಚರಣೆಯಿಂದ ನಮಗೆ ಹೆಚ್ಚು ಲಾಭವಾಗಿ ನಮ್ಮ ಇಷ್ಟಾರ್ಥ ಸಿದ್ಧಿಸಿದರೆ ಏಕೆ ನಾವು ಆತ್ಮಾರ್ಪಣೆಮಾಡಿ ಸತ್ಕೃತ್ಯಗಳನ್ನೂ, ಆಧ್ಯಾತ್ಮಿಕತೆಯನ್ನೂ ಪಡೆಯಲು ಹೀಗೆ ಹೋರಾಡ

ಬೇಕು? ಹೀಗಿದ್ದ ಪಕ್ಷಕ್ಕೆ ಆಧ್ಯಾತ್ಮಿಕತೆ, ಒಳ್ಳೆಯತನ, ಸಹಾನುಭೂತಿ, ಪ್ರೇಮ, ಪರಸ್ಪರ ಸೌಹಾರ್ದ ಎಲ್ಲವೂ ಈ ಪ್ರಪಂಚದಿಂದ ಕಣ್ಮರೆಯಾಗಿ ಮನುಷ್ಯರು ಕಾಡುಮೃಗಗಳಾಗುತ್ತಿದ್ದರು.

೩೧೧. ಅನಂತನಾದ ಭಗವಂತನು ಇಷ್ಟೊಂದು ಸಣ್ಣ ಆಕಾರವುಳ್ಳ ಮನುಷ್ಯ ದೇಹದಲ್ಲಿ ಹೇಗೆ ಅವತರಿಸುವನು? ಈ ಪ್ರಶ್ನೆಗೆ ಸ್ವಾಮಿ ವಿವೇಕಾನಂದರು, "ಹೌದು, ದೇವರು ಅನಂತನೆಂಬುದು ನಿಜ. ಆದರೆ ನೀನು ಅನಂತನೆಂಬುದನ್ನು ನಿನ್ನ ಸ್ಥೂಲ ಭಾವನೆಗಳ ಪ್ರಕಾರ ಇಡೀ ವಿಶ್ವವನ್ನೇ ವ್ಯಾಪಿಸಿರುವ ದೊಡ್ಡದೊಂದು ಭೌತಿಕ ವಸ್ತುವೆಂದು ತಿಳಿದಿರುವೆ. ಅದರಿಂದಲೇ ಅಷ್ಟೊಂದು ದೊಡ್ಡ ವಿಶಾಲವಾದ ಅಸ್ತಿತ್ವವಿರುವ ದೇವರು ಅಷ್ಟು ಚಿಕ್ಕ ಮಾನವ ಶರೀರದಲ್ಲಿ ಹುದುಗಿರಲು ಹೇಗೆ ಸಾಧ್ಯವೆಂದು ನಿಮಗೆಲ್ಲಾ ಆಶ್ಚರ್ಯವಾಗಬಹುದು. ನಿಜವಾಗಿ ದೇವರ, 'ಅನಂತತೆ' ಎಂದರೆ ಆತನ ಮೇರೆಯಿಲ್ಲದ ಆಧ್ಯಾತ್ಮಿಕ ಸಾರ. ಆದ್ದರಿಂದ ಆತನು ಮಾನವ ಶರೀರದಲ್ಲಿ ಅವತಾರ ಮಾಡಿದುದರಿಂದ ಅದಕ್ಕೆ ನಿರ್ಬಂಧವೇನೂ ಇಲ್ಲ" ಎಂದರು.

೩೧೨. ಯಾರು ನಿರ್ಗುಣ ಬ್ರಹ್ಮನೋ ಅವನೇ ಸಗುಣ ಬ್ರಹ್ಮ. ಸಗುಣ ಬ್ರಹ್ಮನಿಗೂ ದೇವರ ಅವತಾರಕ್ಕೂ ಏನೂ ವ್ಯತ್ಯಾಸವಿಲ್ಲ. ಆದರೆ ಒಬ್ಬ ಅವತಾರ ಪುರುಷನಿಗೂ, ಸಾಧಾರಣ ಜೀವನಿಗೂ ಅಂತರವಿದೆ. ಮಾನವ ಕೇವಲ ತನ್ನ ಕರ್ಮ ಫಲದಿಂದ ಪುನಃಪುನಃ ಹುಟ್ಟುತ್ತಾನೆ. ಆದರೆ ಅವತಾರ ಪುರುಷ ಕೇವಲ ತನ್ನ ದೈವಿಕ ಇಚ್ಛೆಯಿಂದ ಈ ಪ್ರಪಂಚವನ್ನು ಕಾಪಾಡುವುದಕ್ಕೆ, ಅಧರ್ಮ ನಾಶಕ್ಕೆ ಧರ್ಮದ ಪುನರುದ್ಧಾರಕ್ಕೆ, ಪವಿತ್ರ ಪುರುಷರ ಮತ್ತು ಭಕ್ತರ ಮೇಲೆ ತನ್ನ ಕೃಪಾಕಟಾಕ್ಷವನ್ನು ಬೀರುವುದಕ್ಕೆ, ಪ್ರತಿಯುಗದಲ್ಲಿಯೂ ಮನುಷ್ಯ ಜನ್ಮಧಾರಣೆ ಮಾಡಿ ಬರುವನು. ಅದೂ ಅಲ್ಲದೆ ಜೀವರು ಸತ್ತ್ವ, ರಜಸ್ಸು, ತಮೋಗುಣಗಳಿಂದ ಕೂಡಿದ ಪ್ರಕೃತಿಗೆ ಅಧೀನನಾಗಿ ಹುಟ್ಟುತ್ತಾರೆ. ಅವತಾರ ಪುರುಷನು ಪ್ರಕೃತಿಗಾಗಲಿ, ಈ ಮೂರು ಗುಣಗಳಿಗಾಗಲಿ ಅಧೀನನಲ್ಲ. ಅವನು ಅವುಗಳ ಯಜಮಾನ, ಮೇಲ್ವಿಚಾರಕ. ಅವತಾರದಲ್ಲಿ ದೇವರೇ ಪ್ರತ್ಯಕ್ಷನಾಗುವನು. ಕೇವಲ ಮನುಷ್ಯದೇಹದ ಬಾಹ್ಯಕವಚಮಾತ್ರ ಪಂಚಭೂತಾತ್ಮಕವಾಗಿದೆ.

೩೧೩. ನಾವು ಯಾವುದನ್ನು ಮಹತ್ವಪೂರಿತ, ಭವ್ಯಗುಣಗಳೆಂದು ಭಾವಿಸುವೆವೊ ಅವೆಲ್ಲಾ ಅವತಾರ ಪುರುಷನಲ್ಲಿ ಸ್ಪಷ್ಟವಾಗಿರುವುದನ್ನು

ನೋಡಬಹುದು. ಅವನು ಎಲ್ಲಾ ದೈವಿಕ ಗುಣಗಳ ಪ್ರತ್ಯಕ್ಷ ಸಮಾವ, ತಾನು ಧರಿಸಿದ ಈ ಮಾನವ ದೇಹದಲ್ಲಿ ಅವನು ಬಗೆಬಗೆಯ ರೀತಿಯಲ್ಲಿ ತಾನೇ ಆಟವಾಡುವನು. ಆದರೆ ಅವತಾರ ಪುರುಷನು ಕೇವಲ ಕೆಲವು ಆರಿಸಿದ ಪವಿತ್ರ ಅಂತರಂಗ ಭಕ್ತರಿಗೆ ಮಾತ್ರ ತಾನು ಈ ಜಗತ್ತಿಗೆ ಬಂದ ಕಾರ್ಯಸಾಧನೆಯು ಈಡೇರುವುದಕ್ಕಾಗಿ ತನ್ನ ನಿಜಸ್ವಭಾವವನ್ನು ಪ್ರಕಟಿಸುವನು. ಆತನು ಸಂಪೂರ್ಣವಾಗಿ ಒಬ್ಬ ಮಾನವ ಜೀವಿಯಂತೆ ವರ್ತಿಸುವುದರಿಂದ ಸಾಧಾರಣ ಮನುಷ್ಯರು ಆತನನ್ನು ಗುರುತಿಸಲು ಅಸಮರ್ಥರು. ಆತನ ಜೀವಿತ ಕಾಲದಲ್ಲೇ ಆತನನ್ನು ಅವಹೇಳನಮಾಡುವರು.

೩೧೪. ಸ್ವಪ್ರಯತ್ನ ಮತ್ತು ಭಗವತ್ಕೃಪೆ— ಇವೆರಡೂ ಹೇಗೆ ಸಮಂಜಸವಾಗುವುದು — ಪರಸ್ಪರ ವಿರೋಧದಂತೆ ತೋರಿದರೂ ಅವು ಹಾಗಿಲ್ಲ. ಸ್ವಪ್ರಯತ್ನವೂ ಕೂಡ ದೇವರು ಕೊಟ್ಟ ದಾನ, ಆತನ ಕೃಪೆ. ಧೈರ್ಯವಿಲ್ಲದ ಭಕ್ತರು ಕೆಳಗಿನ ದರ್ಜೆಗೆ ಸೇರಿದವರು. ಮಹಾವೀರ, ಅರ್ಜುನ, ಪ್ರಹ್ಲಾದರು ಎಂತಹ ಗಂಡುಗಲಿಗಳು ಮತ್ತು ಶೂರರಾದ ಭಕ್ತರು. ಹನುಮಂತ ಸಮುದ್ರವನ್ನು ಹಾರುವುದಕ್ಕೆ ಕೂಡ ಭಯಪಡಲಿಲ್ಲ. ಅವನು ಅದನ್ನು ಒಂದೇ ಹಾರಿಗೆ, "ರಾಮನಿಗೆ ಜಯವಾಗಲಿ" ಎಂದು ದಾಟಿದನು. ಪ್ರಹ್ಲಾದ ಪದೇ ಪದೇ ಮೃತ್ಯುವಿನ ಬಾಯಿಗೆ ಬಿದ್ದರೂ ಸ್ವಲ್ಪವೂ ಎದೆಗೆಡಲಿಲ್ಲ. ವಿಷ್ಣುವನ್ನು ಮರೆಹೊಕ್ಕು ತನ್ನ ಮನಸ್ಸನ್ನು ಆತನಲ್ಲಿ ಐಕ್ಯಮಾಡಿದ್ದನು. ದೇವರೇ ಆಗ ಪ್ರತ್ಯಕ್ಷವಾಗಿ ಬಂದು ಅವನನ್ನು ಕಾಪಾಡಿದನು. ಅರ್ಜುನನ ಶೌರ್ಯ ಲೋಕಪ್ರಸಿದ್ಧಿಯಾಗಿದೆ. ಪುರಾಣದಲ್ಲಿ ಇಂತಹ ನೂರಾರು ಹೆಸರಾಂತ ನಿದರ್ಶನಗಳಿವೆ.

೩೧೫. ವೀರ ಭಕ್ತನು ಹೀಗೆ ಹೇಳುವನು: "ಜಗನ್ಮಾತೆಯ ಶಿಶುವಾಗಿರುವ ನಾನು, ಭಗವಂತನ ದಾಸನಾದ ನಾನು, ಹೆದರುವುದೆಂದರೇನು? ನಾನು ಮಾಡಲಾಗದ ಕೆಲಸವೇನಿದೆ?" ಆ ವೀರಭಕ್ತನು ಹೀಗೆ ಘೋಷಿಸುತ್ತಾನೆ:

"ನಾನು ಈ ಪ್ರಪಂಚದಲ್ಲಿ ಯಾರಿಗೆ ಅಂಜುವೆ? ಜಗನ್ಮಾತೆಯೆ ಅವನ ರಾಣಿಯಾಗಿರುವಳು. ಬ್ರಹ್ಮಮಯಿಯ ಸ್ವತ್ತನ್ನು ನನ್ನ ಭಕ್ತಿಯ ಶಕ್ತಿಯಿಂದ ಕೊಳ್ಳುವೆನು." ಪುನಃ, "ಸಾಧನ ರಣಭೂಮಿಗೆ ಬಾ ಹೇ ಜಗಜ್ಜನನಿ. ನೋಡುವ ಯಾರು ಸೋಲುವರೋ, ತಾಯೋ, ಮಗುವೊ? ನಿನ್ನೊಂದಿಗೆ ಯುದ್ಧಮಾಡಿ ಒಂದೇ ಸರಿ ನಿರ್ಧರಿಸುವೆನು. ಸಾವಿನಲ್ಲಿ

ಏನು ಅಂಜಿಕೆ ಇದೆ? ಡಮರು ಬಾರಿಸಿ ಸುಲಭವಾಗಿ ಮುಕ್ತಿ ಐಶ್ವರ್ಯ ವನ್ನು ಪಡೆಯುವೆನು. ಕಾಳಿಕಾಮಾತೆಯ ಪವಿತ್ರನಾಮೋಚ್ಚಾರಣೆ ಯನ್ನು ನನ್ನ ನಾಲಿಗೆ ಮಾಡುತ್ತಿದೆ. ಯಾರು ನನ್ನೊಂದಿಗೆ ಯುದ್ಧ ಮಾಡಬಲ್ಲರು? ಹೇ ಜಗನ್ಮಾತೆ, ನೀನೇ ನನಗೆ ಕೊಟ್ಟ ಶಕ್ತಿಯ ಆಧಾರ ದಿಂದ ನಿನ್ನನ್ನು ಸಮರದಲ್ಲಿ ಗೆಲ್ಲುವೆನು" ಎಂದು ಸಾಧಕ ರಸಿಕ ಚಂದ್ರನು ಹೇಳುವನು.

ಗುರುಮಹಾರಾಜರು ಇದನ್ನು ಢಕಾಯಿತಿ ಭಕ್ತ ಎಂದು ಕರೆಯು ತ್ತಿದ್ದರು. ಅಂದರೆ ಆವೇಶದಿಂದ ಜಗನ್ಮಾತೆಯ ರತ್ನಭಂಡಾರಕ್ಕೆ ನುಗ್ಗಿ "ಮಾರ್, ಮಾರ್" ಎಂದು ಉಚ್ಚರಿಸುತ್ತಾ ದೋಚಿಕೊಳ್ಳುವಂತೆ.

೩೧೬. ಯಾರು ಗಂಡುಗಲಿಗಳೋ ಅವರ ಮೇಲೆ ದೇವರಿಗೆ ಪ್ರೀತಿ. ಅವರಿಗೆ ಸಹಾಯ ಮಾಡುವನು. ಧೈರ್ಯ, ಉತ್ಸಾಹ, ಆಸಕ್ತಿಹೀನ ಭಕ್ತರು ಪೆಚ್ಚುಮೋರೆಯಿಂದಿರುತ್ತಾರೆ. ಅವರೇ ತಾಮಸಿಕ ಪ್ರಕೃತಿ ಯವರು. ಅವರು ಯೋಚಿಸುವುದೇನೆಂದರೆ, "ನಾವು ದೇವರ ಸ್ಮರಣೆಯನ್ನು ಬೆಳಿಗ್ಗೆ ಮತ್ತು ಸಂಜೆ ಮಾಡುತ್ತೇವೆ. ಅದರಿಂದ ಸ್ವಲ್ಪ ಸಂತೋಷವೂ ಸಿಗುವುದು. ಯಥಾಕಾಲದಲ್ಲಿ ಅವನು ನಮಗೆ ದಯೆ ತೋರಿ ಗುರಿಯೆಡೆಗೆ ಕರೆದೊಯ್ಯುವನು. ಈಗ ನಮಗೇನು ದೊರಕಿರು ವುದೋ ಅದೇ ಸಾಕು." ಅನೇಕ ಜನ್ಮಗಳು ಕಳೆದ ಮೇಲೆ ಅವರಿಗೆ ದೇವರಿಗಾಗಿ ವ್ಯಾಕುಲತೆ ಬರುವುದು. ಇವರು ಹೆದರಿಕೆಯಿಂದ ಕನ್ನ ಹಾಕುವ ಸಣ್ಣ ದರೋಡೆಗಾರರಂತೆ. ಕೈಗೆ ಸಿಕ್ಕಿದುದನ್ನು ತೆಗೆದು ಕೊಂಡು ಅದರಲ್ಲೇ ತೃಪ್ತಿ ಹೊಂದುವರು. ಆದರೆ ಅವರೂ ಕೂಡ ಕಳ್ಳ ತನದಲ್ಲಿ ನಿಪುಣರಾಗಿರಬೇಕು. ಏಕೆಂದರೆ ಸಂಪೂರ್ಣ ಎಚ್ಚೆತ್ತಿರುವ ಯಜಮಾನನ ಮನೆಯ ಕಳ್ಳತನ ಇದು.

೩೧೭. ಸ್ವಾಮಿ ವಿವೇಕಾನಂದರಿಗೆ ಯಾರಾದರೂ ನಿರ್ಗತಿಕರಂತೆ ದೈನ್ಯದಿಂದ ವರ್ತಿಸಿದರೆ ಸ್ವಲ್ಪವೂ ಸಹಿಸುತ್ತಿರಲಿಲ್ಲ. ಅವರು ಅದನ್ನು ದ್ವೇಷಿಸುತ್ತಿದ್ದರು. "ಅದು ನಾಸ್ತಿಕತನ! ಒಂದು ಬಗೆಯ ರೋಗ! ಹುಚ್ಚು!" ಒಬ್ಬನು ಯಾವಾಗಲೂ ತನ್ನನ್ನು ಹಳಿದುಕೊಳ್ಳುತ್ತಾ, "ನನ್ನಲ್ಲಿ ಏನೂ ಇಲ್ಲ, ನಾನು ನಿಷ್ಪ್ರಯೋಜಕ" ಎಂದು ಯೋಚಿಸುತ್ತಿದ್ದರೆ ಅವನು ಹಾಗೆಯೇ ಕೆಲಸಕ್ಕೆ ಬಾರದವನಾಗುತ್ತಾನೆ. ಹಾಗೆ ಹೇಳುವುದು ದೈನ್ಯತೆಯ ಅಥವಾ ಮರೆಮಾಚಿದ ಅಹಂಭಾವನೆ? ನಾನು ಪಾಪಿ,

ಪೂರ್ತಿ ಕೆಲಸಕ್ಕೆ ಬಾರದವನು, ನಾನು ಶಕ್ತಿಹೀನ— ಈ ರೀತಿ ಚಿಂತಿಸುತ್ತಿದ್ದರೆ ಅವನು ಇನ್ನೂ ಹಾಗೆಯೇ ಆಗುತ್ತಾನೆ. ಆತ್ಮ ಸಾಕ್ಷಾತ್ಕಾರ ದುರ್ಬಲರಿಗೆ ಅಸಾಧ್ಯ. ಯಾರು ದೇಹ ಮನಸ್ಸಿನಲ್ಲಿ ದುರ್ಬಲರಾಗಿದ್ದಾರೊ ಅವರು ಧರ್ಮ ಸಾಧನೆ ಮಾಡಲಾರರು. ಅದು ಅವರಿಗಲ್ಲ. ಅವರಿಂದ ಯಾವ ಯೋಗ್ಯ ಕೆಲಸವೂ ಅಸಾಧ್ಯ. ಅಂತಹ ಕೆಟ್ಟ ಭಾವನೆಗಳನ್ನು ಗಾಳಿಯಲ್ಲಿ ತೂರು. ಅದಕ್ಕೆ ಬದಲಾಗಿ ವಾಸ್ತವಿಕವಾಗಿಯೇ, ನಿಜವಾಗಿ ನಿನ್ನಲ್ಲಿ ಅಪಾರ ಶಕ್ತಿ ಇದೆ. ಆ ಶಕ್ತಿಯನ್ನು ಜಾಗೃತಗೊಳಿಸಬೇಕು. ಯಾರು ಸಿಂಹ ಸದೃಶನೆಂದು ತಿಳಿಯುವನೋ ಅವನು, ಪಂಜರವನ್ನೊಡೆದು ಹೋಗುವ ಸಿಂಹದೋಪಾದಿ ಈ ಜಗತ್ತಿನ ಮಾಯಾಜಾಲದಿಂದ ಬಿಡಿಸಿಕೊಳ್ಳುವನು. ನೀನು ಧೀರನಾಗಿರಬೇಕು. ಅಭೀಃ, ಅಭೀಃ! ಅಭಯ, ಅಭಯ! ನೀನು ನಿವೃತ್ತಿಮಾರ್ಗದಲ್ಲಿರು ಅಥವಾ ಪ್ರವೃತ್ತಿಮಾರ್ಗದಲ್ಲಿರು. ಭಯವನ್ನು ಕಾಲಿನಿಂದ ಮೆಟ್ಟಿ ನಿಲ್ಲು. ಇಲ್ಲದಿದ್ದಲ್ಲಿ ನೀನು ಎಂದೆಂದಿಗೂ ಈಗಾಗಲೇ ನೀನಿರುವ ಅಂಧಕಾರದಲ್ಲೆ ಮುಳುಗಿರುವೆ.

೩೧೮. ನಿನಗೆ ಮತ್ತು ಇತರರಿಗೆ ಕಲ್ಯಾಣಕಾರಿಯಾದ ಕರ್ಮವೆಲ್ಲ ಧರ್ಮ; ಉಳಿದುದೆಲ್ಲ ಅಧರ್ಮ.

೩೧೯. ಯಾರಿಗೆ ಅಂತರಾಳದಲ್ಲಿ ಭಗವತ್ಸಾಕ್ಷಾತ್ಕಾರದ ನಿಜವಾದ ಆಸೆಯಿಲ್ಲವೊ, ಯಾರಿಗೆ ಮುಕ್ತಿಗಾಗಿ ತೃಷೆಯಿಲ್ಲವೊ, ಅಂತಹವರಿಗೆ ನೀನು ಎಷ್ಟು ಬುದ್ಧಿವಾದ ಉಪದೇಶ ಮಾಡಿದರೂ ಎಲ್ಲ ವ್ಯರ್ಥ. ಅವರು ಒಂದು ಕಿವಿಯಿಂದ ಕೇಳಿ ಮತ್ತೊಂದು ಕಿವಿಯಿಂದ ಬಿಡುವರು. ನಮ್ಮ ದೇಶದಲ್ಲಿ ಅನಕ್ಷರಸ್ಥ ಹಳ್ಳಿಯವರೂ ಕೂಡ ತತ್ತ್ವಜ್ಞಾನಿಗಳು. ಅವರು ಸಹಜವಾಗಿ ಮಹಾ ಸತ್ಯಗಳನ್ನು ಅನೇಕ ಪಾಶ್ಚಾತ್ಯ ಪಂಡಿತರಿಗಿಂತ ಚೆನ್ನಾಗಿ ಅರ್ಥ ಮಾಡಿಕೊಂಡಿದ್ದಾರೆ. "ಬ್ರಹ್ಮಸತ್ಯ–ಜಗತ್ತು ಮಿಥ್ಯೆ" ನಮ್ಮ ಚಿಕ್ಕಂದಿನಿಂದಲೂ ಇದನ್ನು ಕೇಳುತ್ತೇವೆ. ನೆಲ ಹಸನಾಗಿಲ್ಲದೆ ಸಕಾಲದಲ್ಲಿ ಒಳ್ಳೆ ಬೀಜ ಬಿತ್ತದೆ ಹೋದರೆ ಹೇಗೆ ತಾನೆ ನಿರೀಕ್ಷಿಸಿದಷ್ಟು ಫಲ ದೊರಕುವುದು? ಯಾರಿಗೆ ಪ್ರಾಪಂಚಿಕ ಆಸೆ ಬತ್ತಿಹೋಗಿದೆಯೋ ಅವರ ಭಕ್ತಿ ಒಂದು ಹುಲ್ಲು ಮೆದೆಗೆ ಬಿದ್ದ ಬೆಂಕಿಯ ಕಿಡಿಯಂತೆ ಹತ್ತಿ ಉರಿಯುತ್ತದೆ. ಲಾಲಾ ಬಾಬುವು ಒಬ್ಬ ಅಗಸನ ಬಾಯಿಂದ "ವಾಸನೆಗಳಿಗೆ ಬೆಂಕಿ ಹಚ್ಚಿ," ಎಂಬ ಒಂದೇ ಒಂದು ಮಾತನ್ನು ಕೇಳಿ ಸಂಸಾರ ತೊರೆದು ಹೋದನು.

ಬಿಲ್ವಮಂಗಳ ಒಬ್ಬ ಸೂಳೆಯ ನಿಂದೆಯಿಂದ ಬುದ್ಧಿ ಬಂದು ಎಚ್ಚೆತ್ತನು. ತಕ್ಷಣವೇ ಪ್ರಪಂಚ ತ್ಯಾಗಮಾಡಿ ಕೃಷ್ಣನ ಪ್ರೇಮಭಿಕ್ಷುಕನಾದನು. ಬೃಂದಾವನದಲ್ಲಿ ಗೋಪಿಯರು ಭಕ್ತಿಯಿಂದ ಅದ್ಭುತವಾದ ತಪಸ್ಸನ್ನು ಮಾಡಿ ತಮ್ಮ ಗುರಿಯನ್ನು ಸೇರಿದರು. ಯಾರಿಗೆ ಈ ಜನ್ಮದಲ್ಲಿ ಸಾಕ್ಷಾತ್ಕಾರ ವಾಗಬೇಕೆಂಬ ಇಚ್ಛೆ ಇದೆಯೋ ಅವರಿಗೆ ಇದೇ ರೀತಿ ಆಗುವುದು.

೩೨೦. ಸಂಪೂರ್ಣ ಪ್ರಾಮಾಣಿಕನಾಗಿರು. ನಿನ್ನ ಪಾಪವನ್ನೆಲ್ಲಾ ದೇವರು ಕ್ಷಮಿಸುವನು. ಪ್ರಾಮಾಣಿಕತೆ ನಿನ್ನನ್ನು ಪಾಪರಾಶಿಯಿಂದ ಉದ್ಧಾರಮಾಡುವುದು. ಸತ್ಯನಿಷ್ಠನಾದ ಮನುಷ್ಯನು ನಿಜವಾಗಿ ಪಾಪಿಷ್ಠ ನಾದರೂ ಭಗವಂತನ ದಯೆಯಿಂದ ಕಾಲಕ್ರಮೇಣ ಸಾಧುವಾಗುವನು.

೩೨೧. ಜೀವನ ಬಂಜರು ಭೂಮಿಯಲ್ಲ. ಸಾಕಷ್ಟು ಲಕ್ಷ್ಯಕೊಡದೆ ಸಾಗುವಳಿ ಇಲ್ಲದೆ, ಕಾಡುಮರಗಳು, ಕಾಡುಪ್ರಾಣಿಗಳು, ಹರಿದಾಡುವ ಹಾವು, ಚೇಳುಗಳ ಬೀಡಾಗಿ ಯಾವಾಗಲೂ ಭಯ ಹುಟ್ಟಿಸುವ ಅರಣ್ಯ ವಾಗಿದೆ. ಈ ಭೂಮಿಯನ್ನು ಅಂದರೆ ಮನುಷ್ಯನ ಜೀವನವನ್ನು ಎಚ್ಚರಿಕೆ ಯಿಂದ ಕೃಷಿಮಾಡಿದರೆ, ಭಕ್ತಿ ಶ್ರದ್ಧೆಯಿಂದ ಉಪದೇಶಕ್ಕೆ ಅನುಗುಣವಾಗಿ ಸಾಧನೆ ಮಾಡಿದರೆ, ಅಮೋಘವಾದ ಸುಖಶಾಂತಿ ಆನಂದವನ್ನುಂಟು ಮಾಡುವುದು. ಸಾಧಕ ರಾಮ ಪ್ರಸಾದ ಹೀಗೆ ಹಾಡಿದ್ದಾನೆ.

"ಹೇ ಮನಸ್ಸೆ! ನಿನಗೆ ಹೇಗೆ ಉಳಬೇಕೆಂಬುದು ಗೊತ್ತಿಲ್ಲ. ಮಾನವ ಜೀವನವೆಂಬ ಇಂತಹ ಫಲವತ್ತಾದ ಭೂಮಿ ಬಂಜರು ಬಿದ್ದಿದೆ. ಇದರಿಂದ ನಿನಗೆ ಚಿನ್ನ ವಜ್ರಗಳು ಸಿಕ್ಕಬಹುದಾಗಿತ್ತು!"

೩೨೨. ಈ ಪ್ರಪಂಚದಲ್ಲಿರುವ ಯಾವುದೂ ಜಡವಲ್ಲ. ನಿರ್ಜೀವ ವಲ್ಲ. ಯಾವುದನ್ನು ನಾವು ಹಾಗೆ ಕರೆಯುತ್ತೇವೆಯೊ ಅದು ಕೇವಲ ತಮಸ್ಸಿನಿಂದ ಅಂಧಕಾರ ಅಜ್ಞಾನದಿಂದ ಮುಚ್ಚಲ್ಪಟ್ಟ ಅರಿವು ಅಥವಾ ಬುದ್ಧಿಯಲ್ಲದೆ ಬೇರೆಯಲ್ಲ. ಯಾವಾಗ ಆ ತಮಸ್ಸಿನ ಹೊದಿಕೆಯನ್ನು ತೆಗೆಯುವೆವೋ ಮಾಯೆಯ ಅಂಧಕಾರ ಮಾಯವಾಗಿ ಪವಿತ್ರ ಆತ್ಮಶಕ್ತಿ ಅಥವಾ ಪರಮಾತ್ಮನು ಪ್ರತ್ಯಕ್ಷನಾಗುವನು. ಆಗ ಪ್ರಪಂಚವೆಲ್ಲ ಆತ್ಮ ಮಯವಾಗಿ ಆನಂದದ ಚಿಲುಮೆಯಂತೆ ಹರಿಯುವುದು.

೩೨೩. ಈ ಭೂಮಂಡಲದಲ್ಲಿ ಯಾವ ಕ್ರಿಯೆಯಾಗಲಿ, ಆಲೋಚನೆ ಯಾಗಲಿ, ಶಕ್ತಿಯಾಗಲಿ ಲೋಪವಾಗುವುದಿಲ್ಲ. ಯಾವುದಾದರೊಂದು ಸಮಯದಲ್ಲಿ ಯಾವುದೋ ನೀನರಿಯದ ರೀತಿಯಲ್ಲಿ ಅದು ನಿನ್ನ ಜೀವನ

ದಲ್ಲಾಗಲಿ ಅಥವಾ ಇತರರ ಜೀವನದಲ್ಲಾಗಲಿ, ಈ ಜನ್ಮ ಅಥವಾ ಇನ್ನೊಂದು ಜನ್ಮದಲ್ಲಿ, ಆ ಪ್ರೇರಣೆಯು ಒಳ್ಳೆಯ ಅಥವಾ ಕೆಟ್ಟ ಸ್ವಭಾವಕ್ಕನುಗುಣವಾಗಿ ಸುಖ ಅಥವಾ ದುಃಖ ರೂಪದಲ್ಲಿ ಫಲಿಸುತ್ತದೆ. ಆದ್ದರಿಂದ ಭವ್ಯಗುಣಗಳುಳ್ಳ ನೀನು ಉತ್ಕೃಷ್ಟವಾದ ಒಳ್ಳೆಯದಕ್ಕೆ ಇಚ್ಛಿಸುತ್ತಿದ್ದರೆ ಪಾಪದ ಹಾದಿಯನ್ನು ಬಿಟ್ಟು ಸತ್ಯದ ಹಾದಿಯನ್ನು ಹಿಡಿ.[1]

೩.೨೪. ಸಪ್ತಶತಿ ಮಾರ್ಕಂಡೇಯ ಪುರಾಣದ ಒಂದು ಭಾಗ. ಇದು ಶಕ್ತಿಯ ಆರಾಧಕರ ಪವಿತ್ರ ಗ್ರಂಥ. ಇದನ್ನು ಪ್ರತಿದಿನವೂ ಅಥವಾ ಪ್ರತ್ಯೇಕ ಚಾಂದ್ರಮಾನ ದಿನಗಳಲ್ಲಿ ಶಾಸ್ತ್ರೋಕ್ತವಾಗಿ ಅಶುಭಗ್ರಹ ಅಥವಾ ದೇವತೆಗಳ ಶಾಂತಿಗಾಗಿ, ಮುಂಬರುವ ಅಥವಾ ಸಮೀಪಿಸಿರುವ ಹಾನಿಯ ನಿವಾರಣೆಗಾಗಿ, ಭಾಗ್ಯಗಳಿಸಲು ಅಥವಾ ಗುಣವಾಗದ ಖಾಯಿಲೆಯೊಂದರಿಂದ ಬಿಡುಗಡೆ ಹೊಂದಲು, ಶಾಸ್ತ್ರೋಕ್ತವಾದ ನಿಯಮದಿಂದಲೂ, ಆಚಾರ ಪೂರ್ವಕವಾಗಿ ಪಾರಾಯಣ ಮಾಡುತ್ತಾರೆ. ಸ್ವಾಮಿ ವಿವೇಕಾನಂದರು, ಜಗನ್ಮಾತೆಯ ಪೂಜೆ ಮತ್ತು ಧ್ಯಾನ ಮಾಡುವಾಗ ಅಂತಹ ಪರಿಪೂರ್ಣವಾದ ಮತ್ತು ಸರ್ವವ್ಯಾಪಿಯಾದ ಭಗವಂತನ ಭಾವನೆಯನ್ನು ವರ್ಣಿಸುವ ಸಪ್ತಶತಿಯಂತಹ ಧಾರ್ಮಿಕಗ್ರಂಥ, ಪ್ರಪಂಚದ ಧರ್ಮಗಳಲ್ಲೆಲ್ಲಿಯೂ ಇಲ್ಲ ಎನ್ನುತ್ತಿದ್ದರು. ಅದರಲ್ಲಿ ಒಂದು,ಎಲ್ಲಾ ಸ್ತ್ರೀಯರನ್ನೂ ತಾಯಿಯಂತೆ, ಜಗನ್ಮಾತೆಯ ಅಂಶದಂತೆ ನೋಡಿ ಅವರನ್ನು ಗೌರವಿಸುವುದು. ಶ್ರೀ ರಾಮಕೃಷ್ಣರ ಜೀವನದಲ್ಲಿ ಈ ಭಾವ ಅಸದೃಶವಾಗಿ ಚಿತ್ರಿಸಲ್ಪಟ್ಟಿದೆ.

೩.೨೫. ಸಪ್ತಶತಿಯಲ್ಲಿ ದೇವತೆಗಳು ಮತ್ತು ಅಸುರರಿಗೆ ಯುದ್ಧ ನಡೆದಾಗ ಹೇಗೆ ಚಂಡಿಕಾದೇವಿ ದೇವತೆಗಳೆಲ್ಲರ ಒಟ್ಟು ಶಕ್ತಿಯನ್ನು ಮೈಗೊಂಡು ಎದ್ದು ಬಂದಳು, ಮತ್ತು ದೇವತಾಶಕ್ತಿಗಳ ಸಮೂಹದಿಂದ ಮೂರ್ತಿವೆತ್ತು ಬಂದ ಆ ದೇವಿಯಿಂದ ಅಸಂಖ್ಯಾತ, ಭಯಂಕರ ಅಸುರರ ಭೀಷಣ ಶಕ್ತಿ ಪರಾಭವಹೊಂದಿತು, ಎಂಬುದನ್ನು ವಿವರಿಸುತ್ತದೆ. ಶಕ್ತಿ ಪೂಜೆ ನಿಜವಾಗಿ ಜಗನ್ಮಾತೆಯ ರೂಪಿನಲ್ಲಿ ಕೇಂದ್ರೀಕರಿಸಿದ ದೈವೀಶಕ್ತಿಯ ಪ್ರಾರ್ಥನೆ.

೩.೨೬. ಮೇಲೆ ಹೇಳಿದ ಪಾಠವನ್ನು ನೀವು ನಮ್ಮ ಹಿಂದೂ ದೇಶದ ಈಗಿನ ಸ್ಥಿತಿಗೆ ಹೋಲಿಸಿದರೆ— ನಮ್ಮ ದೇಶಕ್ಕೆ, ನಮ್ಮ ಜನರಿಗೆ ಒಳ್ಳೆಯದನ್ನು ಮಾಡುವ ಉದ್ದೇಶದಿಂದ ನಾವು ನಮ್ಮಲ್ಲಿರುವ ಭೇದ ಭಾವನೆ

ಯನ್ನೆಲ್ಲಾ ತೊರೆದು, ನಮ್ಮ ಸ್ವಾರ್ಥವನ್ನು ತ್ಯಜಿಸಿ, ಎಲ್ಲರೂ ಒಗ್ಗಟ್ಟಾಗಿ ಸೇರಿ, ಒಮ್ಮನಸ್ಸಿನಿಂದ ಮುಂದಾಳುವಿನ ಕೈಕೆಳಗೆ ಅನನ್ಯ ವಿಧೇಯತೆ ಯಿಂದ ಕೆಲಸಮಾಡಿದರೆ—ಯಾವ ಶತ್ರುವಿನ ಶಕ್ತಿಯೂ ಅದೆಷ್ಟೇ ದೊಡ್ಡ ದಾಗಿರಲಿ ನಮಗೆದುರಾಗಿ ನಿಂತು ನಮ್ಮನ್ನು ಮುಟ್ಟಲಾರದು ; ಮುಟ್ಟ ಲಾಗುವುದಿಲ್ಲ. ಎಲ್ಲಾ ಕಡೆಗಳಲ್ಲೂ ನಾವೇ ಜಯಶೀಲರಾಗುವೆವು.

೩೨೭. ನಾವು ಹಿಂದೂಗಳು ಇಲ್ಲಿಯವರೆಗೆ ಒಗ್ಗಟ್ಟಾದ ಶಿಸ್ತಿನಿಂದ ಕೂಡಿದ ಸಮಾಜವಾಗಿಲ್ಲದೆ ಇರುವುದರಿಂದ ಇದುವರೆವಿಗೂ ನಾವು ದುರ್ಬಲರಾಗಿ ಅಸಹಾಯರಾಗಿದ್ದೇವೆ. ಆದ್ದರಿಂದಲೇ ಅನೇಕರಿಂದ ತುಳಿಯಲ್ಪಟ್ಟಿದ್ದೇವೆ. ಈ ಕೊರತೆಯನ್ನೇ ದೊಡ್ಡ ಗುಣವನ್ನಾಗಿ ಮಾಡಿಕೊಂಡು ನಾವು ಅಹಿಂಸಾವ್ರತರು ಎಂದು ಸಮಾಧಾನ ಹೊಂದು ತ್ತೇವೆ. ಆದರೆ ನಿಜವಾಗಿ ನಾವು ನಮ್ಮನ್ನೇ ವಂಚಿಸಿಕೊಳ್ಳುತ್ತಿದ್ದೇವೆ. ಮಹಾತ್ಮಾ ಗಾಂಧಿಯವರು ಇದನ್ನು ದುರ್ಬಲ ಅಹಿಂಸೆ ಎಂದು ಖಂಡಿಸಿ ದ್ದಾರೆ. ನಿಜವಾದ ಅಹಿಂಸೆ ಬಲಾಢ್ಯನ ಅಹಿಂಸೆ. ಶತ್ರುವಿನ ದಬ್ಬಾಳಿ ಕೆಯ ಕೃತ್ಯಗಳಿಗೆ ಪ್ರತೀಕಾರ ಮಾಡಬಲ್ಲ ಆತನನ್ನು ತುಳಿಯುವ ಶಕ್ತಿ ಇದ್ದರೂ ಅವನನ್ನು ಪ್ರೀತಿಯಿಂದಾಲಂಗಿಸುವುದು. ಇದೇ ಸ್ವಾಮಿ ವಿವೇಕಾ ನಂದರ ಅಭಿಪ್ರಾಯ. ಒಂದು ತಪ್ಪು ಅಥವಾ ಅನ್ಯಾಯದ ಸೇಡಿಗಾಗಿ ನೀನು ನಿನ್ನ ಎದುರಾಳಿಯ ಕೆನ್ನೆಗೆ ಆತನ ಒಂದು ಪೆಟ್ಟಿಗೆ ನೀನು ಎರಡನ್ನು ಕೊಡುವ ಶಕ್ತಿ ಇಲ್ಲದಿದ್ದಲ್ಲಿ ಅಥವಾ ಆತನು ನಿನ್ನನ್ನು ಕೊಲ್ಲಲು ಸಿದ್ಧನಾಗಿ ದ್ದಾಗ ನೀನು ಆತನನ್ನು ಕೊಲ್ಲಲಾರದವನಾಗಿದ್ದರೆ ವೀರನೆಂದು ಹೇಗೆ ಹೇಳಿಕೊಳ್ಳುವೆ? ಅಂತಹ ಅಹಿಂಸೆ ನಿನ್ನ ಪೌರುಷದ ಚಿಹ್ನೆಯಲ್ಲ. ಇದೇ ಹಿಂದೂ ಧರ್ಮಗ್ರಂಥಗಳ ಬೋಧನೆ.

೩೨೮. ಸ್ವಾಮಿ ವಿವೇಕಾನಂದರು ಅಮರನಾಥಯಾತ್ರೆಗೆ ಹೊರ ಡುವ ಮೊದಲು ಯಾರೋ ಅವರನ್ನು, "ಸ್ವಾಮಿಜಿ, ಶಕ್ತಿವಂತರು ದುರ್ಬಲ ರನ್ನು ತುಳಿಯುತ್ತಿದ್ದರೆ ನಾವೇನು ಮಾಡಬೇಕು?" ಎಂದು ಕೇಳಿದರು. ತಕ್ಷಣ ಸ್ವಾಮಿಜಿ "ಏಕೆ, ಬಲವಂತರಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕು" ಎಂದರು. ಇಂತಹ ಸಮಯದಲ್ಲೆ ಅವರು "ಕ್ಷಮೆಯೂ ಕೂಡ ದುರ್ಬಲ ರಾಗಿ ಸಹನೆಯಿಂದಿದ್ದರೆ ಯೋಗ್ಯವಲ್ಲ. ಹೋರಾಟ ಅದಕ್ಕಿಂತ ಮೇಲು. ಯಾವಾಗ ನೀನು ದೇವತೆಗಳ ದಂಡನ್ನೇ ಸುಲಭವಾಗಿ ಜಯಕ್ಕೆ ತರ ಬಲ್ಲೆಯೋ ಆಗ ಕ್ಷಮಿಸು. ಗೃಹಸ್ಥನಿಗೆ ಆತ್ಮರಕ್ಷಣೆ ಮುಖ್ಯ" ಎಂದರು.

೩೨೯. ಹಿಂದೂಗಳು ಜನಾಂಗವಾಗಿ ಬಾಳಲು ಶಕ್ತಿ ಸಂಗ್ರಹ ಖಂಡಿತವಾಗಿಯೂ ಅವಶ್ಯಕ. ಇದನ್ನು ಪಡೆಯಲು ಮುಖ್ಯ ಸಾಧನೆ ಐಕಮತ್ಯ. ನಮ್ಮ ಧರ್ಮದಲ್ಲಿ ಅಚಲ ನಂಬಿಕೆ ಇದ್ದರೆ ಧರ್ಮಕ್ಕಾಗಿ ಆತ್ಮಾರ್ಪಣೆಮಾಡಲೂ ಹಿಂಜರಿಯದಿದ್ದಲ್ಲಿ ಯಾರಿಗೂ ನಮ್ಮ ಧರ್ಮವನ್ನು ನಿಂದಿಸಲು, ನಮ್ಮ ವಿಗ್ರಹವನ್ನು ನಮ್ಮ ದೇವಾಲಯವನ್ನು ಭ್ರಷ್ಟಗೊಳಿಸಲು ಕೆಚ್ಚಿಲ್ಲ. ನಮ್ಮ ಹೆಂಗಸರನ್ನು ಜಾತಿಕೆಡಿಸಿ ಅವರನ್ನು ಅಸಹ್ಯವಾದ ಕ್ರೂರ ರೀತಿಯಲ್ಲಿ ಅವಮಾನ ಮಾಡುವ ಧೈರ್ಯವಿರುವುದಿಲ್ಲ. ಹಿಂದೂಗಳು ಒಗ್ಗಟ್ಟಾಗಿ ಒಮ್ಮನಸ್ಸಿನಿಂದ ನಡೆದ ಹೊರತು ಬೇರಾವ ಹಾದಿಯೂ ಇಲ್ಲ. ಧರ್ಮ, ಸಮಾಜ, ಸಂಸ್ಕೃತಿ ಮತ್ತು ಆತ್ಮರಕ್ಷಣೆಗಾಗಿ ಎಲ್ಲರೂ ತಮ್ಮ ಜಾತಿ ವೈಷಮ್ಯ ತಮ್ಮ ಅಥವಾ ತಮ್ಮ ಪಂಥದ ಸ್ವಾರ್ಥತೆಯನ್ನು ಬಿಟ್ಟು, ಶತ್ರುತ್ವ ಅಸೂಯೆಗಳನ್ನು ತೊರೆದು ಒಗ್ಗಟ್ಟಾದರೆ ಇತರ ಧರ್ಮದ ಜನರು ನಮ್ಮ ಧಾರ್ಮಿಕ ಪದ್ಧತಿಗಳನ್ನು ಬೋಧನೆಯನ್ನು ನಿಂದಿಸಲು ಹಿಂಜರಿಯುವರು.

೩೩೦. ಬಾರಾನಗರದ ಮಠದ ದಿನಗಳಲ್ಲಿ ಸ್ವಾಮಿ ವಿವೇಕಾನಂದರು ತಮ್ಮ ಗುರುಭಾಯಿಗಳಿಗೆ ಈ ಕೆಳಗಣ ದೃಷ್ಟಾಂತವನ್ನು ಹೇಳಿದರು· ಒಬ್ಬ ಜಮೀನ್ದಾರನಿಗೆ ಇಬ್ಬರು ತೋಟಗಾರರಿದ್ದರು. ಅದರಲ್ಲಿ ಒಬ್ಬನು ಮುಕ್ಕಾಲು ಕಾಲವನ್ನೆಲ್ಲಾ ಯಜಮಾನನ ಮುಂದೆ ಕೈ ಜೋಡಿಸಿ ನಿಂತು ಭಕ್ತಿಯಿಂದ ಗದ್ಗದ ಸ್ವರದಿಂದ, "ಓ! ನನ್ನ ಯಜಮಾನನ ಕಣ್ಣುಗಳು ಎಷ್ಟು ಸುಂದರವಾಗಿವೆ! ಎಂತಹ ಸುಂದರವಾದ ಮೂಗು! ಎಂತಹ ಅಂದವಾದ ರೂಪು!" ಹೀಗೆ ವರ್ಣಿಸುತ್ತಿದ್ದನು. ಇನ್ನೊಬ್ಬ ತೋಟಗಾರನು ದಿನವೆಲ್ಲಾ ತೋಟದಲ್ಲಿ ದುಡಿದು ಬಗೆಬಗೆಯ ತರಕಾರಿ, ಹಣ್ಣು, ಹೂವು ಮುಂತಾದುವನ್ನು ದಿನವಹಿ ತಂದು ಯಜಮಾನನ ಮುಂದಿಟ್ಟು ಕೈಮುಗಿದು ಹೊರಟು ಹೋಗುತ್ತಿದ್ದನು. ಇವರಿಬ್ಬರಲ್ಲಿ ಯಜಮಾನನಿಗೆ ಯಾರಿಂದ ಹೆಚ್ಚು ಸಂತೋಷವಾಯಿತು? ಇದರಂತೆಯೇ ದೇವರಿಗೂ ಕೂಡ. ಯಾರು ಎಲ್ಲಾ ಕೆಲಸವೂ ಆತನ ಪೂಜೆ ಎಂದು ತಿಳಿದು ತನ್ನ ಕರ್ತವ್ಯವನ್ನೆಲ್ಲಾ ಶ್ರದ್ಧಾಪೂರ್ವಕ ಮಾಡುವನೋ ಅಂತಹವನ ಮೇಲೆ, ಯಾರು ತನ್ನ ಕರ್ತವ್ಯವನ್ನೆಲ್ಲಾ ಅಲಕ್ಷಿಸಿ ಕೇವಲ ಶ್ಲೋಕಗಳು ಗೀತೆ ಮುಂತಾದುವನ್ನು ಹಾಡಿಕೊಂಡು ತನ್ನನ್ನು ಒಲಿಸಿಕೊಳ್ಳಲು ಯತ್ನಿಸುವನೋ ಅವನಿಗಿಂತ ಹೆಚ್ಚು ಪ್ರೀತಿ. ತಮ್ಮ

ಗುರು ಭಾಯಿಗಳನ್ನುದ್ದೇಶಿಸಿ ಸ್ವಾಮಿ ವಿವೇಕಾನಂದರು, "ಎಚ್ಚರದಿಂದಿರು ನೀನೆಲ್ಲಾದರೂ ಆ 'ಎಷ್ಟು ಸುಂದರವಾದ ಕಣ್ಣುಗಳು, ಎಷ್ಟು ನೀಟಾದ ಮೂಗು' ಎಂಬುವವರ ಗುಂಪಿಗೆ ಸೇರಿಬಿಟ್ಟೀಯೆ" ಎಂದು ಎಚ್ಚರಿಸುತ್ತಿದ್ದರು.

೩೩೧. ಆಧ್ಯಾತ್ಮಿಕತೆಯನ್ನು ಗಳಿಸುವುದೆಂದರೆ ಆತ್ಮಸಾಕ್ಷಾತ್ಕಾರ ಪಡೆಯುವುದು ಎಂದರ್ಥ. ಯಾರು ಅದನ್ನು ಹೊಂದಿದ್ದಾರೊ ಅವರು ನಿಜವಾಗಿಯೂ ಪರಿಶುದ್ಧಾತ್ಮರು. ನಿಜವಾಗಿ ನೋಡಿದರೆ ನಾವೆಲ್ಲಾ ನಾಸ್ತಿಕರು. ನಾವು ದೇವರನ್ನು ಆಂತರ್ಯದಲ್ಲೂ, ಬಾಹ್ಯದಲ್ಲೂ ನೋಡು ತ್ತಿದ್ದರೆ ಅವನು ಸರ್ವಾಂತರ್ಯಾಮಿ ಎಂಬುದು ನಮಗೆ ಖಂಡಿತವಾಗಿದ್ದರೆ ನಾವು ಹೇಗೆ ಪಾಪಕೃತ್ಯಗಳನ್ನು ಮಾಡಬಲ್ಲೆವು? ಅವನು ಸರ್ವಜ್ಞನಾದುದ ರಿಂದ ನಾವು ಯಾವ ಕೆಟ್ಟ ಯೋಚನೆ ಮಾಡಿದರೂ ಅರಿಯಬಲ್ಲನೆಂದು ಗೊತ್ತಿದ್ದರೆ ನಾವು ಪೂರ್ತಿ ಲಜ್ಜೆಯಿಂದ ಅವುಗಳನ್ನು ಬಿಟ್ಟು ದೂರವಾಗು ತ್ತಿದ್ದೆವಲ್ಲವೆ? ನಮಗೆ ಸರ್ವಶಕ್ತನಾದ ಅವನು ನಮ್ಮನ್ನು ನಮ್ಮ ಪಾಪ ಕೃತ್ಯಗಳಿಗಾಗಿ ನರಕಕ್ಕೆ ತಳ್ಳುತ್ತಾನೆಂದು ಅರಿತಿದ್ದರೆ ಆತನ ಹೆದರಿಕೆಯಿಂದ ಲಾದರೂ ಆ ಕೃತ್ಯಗಳನ್ನು ಮಾಡಲು ಹಿಂಜರಿಯುತ್ತಿದ್ದೆವಲ್ಲವೆ? ನಾವು ಅವಮಾನ, ಅಪವಾದ, ಅಥವಾ ಶಿಕ್ಷೆಗಾಗಿ, ಕೇವಲ ತೋರಿಕೆಗಾಗಿ ಮೇಲುಗಡೆ ಒಳ್ಳೆಯವರೆಂದು ತೋರ್ಪಡಿಸಿಕೊಳ್ಳಲು ಯತ್ನಿಸುತ್ತೇವೆ. ಆದರೆ ನಿಜವಾಗಿ ಅಂತಃಕರಣಪೂರ್ವಕವಾಗಿ ಅಲ್ಲ. ಧರ್ಮಾತ್ಮರಂತೆ ತೋರ್ಪಡಿಸಿಕೊಂಡು ಅಧರ್ಮ ಕೃತ್ಯಗಳನ್ನು ಮಾಡಲು ಹಿಂತೆಗೆಯುವು ದಿಲ್ಲ. ರಹಸ್ಯವಾಗಿ ಎಲ್ಲಿ ಸಿಕ್ಕಿ ಹಾಕಿಕೊಳ್ಳುತ್ತೇವೊ ಎಂಬ ಭಯದಿಂದ ಜನರ ಕಣ್ಣಿಗೆ ಕಾಣದಂತೆ ಗೋಪ್ಯವಾಗಿ ಚಾತುರ್ಯದಿಂದ ಮಾಡಲು ಯತ್ನಿಸುವರು ಯಾರು ತಾವು ನಾಸ್ತಿಕರೆಂದು ಒಪ್ಪಿಕೊಳ್ಳುವರೊ ಅವರು ಇಂತಹ ಸ್ವಭಾವದ ಜನರಿಗಿಂತ ಸಾವಿರಪಾಲು ಮೇಲು.

೩೩೨. ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಿದ್ದರು: "ನಿನಗೆ ಸಾಧ್ಯವಾದಾಗ ಇತರರಿಗೆ ಸಹಾಯಮಾಡು. ನಿನಗೆಷ್ಟಾಗುವುದೋ ಅಷ್ಟನ್ನು ಮಾಡು. ಆದರೆ ಅದರಲ್ಲಿ ನಿನ್ನ ಉದ್ದೇಶವೇನೆಂಬುದಕ್ಕೆ ಲಕ್ಷ್ಯಕೊಡು. ಅದನ್ನು ನಿನ್ನ ಸ್ವಾರ್ಥಪೂರ್ಣತೆಗಾಗಿ, ಯಾವುದೋ ಲಾಭದ ಉದ್ದೇಶಕ್ಕಾಗಿ ಮಾಡಿದರೆ ಅದರಿಂದ ನಿನಗೂ ಪ್ರಯೋಜನವಿಲ್ಲ, ನಿನ್ನಿಂದ ಮಾಡಿಸಿಕೊಂಡವರಿಗೂ ಹಿತವಿಲ್ಲ. ಅದಕ್ಕೆ ಬದಲು ನಿನ್ನ

ಉದ್ದೇಶ ನಿಸ್ವಾರ್ಥತೆಯಿಂದ ಕೂಡಿದ್ದರೆ ನಿನ್ನ ಸೇವೆಯಿಂದ ಇತರರಿಗೆ ಕ್ಷೇಮವುಂಟಾಗುವುದಲ್ಲದೆ ನಿನಗೂ ಶ್ರೇಯಸ್ಕರ. ಇದು ನೀನು ಜೀವಿಸಿರುವಷ್ಟೇ ಸತ್ಯ.

೩೩೩. ಪೂಜೆಯಲ್ಲಿ ಎರಡು ವಿಧ. ಬಾಹ್ಯ (ಸಾಂಪ್ರದಾಯಿಕ) ಮತ್ತು ಮಾನಸಿಕ. ಮೊದಲನೆಯದರಲ್ಲಿ ದೇವರ ಪಟ ಮಣ್ಣು, ಶಿಲೆ, ಲೋಹ ಅಥವಾ ಮರದ ವಿಗ್ರಹದೆದುರಿಗೆ ಅದರಲ್ಲಿ ಪ್ರಾಣಪ್ರತಿಷ್ಠೆ ಮಾಡಿ ಪೂಜೆ ಮಾಡುವುದು. ನಾವು ಮಾನವ ಜೀವಿಗಳಾದ್ದರಿಂದ ದೇವರ ಮುಂದೆ ಅರ್ಪಿಸುವುದೆಲ್ಲ ನಮ್ಮ ಜೀವನಕ್ಕೆ ಅವಶ್ಯಕವಾದ ಪದಾರ್ಥಗಳು ಅಥವಾ ಸಂತೋಷ ಕೊಡುವ ವಸ್ತುಗಳು. ಅವು ಯಾವುವೆಂದರೆ ಉದಾಹರಣೆಗೆ, ಕೈ ಕಾಲು ತೊಳೆದುಕೊಳ್ಳಲು ನೀರು, ಒಂದು ಆಸನ, ಉಡುಪು, ಅಲಂಕಾರ, ಪುಷ್ಪಮಾಲೆ, ಆಭರಣ, ಸುವಾಸನೆಯ ಹೂವು, ಶ್ರೀಗಂಧ, ಹಣ್ಣು, ಗೆಡ್ಡೆಗೆಣಸು, ಸಿಹಿತಿಂಡಿ, ಅನ್ನ, ಪೂರಿಪಲ್ಯ, ಪಾಯಸ ಅಥವಾ ಹಾಲಿನಲ್ಲಿ ಕುದಿಸಿದ ಅನ್ನ, ಕುಡಿಯುವ ನೀರು, ತಾಂಬೂಲ–ನಂತರ ಒಂದು ಹಾಸಿಗೆ, ಚಾಮರದಿಂದ ಬೀಸುವುದು, ದೇವರ ನಾಮ ಹಾಡುವುದು, ಸಂಗೀತ, ವಾದ್ಯ, ನಾಟ್ಯ, ಕರ್ಪೂರದಾರತಿ ಮುಂತಾದ ಸಂಜೆಯ ಪ್ರಾರ್ಥನೆ. ಇವುಗಳಲ್ಲಿ ಒಂದನ್ನು ಅಥವಾ ಮೇಲೆ ಹೇಳಿರುವ ಉಪಕರಣಗಳು ಇಲ್ಲದಿದ್ದರೂ ಇವುಗಳಿಗೆ ಬದಲಾಗಿ ಕೇವಲ ನೀರನ್ನು ಅರ್ಪಿಸಿಯೂ ಪೂಜೆಮಾಡಬಹುದು.

೩೩೪. ಮಾನಸಿಕ ಪೂಜೆಯಲ್ಲಿ ಈ ಸಲಕರಣೆ ಅಥವಾ ಇಷ್ಟ ದೇವತೆಯ ವಿಗ್ರಹ ಇದಾವುದರ ಅವಶ್ಯಕತೆಯೂ ಇಲ್ಲ. ಆತನ ರೂಪು ನಮ್ಮ ಹೃದಯದಲ್ಲಿ ನೆಲಸಿರುವಂತೆ ಧ್ಯಾನಮಾಡಿ ಮೇಲೆ ಹೇಳಿದ ಪೂಜಾವಸ್ತುಗಳನ್ನೆಲ್ಲಾ ದೇವತೆಗೆ ಮಾನಸಿಕವಾಗಿ ಅರ್ಪಿಸುವುದು. ಮಾನಸಿಕ ಪೂಜೆಯಲ್ಲಿ ಬ್ರಾಹ್ಮಣರು, ಚಂಡಾಲರು, ಹರಿಜನರು ಎಲ್ಲರಿಗೂ ಸಮಾನ ಹಕ್ಕಿದೆ. ಈ ಪೂಜೆಮಾಡುವಾಗ ಬಾಹ್ಯ ಶುದ್ಧಿ ಸಾಂಪ್ರದಾಯಿಕವಾದ ಮಡಿ ಕಾಲ ಸ್ಥಳ ಅಥವಾ ಯಾವ ಶಾಸ್ತ್ರೀಯ ನಿಯಮವನ್ನೂ ಅನುಸರಿಸಬೇಕಾದ ಅವಶ್ಯಕತೆ ಇಲ್ಲ. ಕೇವಲ ಮಾನಸಿಕ ತಲ್ಲೀನತೆ ಅವಶ್ಯಕ.

೩೩೫. ಎಲ್ಲಾ ಆಹಾರ ಪದಾರ್ಥಗಳೂ ಜೀವಂತ ಪ್ರಾಣಿಯ ಸಾಮಾನ್ಯ ಸ್ವತ್ತು — ಪ್ರತಿಯೊಬ್ಬರಿಗೂ ಅದರಲ್ಲಿ ಒಂದು ಭಾಗವಿದೆ.

ಇದು ಉಪನಿಷತ್ತುಗಳ ಬೋಧನೆ. ಒಬ್ಬನು ಒಂದು ತುತ್ತು ಆಹಾರ ವನ್ನು ತಿನ್ನಬೇಕಾದರೂ ಮತ್ತೊಬ್ಬನಿಂದ ಅದನ್ನು ಕಿತ್ತುಕೊಂಡು ಅವನಿಗೆ ನೋವುಂಟುಮಾಡಬೇಕು. ದೇವರಿಗೆ ಆಹಾರವನ್ನು ಮೊದಲು ಅರ್ಪಿಸದೆ ಮತ್ತು ಅತಿಥಿಗಳಿಗೆ, ಭಿಕ್ಷುಕರಿಗೆ, ಹಕ್ಕಿಗೆ ಒಂದು ತುತ್ತು ಅನ್ನವನ್ನು ಎತ್ತಿಡದೆ ಯಾರು ಕೇವಲ ತಮಗೋಸ್ಕರ ಅಡಿಗೆ ಮಾಡಿ ಕೊಂಡು ಊಟಮಾಡುತ್ತಾರೊ ಅಂತಹವರನ್ನು ನಮ್ಮ ಶಾಸ್ತ್ರಗಳು ಪಾಪಿ ಗಳೆಂದು ಕರೆಯುತ್ತವೆ. ಅಂತಹ ಆಹಾರವೂ ಪಾಪದಿಂದ ಕೂಡಿರು ವುದು. ಗೃಹಸ್ಥನು ಹಸಿದವನಿಗೆ ಆಹಾರದ ಸ್ವಲ್ಪ ಭಾಗವನ್ನು ಕೊಡದೆ ಭುಂಜಿಸಿದರೆ ಅಂಥಹವನಿಗೆ ನರಕಪ್ರಾಪ್ತಿ ಎಂದು ಶಾಸ್ತ್ರ ಹೇಳುವುದು (ಬೃಹದಾರಣ್ಯಕ ಉಪನಿಷತ್, ಅಧ್ಯಾಯ ೧. ಐದನೇ ಬ್ರಾಹ್ಮಣ, ಎರಡನೆ ಮಂತ್ರ). ಪ್ರತಿಯೊಬ್ಬರೂ ಶಕ್ತ್ಯಾನುಸಾರ ತಮ್ಮ ಕೈಲಾದಷ್ಟು ದಾನ ಮಾಡಬೇಕು.

೩೩೬. ಕೇವಲ ನಾವು, ನಮ್ಮ ಸಂಸಾರ, ನಮ್ಮ ಬಂಧುಬಳಗದ ಕ್ಷೇಮಲಾಭದ ದೃಷ್ಟಿಯಿಂದ ಮಾಡಿದ ಯಾವ ಪೂಜೆಯೂ ಧರ್ಮವೆನಿಸು ವುದಿಲ್ಲ. ಕೇವಲ ಪ್ರಾಪಂಚಿಕ ವ್ಯವಹಾರವಾಗುವುದು. ಹೆಂಡತಿ ಮಕ್ಕಳು ಬಂಧುಗಳ ವ್ಯಾಮೋಹವೇ ಮಾಯೆ. ಅದು ಪ್ರಾಪಂಚಿಕತೆಗೆ ಸಂಬಂಧ ಪಟ್ಟಿದೆ. ಎಲ್ಲಾ ಜೀವಿಗಳಲ್ಲೂ ಪ್ರೀತಿ ಇದ್ದರೆ ಅದೀಗ ಪ್ರೇಮ, ದಯೆ, ಸಹಾನುಭೂತಿ. ಅದರಂತೆಯೆ ಯಾವ ಸಾಧನೆ, ಪೂಜೆ, ಕರ್ಮವನ್ನು ಈ ಜನ್ಮ ಅಥವಾ ಮುಂದಿನ ಜನ್ಮದ ಕ್ಷೇಮಸಾಧನೆಗಾಗಿ ಮಾಡಿದರೆ ಅದು ಸ್ವಾರ್ಥಕರ್ಮ. ಅದು ಧರ್ಮ ಅಥವಾ ಆಧ್ಯಾತ್ಮಿಕತೆಯಲ್ಲ. ಆದರೆ ಅದೇ ಸ್ವಾರ್ಥ ಕೃತ್ಯವನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಎಲ್ಲಾ ಜೀವಿಗಳ ಹಿತಚಿಂತನೆಗಾಗಿ ಮಾಡಿದರೆ, ಎಲ್ಲರೂ ನಮ್ಮ ಪುಣ್ಯಕ್ಕೆ ಭಾಗಿಗಳೆಂದು ಭಾವಿಸಿದರೆ, ಅದು ನಮಗೂ ಇತರರಿಗೂ ಸಾವಿರದಷ್ಟು ಫಲ ಕೊಡು ವುದು. ಕರುಣೆಯೆ ಅವತರಿಸಿ ಬಂದ ಬುದ್ಧದೇವನು, "ಈ ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಮೋಕ್ಷ ದೊರೆತ ಹೊರತು ನನಗೆ ಮುಕ್ತಿ ಬೇಕಾಗಿಲ್ಲ" ಎಂದು ಸಾರಿದನು. ಎಂತಹ ಉನ್ನತ ಆದರ್ಶ.

೩೩೭. ನೀನು ಇತರರಿಗಾಗಿ ನಿಸ್ವಾರ್ಥದಿಂದ ಕೆಲಸಮಾಡುತ್ತ ಮನಸ್ಸಿನಲ್ಲೇ ಗುಟ್ಟಾಗಿ ಸಾವಿರದಷ್ಟು ಪ್ರತಿಫಲಹೊಂದುವ ಅಭಿಲಾಷೆ ಯಿದ್ದರೆ ಅದು ಎಂದಿಗೂ ನಿಷ್ಕಾಮ, ಆಶಾರಹಿತ ಕರ್ಮವಲ್ಲ. ಅದೂ

ಒಂದು ಭಾಗವನ್ನು ಮಾಡಿ ಸಾವಿರದಷ್ಟು ಫಲ ಪಡೆಯಬೇಕೆಂಬ ಆಸೆಯೂ ಒಂದೇ. ಇದು ಹೇಗಿದೆ ಎಂದರೆ, ಹತ್ತುರೂಪಾಯಿನ ನೋಟನ್ನು ನೂರು ರೂಪಾಯಿನ ನೋಟುಗಳಾಗಿ ಮಾರ್ಪಾಡು ಮಾಡುತ್ತೇನೆಂಬ ವಂಚಕರ ಮಾತಿಗೆ ಮರುಳಾದ ಮೂರ್ಖರಂತೆ. ಅಥವಾ ಚಿನ್ನದ ನಾಣ್ಯಗಳು ಅಥವಾ ಒಡವೆಗಳನ್ನು ಅವುಗಳ ನೂರರಷ್ಟು ಹೆಚ್ಚು ತೂಕ ಬರುವಹಾಗೆ ಮಾಡುತ್ತಾರೆಂಬ ಆಸೆಯಿಂದ ಕೊಟ್ಟು ಎಲ್ಲವನ್ನೂ ಈ ವ್ಯವಹಾರದಲ್ಲಿ ಕಳೆದುಕೊಂಡವರ ಪಾಡಿನಂತಿದೆ.

೩೩೮. ಶ್ರೀ ರಾಮಕೃಷ್ಣರು ಸರ್ವಧರ್ಮ ಸಮನ್ವಯಾಮೂರ್ತಿಯಾಗಿದ್ದಂತೆ ಜ್ಞಾನ, ಭಕ್ತಿ, ಕರ್ಮ ಮತ್ತು ಯೋಗವೆಂಬ ಚತುರ್ಯೋಗ ಸಮುಚ್ಚಯದಿಂದ ಕೂಡಿ ಪರಿಪೂರ್ಣರಾಗಿ ದೇದೀಪ್ಯಮಾನರಾಗಿದ್ದರು. ಒಬ್ಬ ಪರಿಪೂರ್ಣವಾಗಿ ಸರ್ವಕಾರ್ಯನಿಪುಣನಾಗಬೇಕಾದರೆ ಇದೊಂದೇ ಮಾರ್ಗ. ಇಂತಹ ಜೀವಜ್ಯೋತಿಯಿಂದ ಬೆಳಗಿದ ವಿವೇಕಾನಂದರು ಈ ನಾಲ್ಕು ಬಗೆಯ ಯೋಗಗಳನ್ನೂ ಏಕಕಾಲದಲ್ಲಿ ಅಭ್ಯಸಿಸಿ ಈ ಮಹಾ ಸತ್ಯವನ್ನು ಉದ್ಘೋಷಿಸಿದರು. ಈ ಸಾಧನೆಯ ಹಾದಿಯನ್ನೇ ಅವರು ಸ್ಥಾಪಿಸಿದ ಶ್ರೀ ರಾಮಕೃಷ್ಣಮಠ ಮತ್ತು ಸಂಸ್ಥೆಗಳ ಆದರ್ಶವಾಗಿರುವಂತೆ ಮಾಡಿದರು. ಈ ಮೇಧಾವಿಯಿಂದ ನಿರ್ಮಾಣವಾದ ರಾಮಕೃಷ್ಣಮಠ ಮತ್ತು ಸಂಸ್ಥೆಗಳ ಚಿಹ್ನೆಯಲ್ಲಿ ಈ ಭಾವನೆ ಸುಂದರವಾಗಿ ನಿರೂಪಿತವಾಗಿದೆ. ಅವರ ವ್ಯಾಖ್ಯಾನದಂತೆಯೇ ಕೆಳಗೆ ಅದನ್ನು ನಕಲುಮಾಡಿದೆ.

೩೩೯. ಈ ಚಿತ್ರದಲ್ಲಿ ವಿಸ್ತಾರವಾದ ಸರೋವರದ ಜಲದಲ್ಲಿ ತರಂಗಮಾಲೆ ಕರ್ಮವನ್ನು ಸೂಚಿಸುತ್ತದೆ. ತಾವರೆ ಭಕ್ತಿಯನ್ನೂ, ಮೂಡುತ್ತಿರುವ ಸೂರ್ಯನು ಜ್ಞಾನವನ್ನೂ ಸೂಚಿಸುವುವು. ಸುತ್ತ ಬಳಸಿರುವ ಸರ್ಪ ಜಾಗ್ರತವಾದ ಕುಂಡಲಿನಿ ಶಕ್ತಿಯನ್ನೂ, ಹಂಸ ಪರಮಾತ್ಮನನ್ನೂ ಸೂಚಿಸುವುವು. ಯಾವಾಗ ಯೋಗ ಜ್ಞಾನ, ಭಕ್ತಿ ಕರ್ಮದೊಡನೆ ಐಕ್ಯವಾಗುವುದೋ ಆಗ ಪರಮಾತ್ಮನ ಸಾಕ್ಷಾತ್ಕಾರ ಮೂಡುವುದೆಂಬ ಭಾವನೆಯನ್ನು ಈ ಚಿತ್ರ ಸೂಚಿಸುವುದು.



೩೪೦. ಆತ್ಮ ಸಾಕ್ಷಾತ್ಕಾರವೆಂದರೆ ಬ್ರಹ್ಮನನ್ನು ಕೇವಲ ನಮ್ಮ

ಆತ್ಮನಲ್ಲಿ ನೋಡಿದರೆ ಆಯಿತೆಂಬ ಅರ್ಥವಲ್ಲ. ಎಲ್ಲಾ ಜೀವಿಗಳಲ್ಲೂ ಬ್ರಹ್ಮನನ್ನು ನೋಡಬೇಕು. ಉಪನಿಷತ್ತುಗಳ ಪ್ರಕಾರ ಬ್ರಹ್ಮನನ್ನು ಎಲ್ಲೆಲ್ಲಿಯೂ, ನಮ್ಮ ಬಾಹ್ಯ ಆಂತರ್ಯಗಳೆಲ್ಲದರಲ್ಲಿಯೂ ನೋಡಿದರೆ ಅದು ಪರಮಾತ್ಮನ ಸಾಕ್ಷಾತ್ಕಾರ ಅಥವಾ ಮುಕ್ತಿಯ ಚಿಹ್ನೆ ಎಂದು ಹೇಳುವುದು. ನಾವು ಇದರ ಪ್ರತ್ಯಕ್ಷ ಪ್ರಮಾಣವನ್ನು ಶ್ರೀ ಚೈತನ್ಯ ಮತ್ತು ಶ್ರೀ ರಾಮಕೃಷ್ಣರ ಜೀವನದಲ್ಲಿ ನೋಡಬಹುದು. ಈ ಜೀವಬ್ರಹ್ಮರ ಐಕ್ಯತೆಯ ಸಿದ್ಧಾಂತ ಬಹು ವರ್ಷಗಳಿಂದಲೂ ಅರಣ್ಯ ಗುಡ್ಡ ಕಾಡುಗಳಲ್ಲಿ ವಾಸಿಸುತ್ತಿದ್ದ ಯೋಗಿಗಳು, ಋಷಿವರ್ಯರು, ಕೆಲವು ಸಾಧಕರು ಇವರಿಗೆ ಮಾತ್ರ ಮೀಸಲಾಗಿತ್ತು; ಅಥವಾ ಶಾಸ್ತ್ರಗಳ ಹಾಳೆಗಳಿಗೆ ಮೀಸಲಾಗಿ ತತ್ತ್ವಶಾಸ್ತ್ರದ ಪಾಂಡಿತ್ಯಪೂರ್ವಕ ಸಂಭಾಷಣೆ ಅಥವಾ ತರ್ಕವಾಗಿತ್ತು. ಸ್ವಾಮಿ ವಿವೇಕಾನಂದರು ಶ್ರೀ ರಾಮಕೃಷ್ಣರ ಇಂಗಿತದಿಂದ ಹೇಗೆ ಈ ದೊಡ್ಡ ಸತ್ಯವು ವ್ಯವಹಾರದೃಷ್ಟಿಯಿಂದ ಗೃಹಸ್ಥ ಮತ್ತು ಸನ್ಯಾಸಿಗಳ ನಿತ್ಯ ಜೀವನದಲ್ಲಿಯೂ ಭೇದಭಾವವಿಲ್ಲದೆ ಅನ್ವಯಿಸಬಹುದೆಂದು ಅರಿತಿದ್ದರು. ಆದ್ದರಿಂದಲೇ ಅವರು ಎಲ್ಲಾ ಜೀವಿಗಳಿಗೂ ಸೇವೆಮಾಡುವುದರಿಂದ ಅವರಲ್ಲಿರುವ ನಾರಾಯಣನನ್ನು ಸೇವೆಮಾಡಿದಂತಾಗುವುದೆಂದು ಜಗತ್ತಿಗೆಲ್ಲಾ ಸಾರಿದರು. ಸಾಧನೆಯಿಂದ ಜೀವ ಮತ್ತು ಬ್ರಹ್ಮನ ಐಕ್ಯ. ವೇದಾಂತ ಸಿದ್ಧಾಂತವನ್ನು ಪ್ರತ್ಯಕ್ಷ ನೋಡಬಹುದು, ಜನತಾಸೇವೆಗಾಗಿ ಅನ್ವಯಿಸಬಹುದೆಂದೇ ಒತ್ತಿಹೇಳಿದರು. "ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯಚ" ಎಂಬ ಸಂದೇಶ ಪರಸ್ಪರ ವಿರುದ್ಧವಲ್ಲ, ಸಹಾಯಕ ಎಂಬ ಸಂದೇಶವನ್ನು ಜಗತ್ತಿಗೆ ಸಾರುವುದಕ್ಕೆ ಶ್ರೀ ರಾಮಕೃಷ್ಣ ಮಠ ಮತ್ತು ಸಂಘವನ್ನು ವಿವೇಕಾನಂದರು ಸ್ಥಾಪಿಸಿದರು.

೩೪೧. ಸ್ವಾಮಿ ವಿವೇಕಾನಂದರಿಂದ ಆರಂಭವಾದ ಈ ನರನಾರಾಯಣ ಸೇವಾಸಿದ್ಧಾಂತ ಸಂಪೂರ್ಣ ಹೊಸದು. ಇದು ಬೌದ್ಧರ ಕಾಲದ ಭಿಕ್ಷುಗಳ ಜನತಾಸೇವೆಗಿಂತ ಅಥವಾ ಮಧ್ಯಯುಗದ ರೋಮನ್ ಕ್ಯಾಥೊಲಿಕ್ ಪಾದ್ರಿಗಳ ಸೇವೆಗಿಂತ ಸಂಪೂರ್ಣವಾಗಿ ಬೇರೆ. ಬೌದ್ಧ ಭಿಕ್ಷುಗಳು ನರಳುತ್ತಿರುವ ಜನರಿಗೆ ಕರುಣೆ ಮತ್ತು ಸಹಾನುಭೂತಿಯಿಂದ ಪ್ರೇರಿತರಾಗಿ ಸೇವೆ ಮಾಡುತ್ತಿದ್ದರು. ನಿರ್ವಾಣಕ್ಕೆ ಇದರಿಂದ ಸಹಾಯವಾಗುವುದೆಂದು ಭಾವಿಸಿದ್ದರು. ರೋಮನ್ ಕ್ಯಾಥೊಲಿಕ್ ಜನರು ಮಾಡುತ್ತಿದ್ದ ಈ ಬಗೆಯ ಸೇವೆಯೂ ಕರುಣೆ, ಸಹಾನುಭೂತಿಯಿಂದ ಕೂಡಿದ್ದು.

ಆದರೆ ಅಂತಹ ಸೇವಾಕ್ರಮದಲ್ಲಿ ಸೇವ್ಯ–ಸೇವಕ ಭಾವನೆಯಿಂದ ಪಾರಾಗುವುದು ಅಶಕ್ಯ. ಯಾರು ಈ ರೀತಿ ಸೇವೆ ಮಾಡುವರೊ ಅವರು ಉಚ್ಚ ಸ್ಥಾನದಲ್ಲಿದ್ದು ತಮ್ಮಿಂದ ಸೇವೆ ಪಡೆದವರು ತಮಗೆ ಕೃತಜ್ಞರಾಗಿರುವುದು ಅವರ ಕರ್ತವ್ಯವೆಂಬ ಭಾವನೆ ಹೊಂದಿರುತ್ತಾರೆ. ಆದರೆ ನರಳುತ್ತಿರುವ ನಾರಾಯಣ ಮತ್ತು ದರಿದ್ರ ನಾರಾಯಣ ಸೇವೆ (ಸ್ವಾಮಿಜಿಯಿಂದ ಬಂದ ಮಾತು)– ಇದು ಉಪನಿಷತ್ತಿನ ಅದ್ವೈತ ಭಾವನೆಯಮೇಲೆ ನಿಂತಿದೆ. ಕೊಡುವವನಿಗೂ, ತೆಗೆದುಕೊಳ್ಳುವವನಿಗೂ ಏನೊಂದೂ ವ್ಯತ್ಯಾಸವಿಲ್ಲ. ಏಕೆಂದರೆ ಅಂತರಾತ್ಮನ ದೃಷ್ಟಿಯ ಪ್ರಕಾರ ಅವರಿಬ್ಬರೂ ಒಂದೇ ಎಂದು ಅವರು ಸಾರಿದ್ದಾರೆ. ಅದೂ ಅಲ್ಲದೆ ತೆಗೆದುಕೊಂಡವರು ದಾನಿಗೆ ಒಂದು ಅವಕಾಶ ಕಲ್ಪಿಸಿಕೊಟ್ಟಿದ್ದಲ್ಲದೆ ನಾರಾಯಣನೆಂದು ಭಾವಿಸಿ ಸೇವಿಸುವ ಭಾಗ್ಯ ಕೊಟ್ಟಿದ್ದಕ್ಕಾಗಿ ದಾನಿಗಳೇ ಅವರಿಗೆ ಕೃತಜ್ಞರಾಗಿರಬೇಕು. ಸ್ವಾಮಿ ವಿವೇಕಾನಂದರು, "ದಾನಿ ಬಾಗಿ ಪೂಜೆ ಮಾಡಲಿ, ಸ್ವೀಕರಿಸುವವನು ನಿಂತು ಅವಕಾಶ ಕೊಡಲಿ"— ಎಂದರು. ಹಿಂದಿನ ಮತ್ತು ಈಗಿನ ಭಾವನೆಗಳಿಗೆ ಎಷ್ಟೊಂದು ಅಂತರವಿದೆ!

೩೪೨. ದೇವ ಅಥವಾ ದೇವತೆಯನ್ನು ಜಡವಾದ, ಅಚೇತನವಾದ ವಸ್ತುವಿನಲ್ಲಿ ಎಂದರೆ ಮಣ್ಣು, ಮರ, ಲೋಹ, ಶಿಲೆಯ ವಿಗ್ರಹ ಅಥವಾ ಪಠ ಇವುಗಳಲ್ಲಿ ವಾಸಿಸುವ ಪರಮಾತ್ಮನೆಂದು ಪೂಜಿಸಬಲ್ಲೆವಾದರೆ, ದೇವರ ಅತ್ಯಂತ ಮಹತ್ವದ ಸೃಷ್ಟಿಯಾದ ಜೀವಂತ ಮನುಷ್ಯನನ್ನು ಏಕೆ ಪೂಜಿಸಬಾರದು? ಮಾನವ ಪೂಜೆ ಎಂದರೆ ಕೇವಲ ಆತನ ಸ್ಥೂಲ ದೇಹದ ಪೂಜೆಯಲ್ಲ. ಅವನ ಅಂತರ್ಯದೊಳಗಿರುವ ಆತ್ಮನ ಪೂಜೆ. ನನ್ನಲ್ಲಿ ಆತ್ಮವಾಗಿರುವ ಆ ನಾರಾಯಣನೇ ಎಲ್ಲಾ ಸ್ತ್ರೀಪುರುಷರ ಅಂತರ್ಯದಲ್ಲೂ ಇರುವನೆಂದೂ ಅಜ್ಞಾನಿಯ, ನಿರ್ಗತಿಕನ, ರೋಗಿಯ ರೂಪದಲ್ಲಿ ನನ್ನ ಮುಂದಿರುವನೆಂದೂ ಭಾವಿಸಿ ಅವರನ್ನು ಏಕ ರೀತಿಯಾಗಿ ಭಕ್ತಿ ಮತ್ತು ಜಾಗರೂಕತೆಯಿಂದ ಸೇವಿಸಿ ಅವರಿಗೆ ಆಹಾರ, ಬಟ್ಟೆ, ಔಷಧಿಯನ್ನು ಕೊಟ್ಟು ಶುಶ್ರೂಷೆ ಮಾಡುವುದು ಅಕ್ಷರಶಃ ಮನಃ ಪೂರ್ವಕವಾದ ಮಾನವ ಪೂಜೆ. ಇತರ ದೇವದೇವಿಯರ ಪೂಜೆಯಂತೆ ಈ ಪೂಜೆಯಲ್ಲೂ ಆತ್ಮನ ವಿಷಯದಲ್ಲಿ ಭೇದಭಾವನೆಯಿದ್ದರೆ ಎಲ್ಲವೂ ವ್ಯರ್ಥವಾಗುವುದು. ಶಾಸ್ತ್ರಗಳೂ ಕೂಡ "ಶಿವನನ್ನು ಶಿವನಾಗಿ ಪೂಜಿಸು" "ದೇವನನ್ನು ನೀನು ದೇವನಾಗಿ ಪೂಜಿಸು" ಎಂದು ಸಾರುವುದು.

೩೪೩. ಸ್ವಾಮಿ ವಿವೇಕಾನಂದರಿಂದ ಸ್ಥಾಪಿತವಾದ ನರನಾರಾಯಣ ಪೂಜೆ ಸ್ವಾರ್ಥರಹಿತವಾದ, ನಿಷ್ಕಾಮ ಕರ್ಮದಿಂದ ನಮ್ಮ ಹೃದಯದ ಪರಿಶುದ್ಧತೆಗಾಗಿ ಇತರರಿಗೆ ಒಳ್ಳೆಯದನ್ನು ಮಾಡುವುದೂ ಅಲ್ಲದೆ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಹೊಸದಾದ ಜ್ಞಾನ ಭಕ್ತಿ ಮತ್ತು ಕರ್ಮಗಳ ಅದ್ಭುತ ಸಮನ್ವಯದ ಸಾಧನೆಯಾಗಿದೆ. ಅದು ಹೀಗೆ ಇರುವುದರಿಂದಲೇ ನೇರವಾಗಿ ಮುಕ್ತಿಲಾಭಕ್ಕೆ ಒಯ್ಯುವುದು. ಏಕೆಂದರೆ ಈ ಹಾದಿಯಲ್ಲಿ ಮಾನವನು ಜ್ಞಾನಯೋಗದ ಮೂಲಕ ದೇವರನ್ನು ಕೇವಲ ತನ್ನ ಆತ್ಮನೆಂದು ಭಾವಿಸಿ, ರಾಜಯೋಗದ ಮೂಲಕ ದೇವರು ತನ್ನ ಅಂತರಾತ್ಮನೆಂದು ಧ್ಯಾನಿಸಿ, ಭಕ್ತಿಯೋಗದ ಮೂಲಕ ಆತನಲ್ಲಿ ಶ್ರದ್ಧಾಪೂರ್ವಕ ಭಕ್ತಿಯಿಂದ ಆತನನ್ನು ಪ್ರೀತಿಸಿ, ಕರ್ಮಯೋಗದ ಮೂಲಕ ಅವನನ್ನು ನಿಷ್ಕಾಮ ದೃಷ್ಟಿಯಿಂದ ನಿಸ್ವಾರ್ಥದಿಂದ ಸೇವಿಸಬೇಕು.

೩೪೪. ಸ್ವಾಮಿ ವಿವೇಕಾನಂದರ ಈ ನರನಾರಾಯಣ ಸಿದ್ಧಾಂತ ಮಾನವನನ್ನು ಮಹತ್ತಾದ ಗೌರವಕ್ಕೆ ಅರ್ಹನನ್ನಾಗಿ ಮಾಡಿ ಮುಕ್ತಿ ಹೊಂದುವ ಸಾಧನವಾಗುವುದಲ್ಲದೆ ಇದಕ್ಕಿಂತ ಅಪೂರ್ವವಾದೊಂದು ವೈಶಿಷ್ಟ್ಯವನ್ನು ಹೊಂದಿದೆ. ಅದರಂತೆ ಮಾನವನು ಕೇವಲ ಒಬ್ಬ ತುಚ್ಛ, ಭ್ರಷ್ಟನಾದ ಕನಿಕರ ಪಡುವ ವಸ್ತುವಲ್ಲ. ಆತನು ಉತ್ಕೃಷ್ಟವಾದ ಗೌರವಕ್ಕೆ ಅರ್ಹನಾದ ಶಿವ. ಮುಕ್ಕಾಲುಪಾಲು ಎಲ್ಲಾ ಧರ್ಮದ ಬೋಧಕರು ಭೂಮಿಯಲ್ಲಿ ದೇವರ ಪ್ರತಿನಿಧಿಗಳೆಂದು ತೋರ್ಪಡಿಸಿಕೊಂಡು ದೇವರನ್ನು ಸ್ವರ್ಗದಲ್ಲಿ ರತ್ನಸಿಂಹಾಸನದ ಮೇಲೆ ಕುಳ್ಳಿರಿಸಿ ಆತನು ಒಬ್ಬ ಕಠಿಣ ನ್ಯಾಯಾಧೀಶನೆಂದೂ, ಯಾರು ಪಾಪದಲ್ಲಿ ಹುಟ್ಟಿರುವರೋ ಅವರ ಪಾಪಕ್ಕೆ ನರಕದಲ್ಲಿ ನಿರಂತರ ಶಿಕ್ಷೆ ವಿಧಿಸುತ್ತಾನೆಂದೂ ನಂಬಿರುತ್ತಾರೆ. ಆ ಸ್ವರ್ಗದ ಬೀಗದ ಕೈ ಈ ಪಾದ್ರಿಗಳ ವಶದಲ್ಲಿರುವುದರಿಂದ ಈ ಪಾದ್ರಿಗಳು ಎಲ್ಲಾ ಪಾಪಿಗಳು ಮತ್ತು ಪಶ್ಚಾತ್ತಾಪ ಹೊಂದಿದವರೂ ಈ ಭೂಮಿಯಲ್ಲಿ ದೇವರ ಪ್ರತಿನಿಧಿಗಳನ್ನು ತೃಪ್ತಿಪಡಿಸುವುದರಿಂದ ಅವರಿಗೆ ಬೆಲೆಯಾದ ವಸ್ತುಗಳನ್ನು ಕೊಡುವುದರಿಂದ ಮಾತ್ರ ಅವರು ಸ್ವರ್ಗ ಪ್ರವೇಶಿಸುವ ಹಕ್ಕಿದೆ, ಇದು ದೇವರ ನಿಯಮ ಎಂದು ಪ್ರಚಾರಮಾಡಿದ್ದಾರೆ.

೩೪೫. ಈ ಮೃತ್ಯುಸಮಾನವಾದ ಸಿದ್ಧಾಂತಕ್ಕೆ ಎದುರಾಗಿ ಸ್ವಾಮಿ ವಿವೇಕಾನಂದರು, ಚಿಕಾಗೊ ನಗರದ ಸರ್ವ ಧರ್ಮ ಸಮ್ಮೇಳನದ ಮುಂದೆ ನಿಂತು, "ಅಮೃತ ಪುತ್ರರೆ! ಯಾರು ನಿಮ್ಮನ್ನು ಪಾಪಿಗಳೆಂದು ಕರೆಯು

ವರು? ನೀವು ಅಮೃತ ಪುತ್ರರು. ನಿಮ್ಮನ್ನು ಪಾಪಿಗಳೆಂದು ಕರೆಯು ವುದೇ ಒಂದು ಘೋರ ಪಾತಕ. ಆ ಪರಮಾತ್ಮನನ್ನು ಅರಿತು, ಹುಟ್ಟು ಸಾವುಗಳ ಅನಂತಸಾಗರದಿಂದ ಪಾರಾಗಿ, ಇದರ ಹೊರತು ಮೋಕ್ಷಕ್ಕೆ ಬೇರೆ ಹಾದಿಯಿಲ್ಲ!" ಎಂದು ಘೋಷಿಸಿದ್ದಾರೆ. ಎಂತಹ ಅಮೃತ ಮಯವಾದ ಭರವಸೆಯ ಸಂದೇಶ! ಆತ್ಮನ ದೃಷ್ಟಿಯ ಪ್ರಕಾರ ನೀಚ ಕುಲದವರು, ಅಸಹಾಯರು, ಕೋಪಿಷ್ಟರು, "ಹರಿಜನರು" ಎಲ್ಲರೂ ಜೀವಂತ ಶಿವರು. ನಮ್ಮ ಸೇವೆ ಮತ್ತು ಪೂಜೆಗೆ ಅರ್ಹರು. ಈ ಸಂತೋಷಕರವಾದ ಸಮಾಚಾರ ವಿವೇಕಾನಂದರಿಂದ ಮೊದಲ ಬಾರಿ ಅಧಿ ಕಾರ ವಾಣಿಯಿಂದ ಘೋಷಿಸಲ್ಪಟ್ಟಿತು. ಅವರ ಸ್ಫೂರ್ತಿ, ಜ್ಯೋತಿಯ ಮೂಲವೇ ಶ್ರೀ ರಾಮಕೃಷ್ಣರು.

೩೪೬. ಈಗಿನ ಕಾಲದಲ್ಲಿ ಜಗತ್ತಿನಲ್ಲೆಲ್ಲಾ ಒಬ್ಬನು ಮತ್ತೊಬ್ಬ ನನ್ನು ನಿಷ್ಕರುಣೆಯಿಂದ ಕೊಲ್ಲುತ್ತಿರುವುದನ್ನು, ಒಂದು ಜನಾಂಗ ಮತ್ತೊಂದು ಜನಾಂಗವನ್ನು ಅಂತಃಕರಣ ರಹಿತವಾಗಿ ಕೇವಲ ತನ್ನ ಸ್ವಾರ್ಥತೆಯ ತೃಪ್ತಿಗಾಗಿ ನಾಶಮಾಡುತ್ತಿರುವುದನ್ನು ನೋಡುತ್ತಿರುವೆವು. ಈ ಯುಗದಲ್ಲಿ ಮನುಷ್ಯ ಮನುಷ್ಯರಿಗೆ ಅನಾದರ–ಜನತೆಯ ಅವ ಮಾನ–ಮನುಷ್ಯ ಮನುಷ್ಯರಲ್ಲಿ ದುಷ್ಟ ಮನೋಭಾವನೆ, ಮನುಷ್ಯನ ದಬ್ಬಾಳಿಕೆ, ಮತ್ತು ಕೆಟ್ಟನಡತೆ ಎಲ್ಲವೂ ವಿಷಮಾವಸ್ಥೆಗೆ ಹೋಗಿವೆ. ರಕ್ತ ದಾಹದಲ್ಲಿ ಮಾನವನು ಭಯಂಕರವಾದ ಕಾಡುಜಂತುಗಳನ್ನು ಕೂಡ ಮೀರಿಸಿದ್ದಾನೆ. ಹೆಚ್ಚು ಮುಂದುವರಿದಿರುವ ದೇಶಗಳೆಂದು ಕರೆಯಲ್ಪಡುವ ಶಕ್ತಿಯುತ ಪೌರಾತ್ಯ ಮತ್ತು ಪಾಶ್ಚಾತ್ಯ ಜನಾಂಗಗಳು ದೇಶಭಕ್ತಿ ಮತ್ತು ಜನಾಂಗದ ಅಭಿವೃದ್ಧಿ ಎಂಬ ಪವಿತ್ರ ಹೆಸರಿನಲ್ಲಿ ಶಾಂತಿ ಸ್ಥಾಪನೆ, ನಾಗರಿಕತೆ ಹರಡಬೇಕೆಂಬ ನೆವದಿಂದ ದುರ್ಬಲ ಮತ್ತು ಹಿಂದುಳಿದಿರುವ ದೇಶಗಳ ಆಸ್ತಿ, ಐಶ್ವರ್ಯವನ್ನೆಲ್ಲಾ ಸೂರೆಮಾಡಿ ಅವರನ್ನು ನಾಶ ಮಾಡು ತ್ತಿರುವರು. ಪಾಶ್ಚಾತ್ಯರ ದೃಷ್ಟಿಯಲ್ಲಿ ಬಿಳಿಯವರಾಗದೆ, ಕ್ರೈಸ್ತರಾಗದೆ ಇರುವವರೆಲ್ಲ ಮನುಷ್ಯರಲ್ಲ, ಅನಾಗರಿಕ ಕಾಡುಮನುಷ್ಯರು! ಹೌದು, ದೇವರ ಪ್ರತಿನಿಧಿಗಳಾದ ಬಿಳಿ ದೇಶಪ್ರಭುಗಳ ಭೋಗ ಮತ್ತು ನಿರ್ಮಾಣ ಕ್ಕಾಗಿ ದೇವರು ಅವರನ್ನು ಸೃಷ್ಟಿಸಿದ್ದಾನೆ! ಇಂತಹ ಅಸಹ್ಯ ದೃಷ್ಟಿ, ಭೋಗವಸ್ತುವಿನ ಒಡೆತನ ಹೊಂದಬೇಕೆಂದು ತಮ್ಮಲ್ಲೇ ಪೈಪೋಟಿ, ಇವುಗಳೇ ನಮ್ಮ ಪೀಳಿಗೆಯ, ಜಗತ್ತಿನ ಕ್ರಾಂತಿಯಲ್ಲಿ ಕೊನೆಕೊಂಡ

ಎರಡು ಮಹಾ ಯುದ್ಧಗಳ ಮೂಲ ಕಾರಣಗಳು.

೩೪೭. ಭರತ ಖಂಡದಲ್ಲಿ ಕೂಡ, ಧರ್ಮದ ಹೆಸರಿನಲ್ಲಿ ಸಮಾಜ, ಜಾತಿ, ಅಧಿಕಾರವರ್ಗ–ಅಥವಾ ಧಾರ್ಮಿಕ ಕಾರ್ಯಗಳಲ್ಲಿ ಪ್ರತ್ಯೇಕವಾದ ಹಕ್ಕು ಬಾಧ್ಯತೆ ಮತ್ತು ಭೇದ ಭಾವನೆ, ಅಸ್ಪರ್ಶ ಪದ್ಧತಿ– ಇವುಗಳೇ ಪರಸ್ಪರ ವೈಷಮ್ಯಕ್ಕೆ ಕಾರಣ. ಇವು ತಡೆಯಿಲ್ಲದ ಅಧಿಕಾರ ನಡೆಸುತ್ತಾ ಜನಾಂಗದ ಜೀವನವನ್ನು ಬಗೆ ಬಗೆಯ ದುಃಖ, ಸಂಕಟಕ್ಕೆ ಒಳಗು ಮಾಡಿ ನಿರ್ಗತಿಕರಾಗುವಂತೆ ಮಾಡುತ್ತಿವೆ. ಪಾಶ್ಚಾತ್ಯರಲ್ಲಾಗಲಿ, ಪೌರಾತ್ಯದಲ್ಲಾಗಲಿ ಈ ಕ್ರೂರ ಭಾವನೆ, ಜನಾಂಗದ ಕಡೆ ತಿರಸ್ಕರಣೀಯ ಮನೋಭಾವನೆ ಇವುಗಳಿಂದ ಉತ್ಪನ್ನವಾದ ಆಸುರೀ ನಡೆವಳಿಕೆ ಇವುಗಳೇ ಪ್ರಪಂಚದಲ್ಲಿ ಮಿತಿಮೀರಿರುವ ಅಸೂಯೆ, ವೈಷಮ್ಯಗಳಿಗೆ ಮೂಲಕಾರಣ. ಸ್ವಾಮಿಜಿಯಿಂದ ಸ್ಥಾಪಿತವಾದ ನರರೂಪಿನಲ್ಲಿರುವ ನಾರಾಯಣನ ಸೇವೆಯೊಂದೆ ಈ ಕಠಿಣ ಸಮಸ್ಯೆಯ ಯೋಗ್ಯ ಪರಿಹಾರ ಮಾರ್ಗ. ಈ ದೃಷ್ಟಿಯಿಂದಲೇ ಸ್ವಾಮಿ ವಿವೇಕಾನಂದರು ಇಡೀ ಮಾನವ ಜನಾಂಗಕ್ಕೇ ಈ ಸರ್ವೋತ್ಕೃಷ್ಟ ಆದರ್ಶವನ್ನು, ಸಾರ್ವತ್ರಿಕ ಸಮಾನತ್ವ, ಸತ್ಯ ಮತ್ತು ಸಮಭಾವ ಹೊಂದಿರುವ ಭಾವನೆಯನ್ನು ಮುಂದಿಟ್ಟಿದ್ದಾರೆ. ಜನರು ತಮ್ಮ ಜೀವನವನ್ನು ಎಲ್ಲಾ ಕಾರ್ಯಕ್ಷೇತ್ರಗಳಲ್ಲೂ, ಧರ್ಮ, ಸಮಾಜ, ರಾಜಕಾರ್ಯ, ತಮ್ಮ ನಿತ್ಯ ಜೀವನದ ಸಣ್ಣ ಕೆಲಸದಲ್ಲೂ ಈ ಆದರ್ಶವನ್ನು ಅಳವಡಿಸಿಕೊಂಡು ಮಾರ್ಪಡಿಸಿಕೊಳ್ಳಬೇಕು. ಈ ಉಚ್ಚ ಆದರ್ಶವನ್ನು ಜಗತ್ತಿಗೆಲ್ಲಾ ಸಾರುವುದಕ್ಕೆ ಮತ್ತು ಅದನ್ನು ಹೇಗೆ ಸಾಧಿಸುವುದೆಂಬುದನ್ನು ಸೂಚಿಸುವುದೇ ಸ್ವಾಮಿ ವಿವೇಕಾನಂದರಿಂದ ಸ್ಥಾಪಿತವಾದ ಶ್ರೀರಾಮಕೃಷ್ಣ ಸಂಸ್ಥೆಯ ಗುರಿ.

೩೪೮. ದೇವರು ಒಂದರಲ್ಲೇ ನೈಸರ್ಗಿಕ ನಿಯಮ ಮತ್ತು ಪ್ರೇಮ ಸ್ವರೂಪನಾಗಿರುವನು. ಜಗನ್ಮಾತೆಯ ಸ್ವರೂಪಿನಲ್ಲಿ ಪ್ರೇಮ ಸ್ವರೂಪಿಣಿ ಮತ್ತು ದಯಾಮಯಿಯಾಗಿರುವಳು. ಜಗತ್ಪಿತನಂತೆ ನ್ಯಾಯವಿಧಾತನಾಗಿರುವನು. ಅವನು ಕರ್ಮ ಫಲದಾತ. ಕಪಾಲಮೋಚಕನಂತೆ, ಶರಣಾಗತ ಭಕ್ತರ ಸಮಸ್ತ ಬಂಧನವನ್ನು ಪರಿಹರಿಸುವನು.

೩೪೯. ಗಾಳಿ ಮೋಡವನ್ನು ಒಂದುಗೂಡಿಸುತ್ತದೆ. ಮತ್ತೆ ಅದೇ ಅವೆಲ್ಲಾ ಚದುರುವಂತೆ ಓಡಿಸುತ್ತದೆ. ಮೋಡಗಳು ಸೂರ್ಯನನ್ನು ಮರೆ ಮಾಡುವುವು. ಹೀಗೆಯೇ ಮಾಯೆ ಆತ್ಮನನ್ನು ಮರೆಮಾಡುವುದು-

ಮನಸ್ಸು ಬಂಧನವನ್ನು ನಿರ್ಮಿಸುವುದು. ಅದೇ ಮನಸ್ಸು ಬಂಧನವನ್ನು ಕಳಚುವುದು. ಯಾವಾಗ ನಮ್ಮಲ್ಲಿರುವ ಮಾಯೆಯನ್ನು ನಾಶಮಾಡು ವೆವೋ ಆಗ ಪರಮಾತ್ಮ ಸ್ವಸ್ವರೂಪದಿಂದ ಪ್ರಕಾಶಿಸುವನು. ಮಾಯೆ ಕ್ಷಣ ದಲ್ಲಿ ಪಲಾಯನವಾಗುವ ಒಂದು ಅಭಾಸಮಾತ್ರ. ನಿತ್ಯ ಸತ್ಯ, ಸ್ವಯಂ ಪ್ರಕಾಶವಾದ ಆತ್ಮನನ್ನು ಅದು ಹೇಗೆ ತೋರಬಲ್ಲುದು?

೩೫೦. ಸ್ವಾಮಿ ವಿವೇಕಾನಂದರು ಹೀಗೆಂದಿರುವರು: "ಶ್ರೀ ರಾಮ ಕೃಷ್ಣರ ಸರ್ವಧರ್ಮ ಸಮನ್ವಯತೆ ಮತ್ತು ವಿಶ್ವಧರ್ಮದ ಭಾವನೆ ಜಗತ್ತಿ ಗೆಲ್ಲಾ ಒಂದು ಶಿಕ್ಷಣದಂತೆ ಮತ್ತು ಆದರ್ಶದಂತೆ ಪ್ರಚಾರವಾಗಬೇಕಲ್ಲದೆ ನಮ್ಮ ನಿತ್ಯಜೀವನದಲ್ಲಿಯೂ ಕೂಡ ಅನುಷ್ಠಾನಕ್ಕೆ ಬರಬೇಕು. ನಾವು ನಮ್ಮ ಜೀವನದಲ್ಲಿ ಹಿಂದೂಗಳ ಆಧ್ಯಾತ್ಮಿಕತೆ, ಬೌದ್ಧರ ಪ್ರಾಣಿದಯೆ, ಕ್ರೈಸ್ತರ ವ್ಯವಸ್ಥಿತ ಕಾರ್ಯಕ್ರಮ, ಮಹಮ್ಮದೀಯರ ಸಹೋದರಭಾವನೆ ಇವು ಗಳನ್ನು ಪ್ರತಿಬಿಂಬಿಸಬೇಕು. ಈ ಭಾವನೆಯನ್ನು ಮುಂದಿಟ್ಟುಕೊಂಡು ನಾವು ವಿಶ್ವಧರ್ಮವನ್ನು ಜಾತಿ ಮತ ವರ್ಣದ ಭಾವನೆಯಿಲ್ಲದೆ ಇಡೀ ಮಾನವ ಜನಾಂಗಕ್ಕೇ ಹರಡಬೇಕು.

೩೫೧. ಹಿಂದೂ ಧರ್ಮದಿಂದ ಬೌದ್ಧಧರ್ಮ ಹುಟ್ಟಿತು. ಬೌದ್ಧ ಧರ್ಮದಿಂದ ಕ್ರೈಸ್ತ ಧರ್ಮ, ಕ್ರೈಸ್ತ ಧರ್ಮದಿಂದ ಮಹಮ್ಮದೀಯ ಧರ್ಮ ಹುಟ್ಟಿತು. ಈ ಯುಗದಲ್ಲಿ ಹಿಂದೂ ದೇಶದಲ್ಲಿ ಈ ನಾಲ್ಕು ಧರ್ಮಗಳೂ ಸಂಧಿಸಿ ಒಂದಾಗಿ ಇಡೀ ಸಮನ್ವಯತೆಯನ್ನು ಸ್ಥಾಪಿಸಬೇಕು. ಈ ಧ್ಯೇಯ ಸಾಧನೆಗಾಗಿ—ತನ್ನ ಮಕ್ಕಳ ಮೊಮ್ಮಕ್ಕಳ ಜಗಳ ಮತ್ತು ಕದನವನ್ನು ಬಗೆಹರಿಸಿ ಭೂಮಿಯಲ್ಲಿ ಮತ್ತೆ ಶಾಂತಿ, ಸಮಾಧಾನ ವನ್ನುಂಟುಮಾಡಲು ಶ್ರೀ ರಾಮಕೃಷ್ಣರು ಜನ್ಮ ತಾಳಿದರು, ಎಂದು ಸ್ವಾಮಿ ವಿವೇಕಾನಂದರು ಹೇಳುವರು.

೩೫೨. ನಿನ್ನ ಜೀವನದಲ್ಲಿ ಸಾಕಾದಷ್ಟು ಆಧ್ಯಾತ್ಮಿಕ ಸಲಹೆ ಯನ್ನು ಕೇಳಿರುವೆ, ಸಾಕಷ್ಟು ಶಿಕ್ಷಣ ಹೊಂದಿರುವೆ; ಅನೇಕ ಆಧ್ಯಾತ್ಮಿಕ ನಿಯಮಗಳನ್ನೂ ತಿಳಿದಿರುವೆ. ಖಂಡಿತವಾಗಿಯೂ ಇತರರಿಗೂ ಅದನ್ನು ಕೊಡಬಲ್ಲೆ. ಆದರೆ ನೀನು ಆ ಬೋಧನೆಯ ಸ್ವಲ್ಪವನ್ನಾದರೂ ಅನು ಷ್ಠಾನ ಮಾಡದೆ ಹೋದರೆ ನಿನ್ನ ಮಾತಿಗೆ ಯಾರು ಕಿವಿಗೊಡುವರು? ಸಿದ್ಧಾಂತಕ್ಕೂ, ಅನುಷ್ಠಾನಕ್ಕೂ ಸಾಗರದಷ್ಟು ಅಂತರವಿದೆ. ನಮ್ಮ ಆತ್ಮೋದ್ಧಾರಕ್ಕಾಗಿ ಹೊರೆ ಧರ್ಮಗ್ರಂಥಗಳು, ಧರ್ಮೋಪದೇಶಗಳನ್ನು

ಓದಬೇಕಾದ್ದಿಲ್ಲ; ಅದರ ಅವಶ್ಯಕತೆಯೂ ಇಲ್ಲ. ನೀನು ನಿನ್ನ ಜೀವನ ದಲ್ಲಿ ಮುಕ್ತಿಯ ಹಾದಿಯಲ್ಲಿರುವ ಒಂದು ಸಣ್ಣ ನಿಯಮವನ್ನು ಅನುಷ್ಠಾನ ಮಾಡಿದರೂ ನೀನು ಅನುಗ್ರಹೀತನಾಗುವೆ; ಜನರಿಗೂ ಅದ ರಿಂದ ಬಹಳ ಪ್ರಯೋಜನವಾಗುವುದು. ಜಗನ್ಮಾತೆಯ ಕೃಪೆಯಿಂದ ಭವಸಾಗರವನ್ನು ದಾಟಿ ಸಚ್ಚಿದಾನಂದ ಸಾಮ್ರಾಜ್ಯಕ್ಕೆ ತೆರಳುವೆ!

೩೫೩. ಸಹೋದರರೇ! ನಾವು ತಾಯ ಬಸುರಿಂದ ಬೆತ್ತಲೆ, ಒಂಟಿಯಾಗಿ ಬಂದೆವು. ಈ ಜಗತ್ತಿನಿಂದಲೂ ಒಂಟಿಯಾಗಿಯೇ ತೆರಳು ತ್ತೇವೆ. ಯಾರಿಗೆ ನಮ್ಮನ್ನು ಬಿಟ್ಟು ಒಂದು ಘಳಿಗೆಯೂ ಇರಲಾಗುತ್ತಿರ ಲಿಲ್ಲವೋ, ನಾವೂ ಹಾಗೆಯೇ ಇದ್ದೆವೋ, ಅಂತಹ ಅತ್ಯಂತ ಪ್ರೀತಿ ಪಾತ್ರರೂ ನಮ್ಮ ಸಂಗಡ ಬರುವುದಿಲ್ಲ. ನಾವು ಪ್ರೀತಿಸಿದ ಯಾವ ವಸ್ತುವನ್ನಾಗಲಿ ನಮ್ಮೊಡನೆ ಒಯ್ಯಲಾರೆವು. ಹೊಸದಾಗಿ ಹುಟ್ಟಿದ ಶಿಶು ವಿನ ಕ್ರಂದನ ಅದರ ಜೀವ ಚಿಹ್ನೆಯನ್ನು ತೋರಿಸಿತು. ಇತರರು ಸಂತಸ ದಿಂದ ಸ್ವಾಗತಿಸಿದರು. ನೀನು ತೆರಳುವಾಗ ಇತರರು ಅಳಲಿ; ನೀನು ಶಾಂತಿ, ಸಮಾಧಾನಗಳಿಂದ ಯಾರೂ ಅರಿಯದ ನಿನ್ನ ಅಂತರಾಳದಿಂದ ಚಿಮ್ಮುವ ಸ್ವರ್ಗೀಯವಾದ ಆನಂದ ಸಂತೋಷಗಳಿಂದ ನಿನ್ನ ಮುಖಾರ ವಿಂದ ತುಂಬಿ ತುಳುಕುತ್ತಿರುವಾಗ ಹೊರಡು. ಆಗ ನೀನು ನಿಜವಾಗಿ ನಿನ್ನ ಜೀವನವನ್ನು ಕಳೆದೆ. ಇಲ್ಲಿ ನಿನಗೆ ಜೀವನದ ಆಕರ್ಷಣೆಯಾಗಲಿ ಮರಣದ ಅಂಜಿಕೆಯಾಗಲಿ ಇರುವುದಿಲ್ಲ. ನೀನು ಜೀವನ ಮರಣ ಎರಡನ್ನೂ ಜಯಿಸಿರುವೆ. ಜನನ ಮರಣ, ಬಂಧನ ಮುಕ್ತಿ, ಬೆಳಕು ಕತ್ತಲೆ, ಒಳ್ಳೆಯದು ಕೆಟ್ಟದು, ಸುಖದುಃಖಗಳ ಆಚೆ, ದೂರ ಬಹು ದೂರ, ಈ ಎಲ್ಲಾ ದ್ವೈತಗಳಿಂದಲೂ ಆಚೆ ಇರುವ ರಾಜ್ಯದಲ್ಲಿ ನೀನಿರುವೆ. ಅದು ನೀನು ನಿನ್ನನ್ನು ಅರಿತುಕೊಳ್ಳುವ, ನಿನ್ನ ನಿಜಸ್ವರೂಪವನ್ನು ತಿಳಿದು ಕೊಳ್ಳುವ ಪ್ರದೇಶ. ಅದು ನಿರಂತರ ಶಾಂತಿಮಯವಾದ ಅಖಂಡ ಸಚ್ಚಿ ದಾನಂದವಿರುವ ರಾಜ್ಯ. ನೀನು ಜೀವನದ ಪರಮೋತ್ಕೃಷ್ಟವಾದ ಗುರಿ ಯನ್ನು ಸೇರಲಿಚ್ಛಿಸಿದರೆ ಎಲ್ಲಾ ಮಾಯೆಯನ್ನೂ ಅಸತ್ಯವಸ್ತುಗಳ ವ್ಯಾಮೋಹವನ್ನೂ ಕಳೆದು ಪರಿಪೂರ್ಣತೆ ಪಡೆದಿರುವ ಗುರುಗಳ, ಸತ್ಯ ಶೋಧಕರ ಬೋಧನೆಯನ್ನು ಅನುಸರಿಸು. ಅವರ ಭಾವದೊಂದಿಗೆ ಶ್ರುತಿ ಕೂಡಿಸು. ನಿನ್ನ ಇಷ್ಟದೇವತೆಯ ಪ್ರತ್ಯಕ್ಷಪ್ರತಿನಿಧಿಯಂತೆ ಇರುವ ಸದ್ಗುರುವಿನ ಸಹಾಯದಿಂದ ನೀನು ಗುರಿಯನ್ನು ಸುಲಭವಾಗಿ ಸೇರ

ಬಹುದು. ಇದೇ ಅಖಂಡ ಸತ್ಯ. ಎಲ್ಲಾ ಧರ್ಮಗ್ರಂಥಗಳ ಬೋಧನೆಯ ಸಾರ— ದೇವರೊಬ್ಬನೇ ಸತ್ಯ, ಉಳಿದುದೆಲ್ಲವೂ ಮಿಥ್ಯೆ! ತತ್ವಮಸಿ! ನೀನು ಅದೇ ಆಗಿರುವೆ! ಇದೇ ಪರಮ ಸತ್ಯ ಪ್ರಕೃತಿ ನಿಯಮಾನುಸಾರ ಪ್ರತಿಯೊಬ್ಬ ಸ್ತ್ರೀ ಪುರುಷರಿಗೂ ಈ ಜನ್ಮದಲ್ಲಿ ಅಥವಾ ಹಲವು ಜನ್ಮಗಳಾದ ಮೇಲೆ, ಖಂಡಿತ ಪ್ರಾಪ್ತವಾಗಲೇಬೇಕು.

ನನ್ನ ಪ್ರಿಯತಮ ಸ್ವರೂಪವೆ ಆತ್ಮ! ದೇವರ ಕೃಪೆಯಿಂದ ನೀನು ಸತ್ಯ ಸಾಕ್ಷಾತ್ಕಾರವನ್ನು ಈ ಕ್ಷಣವೆ ಹೊಂದುವಂತಾಗಲಿ! ಈ ಕ್ಷಣದಲ್ಲೆ ನೀನು ಎಂದೆಂದೂ ಮುಕ್ತಿಯನ್ನು ಹೊಂದು! ಇದೇ ನನ್ನ ಏಕಾಂತಿಕ ಪ್ರಾರ್ಥನೆ. ಭಗವಂತನು ನಿಮಗೆ ಕಲ್ಯಾಣವನ್ನುಂಟುಮಾಡಲಿ.

ಓಂ! ಶಾಂತಿ! ಶಾಂತಿ! ಶಾಂತಿ! ಓಂ!

ನೀನು ಶಾಂತಿಯಲ್ಲಿ ಸಮಾಶ್ರಿತನಾಗು. ನನ್ನಲ್ಲಿ ಶಾಂತಿ ಓತಪ್ರೋತ<br>ವಾಗಲಿ. ಒಳಗೆ ಹೊರಗೆ ಸರ್ವತ್ರ ಸರ್ವ ಪ್ರಾಣಿಗಳಲ್ಲಿಯೂ<br>ಶಾಂತಿ ವಿರಾಜಮಾನವಾಗಲಿ. ಪೃಥ್ವಿ ಶಾಂತಿಮಯ<br>ವಾಗಲಿ. ಅಸೀಮ ಅಂತರಿಕ್ಷದಲ್ಲಿ ಸಮಸ್ತ<br>ಲೋಕಕ್ಕೂ ಶಾಂತಿ ಪರಿವ್ಯಾಪ್ತವಾಗಲಿ!<br>ಓಂ, ಓಂ, ಓಂ!



ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚ್‌ನಲ್ಲಿ ಮುದ್ರಿಸಲ್ಪಟ್ಟಿತು.

# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು, ಮೈಸೂರು.

| | | | |
|---|---|---|---|
| ಶ್ರೀ ರಾಮಕೃಷ್ಣ ಉಪದೇಶಾಮೃತ | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪತ್ರಮಾಲೆ | ೩ | ೦ | ೦ |
| ಶ್ರೀ ಶಾರದಾದೇವಿ | ೨ | ೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ | ೨ | ೮ | ೦ |
| ಶ್ರೀ ರಾಮಕೃಷ್ಣ | ೦ | ೧೨ | ೦ |
| ರಾಜಯೋಗ | ೨ | ೧೦ | ೦ |
| ಕರ್ಮಯೋಗ | ೧ | ೮ | ೦ |
| ಭಕ್ತಿಯೋಗ | ೧ | ೦ | ೦ |
| ತ್ರಿವೇಣೀ (ಶ್ರೀ ರಾಮಕೃಷ್ಣ, ಸ್ವಾಮಿ ವಿವೇಕಾನಂದ, ಶಾರದಾದೇವಿ ಸಂಕ್ಷಿಪ್ತ ಜೀವನ) | ೧ | ೦ | ೦ |
| ಶ್ರೀ ಗುರುದೇವರ ವಚನ | ೧ | ೦ | ೦ |
| ಬ್ರಹ್ಮಾನಂದ ವಚನ ಸುಧೆ | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ | ೧ | ೪ | ೦ |
| ಪರಿವ್ರಾಜಕ | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ | ೧ | ೪ | ೦ |
| ವಿದ್ಯಾಭ್ಯಾಸ | ೦ | ೧೦ | ೦ |
| ಹಿಂದೂ ಧರ್ಮಸಾರ | ೦ | ೧೦ | ೦ |
| ವರ್ತಮಾನ ಭಾರತ | ೦ | ೧೦ | ೦ |
| ವಿವೇಕವಾಣಿ | ೦ | ೧೦ | ೦ |
| ನನ್ನ ಗುರುದೇವ | ೦ | ೮ | ೦ |
| ಚಿಕಾಗೋ ಉಪನ್ಯಾಸ | ೦ | ೬ | ೦ |
| ಮುಮುಕ್ಷು ಲಕ್ಷಣ | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | ೦ | ೪ | ೦ |
| ಈಶ್ವರಾನುರಾಗ | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | ೦ | ೪ | ೦ |
| ಭಾರತ ಮಹಿಳೆ | ೦ | ೪ | ೦ |
| ಕರ್ಮರಹಸ್ಯ | ೦ | ೪ | ೦ |
| ಸಾಧನ | ೦ | ೪ | ೦ |
| ಅಮರನಾಥ ಯಾತ್ರೆ | ೧ | ೦ | ೦ |
| ಅನುಷ್ಠಾನ ವೇದಾಂತ | ೧ | ೦ | ೦ |
| ಪರಮಾರ್ಥ ಪ್ರಸಂಗ | ೨ | ೦ | ೦ |

# ಬ್ರಹ್ಮಾನಂದ ವಚನಸುಧೆ

ಶ್ರೀ ರಾಮಕೃಷ್ಣಪರಹಂಸರು ಕಠೋರ ಸಾಧನೆಯಿಂದ ಗಳಿಸಿದ ಸಾಕ್ಷಾತ್ಕಾರ ಅಮೃತ ಹಲವು ನಾಲಿಗಳ ಮೂಲಕ ಭವ ಜೀವಿಗಳ ಉದ್ಧಾರಕ್ಕೆ ಹರಿದುಬಂದಿದೆ. ಅದರಲ್ಲಿ ಪರಮಹಂಸರ ಮಾನಸಿಕ ಪುತ್ರ ರಂತೆ ಇದ್ದ ಬ್ರಹ್ಮಾನಂದರು ಒಂದು ಅತಿ ಮುಖ್ಯನಾಲೆ. ಎಷ್ಟೋ ಜೀವಿಗಳು ಇವರ ಸಂಪರ್ಕದಿಂದ ಉದ್ಧಾರವಾಗಿರುವರು.

* * *

ಆಧ್ಯಾತ್ಮಿಕ ಜೀವನದಲ್ಲಿ ನಡೆಯಬೇಕೆಂದು ಬಯಸುವವರಿಗೆ ಇದೊಂದು ಪಠ್ಯಪುಸ್ತಕದಂತೆ ಇದೆ. ಸಾಧಕರ ಜೀವನದಲ್ಲಿ ಬರುವ ಹಲವಾರು ಅಂಜಿಕೆ ಆತಂಕಗಳು, ಅವುಗಳನ್ನು ಹೇಗೆ ಎದುರಿಸಿ ಪಾರಾಗು ವುದೆಂಬುದನ್ನು ವಿವರಿಸುವರು. ಈ ಗ್ರಂಥದಲ್ಲಿರುವುದೆಲ್ಲ ಅವರ ಅನುಭವದ ಮಾತು. ಆತ್ಮಸಾಕ್ಷಾತ್ಕಾರವನ್ನು ಪಡೆದ ಪೂಜ್ಯತಮ ವ್ಯಕ್ತಿಯ ಹೃದಯಾಂತರಾಳದಿಂದ ಜಿನುಗಿಬಂದ ವಚನಸುಧೆ ಇದು.

**ಬೆಲೆ: ರೂ. ೧-೪-೦**